|| ಶ್ರೀಃ ||

ಶ್ರೀ ಜಯಚಾಮರಾಜೇಂದ್ರಗ್ರಂಥರತ್ನಮಾಲಾ

(ಸಂ. ೩೨)

# ಶ್ರೀ ಶಿವರಹಸ್ಯ

ಸಂಪುಟ ೨೫

ಅನುವಾದಕ

ಆಸ್ಥಾನವಿದ್ವಾನ್ ಎಚ್. ಗಂಗಾಧರಶಾಸ್ತ್ರೀ

ಧರ್ಮಪ್ರಕಾಶ ಡಿ. ಬನುಮಯ್ಯನವರ ಹೈಸ್ಕೂಲು ಅಧ್ಯಾಪಕ

ಮೈಸೂರು

ಮೈಸೂರು

ಪಂಚಾಚಾರ್ಯ ಎಲೆಕ್ಟ್ರಿಕ್ ಪ್ರೆಸ್

1951

॥ ಶ್ರೀಃ ॥

ಶ್ರೀ ಜಯಚಾಮರಾಜೇಂದ್ರಗ್ರಂಥರತ್ನಮಾಲಾ

(ಸಂ. ೩೨)

# ಶ್ರೀ ಶಿವರಹಸ್ಯ

ಸಂಪುಟ ೨೫



ಅನುವಾದಕ

ಆಸ್ಥಾನವಿದ್ವಾನ್ ಎಚ್. ಗಂಗಾಧರಶಾಸ್ತ್ರೀ
ಧರ್ಮಪ್ರಕಾಶ ಡಿ. ಬನುಮಯ್ಯನವರ ಹೈಸ್ಕೂಲು ಅಧ್ಯಾಪಕ
ಮೈಸೂರು




ಮೈಸೂರು
ಶ್ರೀ ಪಂಚಾಚಾರ್ಯ ಎಲೆಕ್ಟ್ರಿಕ್ ಪ್ರೆಸ್
1951

# ಮುನ್ನುಡಿ

ಈ ಗ್ರಂಥಭಾಗದಲ್ಲಿ ಶ್ರೀ ಶಿವರಹಸ್ಯದ ಹತ್ತನೆಯ ಅಂಶದ ಪೂರ್ವಾರ್ಧವು ಆರಂಭವಾಗಿ, ಅದರಲ್ಲಿ ಮೊದಲನೆಯ ಮೂವತ್ತು ಅಧ್ಯಾಯಗಳು ಮಾತ್ರ ಪರಿವರ್ತಿತಗಳಾಗಿ, ಅಚ್ಚಾಗಿವೆ. ಸಾಮಾನ್ಯವಾಗಿ ಈ ಅಧ್ಯಾಯಗಳಲ್ಲೆಲ್ಲಾ ಭಸ್ಮ ಮತ್ತು ರುದ್ರಾಕ್ಷಗಳ ಮಹಿಮೆಯೇ ಹೆಚ್ಚಾಗಿ ವರ್ಣಿತವಾಗಿದೆ. ಕೊನೆಯ ಕೆಲವು ಅಧ್ಯಾಯಗಳು ಮಾತ್ರ ಶ್ರೀರುದ್ರಮಂತ್ರದ ಮಹಿಮೆಯನ್ನು ವಿಸ್ತರಿಸಲು ಹೊರಟಿವೆ. "ದೇವತಾರಾಧನೆಗೆ ಅಥವಾ ನಿತ್ಯಕರ್ಮಾನುಷ್ಠಾನಕ್ಕೆ, ಮಾನಸಿಕವಾದ ಶುದ್ಧಿಯು ಹೇಗೆ ಅತ್ಯಾವಶ್ಯಕವೋ ಹಾಗೆ ಶಾರೀರಕಶುದ್ಧಿಯೂ ಅಗತ್ಯ. ಪಂಚಭೂತಗಳ ಸಮ್ಮೇಳನದಿಂದ ಉತ್ಪನ್ನವಾಗಿ, ಕ್ಷಣಿಕವೆನಿಸಿ, ನಾನಾವಿಧವಾದ ಮಲರಾಶಿಗೆ ಆಶ್ರಯವೆನಿಸಿದ ಈ ಮಾನವದೇಹವು ಶುದ್ಧಿಯಾಗುವುದೆಂದರೆ ಅಷ್ಟುಸುಲಭವಲ್ಲ. ಹಾಗೆಯೇ ಅನಾದಿಸಿದ್ಧವಾದ ಜನ್ಮಪರಂಪರೆಗಳಿಂದ, ಸಂಚಿತವಾಗಿ ಬಂದಿರುವ ಪಾಪರಾಶಿಯಿಂದ ಕೂಡಿದ ಜೀವನು ಇಂತಹ ದೇಹದಲ್ಲಿ ಅಡಗಿರುವಾಗ, ಅದನ್ನು ಶುದ್ಧಿಗೊಳಿಸುವುದಕ್ಕೆ ಸಾಮಾನ್ಯವಸ್ತುವಿನಿಂದ ಸಾಧ್ಯವಾಗಲಾರದು. ಆದರೂ ಈಶ್ವರಾಜ್ಞೆಯಿಂದ ಕೆಲವು ಪವಿತ್ರವಸ್ತುಗಳು ಅಂದರೆ ಮತ್ತೊಂದು ಅಪವಿತ್ರವಸ್ತುವನ್ನೂ ಪವಿತ್ರಗೊಳಿಸುವಂತಹವುಗಳು, ಭೂಲೋಕದಲ್ಲಿ ಕಂಡುಬರುತ್ತಿವೆ. ಅವುಗಳಲ್ಲಿ ಭಸ್ಮ ಮತ್ತು ರುದ್ರಾಕ್ಷಿಗಳು ಮುಖ್ಯವಾದುವು. ಸಾಕ್ಷಾತ್ಪರಶಿವನು ಪಾಪಿಗಳನ್ನು ಉದ್ಧರಿಸಲೋಸುಗವೇ ತನ್ನ ಕಣ್ಣೀರಿನಿಂದ ರುದ್ರಾಕ್ಷವೃಕ್ಷಗಳನ್ನು ಸೃಷ್ಟಿ ಮಾಡಿರುವನು. ಆದರೆ ಅವುಗಳನ್ನು ಯಾವುದೋ ಒಂದು ರೀತಿಯಿಂದ ಧರಿಸಿದರೆ ಜೀವಿಯು ಶುದ್ಧನೆನಿಸಲಾರನು. ಧಾರಣೆಯಿಂದಲೇ ಒಂದು ಸಿದ್ಧಿಯನ್ನು ಪಡೆಯಬೇಕು. ನಿಯಮಬದ್ಧನಾಗಿದ್ದು ಅವುಗಳನ್ನು ಮಂತ್ರಪೂತಗಳನ್ನಾಗಿ ಮಾಡಿ ಮಂತ್ರವತ್ತಾಗಿ ಧರಿಸುವುದೇ ಸರಿಯಾದ ಧಾರಣೆ. ಕೇವಲ ಅಜ್ಞಾನದಿಂದ ಅಥವಾ ಮೂಢಭಕ್ತಿಯಿಂದ ಭಸ್ಮರುದ್ರಾಕ್ಷಗಳನ್ನು ಧರಿಸಿದವನೂ ಈಶ್ವರಾನುಗ್ರಹಕ್ಕೆ ಪಾತ್ರನಾಗಬಹುದು. ಅದು ಅಷ್ಟು ದೊಡ್ಡದಲ್ಲ. ನಿಯಮದಿಂದ ಅವನ್ನು ಧರಿಸಿ ಸಿದ್ಧಿಪಡೆದವನು ಈಶ್ವರನಿಗೆ ಸಮನಾಗಿ ಪ್ರಪಂಚವನ್ನೇ ನಡುಗಿಸಬಲ್ಲನು" ಎಂಬ

ಈ ಅಭಿಪ್ರಾಯವನ್ನು ಮಂಕಣನೆಂಬ ಮಹರ್ಷಿಯ ಇತಿಹಾಸದಿಂದ ಇಲ್ಲಿ ಸ್ಪಷ್ಟ ಪಡಿಸಿರುವರು. ಇದೇ ಸಂದರ್ಭದಲ್ಲಿ ಭಸ್ಮರುದ್ರಾಕ್ಷಿಗಳನ್ನು ಧರಿಸದವರು ಕೇವಲ ಪಾಪಿಗಳೆಂದೂ ಅಲ್ಲಲ್ಲಿ ನಿರೂಪಿಸಿರುವರು. ಶೈವಧರ್ಮಾವಲಂಬಿಗಳಿಗೆ ಅನುಕೂಲ ವಾಗುವಂತೆ, ಭಸ್ಮರುದ್ರಾಕ್ಷಧಾರಣೆಯ ವಿಧಿ, ಅದಕ್ಕೆ ಉಪಯೋಗಿಸುವಂತಹ ಮಂತ್ರಗಳ ಆನುಪೂರ್ವಿ, ಭಸ್ಮಾರ್ಥವಾಗಿ ಮಾಡಬೇಕಾದ ಶಿರೋವ್ರತಾಂಗವಾದ ಹೋಮಕ್ರಮ ಇವೆಲ್ಲವೂ ಸ್ಪಷ್ಟವಾಗಿ ಇಲ್ಲಿ ನಿರೂಪಿತಗಳಾಗಿವೆ. ಯಜುರ್ವೇದದ ನಾಲ್ಕನೆಯ ಕಾಂಡದ, ಐದನೆಯ ಪ್ರಶ್ನೆಯಲ್ಲಿ ಕಂಡುಬರುವ ಶ್ರೀ ರುದ್ರಾಧ್ಯಾಯದ ಮಹಿಮೆಯ ವಿಚಾರವಾಗಿ ಅನೇಕ ಶ್ಲೋಕಗಳು ಇಲ್ಲಿ ಕಂಡುಬರುತ್ತಿವೆ. ಅದಕ್ಕೆ ಶತರುದ್ರೀಯವೆಂಬ ಹೆಸರು ಹೇಗೆ ಬಂದಿತು ಎಂಬುದನ್ನು ಸ್ಪಷ್ಟಗೊಳಿಸಿ, ಆ ಮಂತ್ರಗಳಿಗೆಲ್ಲಾ ಋಷಿದೇವತಾಛಂದಸ್ಸುಗಳನ್ನು ತಿಳಿಸಿರುವರು.

ಇಲ್ಲಿ ಉಕ್ತವಾಗಿರುವ ಋಷಿ, ದೇವತಾ, ಛಂದೋನಾಮಗಳು ಕೆಲವು ಕಡೆ ಗಳಲ್ಲಿ ಮಾತ್ರ ಇತರ ಗ್ರಂಥಗಳಲ್ಲಿ ಹೇಳಿರುವುದಕ್ಕಿಂತ ಭಿನ್ನವಾಗಿವೆ. ನಮಕ, ಚಮಕಾಧ್ಯಾಯಗಳ ಆವೃತ್ತಿ ಸಂಖ್ಯಾಭೇದದಿಂದ, ರುದ್ರ, ರುದ್ರೈಕಾದಶೀ, ಶ್ರೀರುದ್ರ-ಮಹಾರುದ್ರ-ಅತಿರುದ್ರ ಎಂಬ ಹೆಸರುಗಳನ್ನು ಪಡೆದು ಈ ಎಲ್ಲವೂ ಪರಮೇಶ್ವರನಿಗೆ ತೃಪ್ತಿಕರಗಳಾಗಿವೆ ಎಂಬುದನ್ನು ಇಲ್ಲಿ ವಿಶದಪಡಿಸಿರುವರು. ಈ ರೀತಿ ನೂರು ರುದ್ರಮಂತ್ರಗಳಿಂದ ಕೂಡಿದ ರುದ್ರಾಧ್ಯಾಯವನ್ನು, ಜಪ, ಪಾರಾಯಣ, ಹೋಮ, ಅಭಿಷೇಕ ಇತ್ಯಾದಿ ಶಿವಪ್ರೀತಿಕರಗಳಾದ ವ್ರತಾದಿಗಳಿಗೆ ಉಪಯೋಗಿಸಬಹುದು. ಆದರಲ್ಲಿಯೂ ರುದ್ರಾಧ್ಯಾಯಪಠನಪೂರ್ವಕವಾಗಿ ಮಾಡುವ ಅಭಿಷೇಕವೇ ಹೆಚ್ಚು ಶಿವ ತೃಪ್ತಿಕರವಾದದ್ದು ಎಂಬುದನ್ನು

ಪೂಜಾಯಾ ಅಧಿಕೋ ಹೋಮೋ ಹೋಮಾತ್ತರ್ಪಣಮುತ್ತಮಂ ।
ತರ್ಪಣಾಚ್ಚ ಜಪಃ ಶ್ರೇಷ್ಠಃ ಅಭಿಷೇಕಃ ಪರೋ ಜಪಾತ್ ॥

ಎಂಬ ಶ್ಲೋಕದಿಂದ ಸಿದ್ಧಾಂತಪಡಿಸಿರುತ್ತಾರೆ. ಇದೇ ರೀತಿ ರುದ್ರಾಭಿಷೇಕವಿಧಿ, ರುದ್ರಹೋಮವಿಧಿ ಇತ್ಯಾದಿ ವೈದಿಕಕರ್ಮಸ್ವರೂಪವನ್ನು ನಾವು ಈ ಅಂಶದಲ್ಲಿ ಕಾಣಬಹುದು. ಇಷ್ಟು ವಿಷಯಗಳನ್ನು ಇನ್ನೂ ಸಂಕ್ಷೇಪವಾಗಿ ಇತರ ಗ್ರಂಥಗಳಲ್ಲಿ ನಾವು ಪಡೆಯಬಹುದಾದರೂ, ಕಥಾಸರಣಿಯಲ್ಲಿ ಮುಂದೆ ಹೋಗುತ್ತಾ, ಸುಹೃತ್ಸ ಮ್ಮಿತಾರೂಪದಲ್ಲಿ ಶಿವಮಹಿಮೆ, ಶಿವಮಂತ್ರಮಹಿಮೆ, ಶೈವಧರ್ಮಸ್ವರೂಪ, ಇವನ್ನು ಇಷ್ಟು ವಿಸ್ತಾರವಾಗಿ ತಿಳಿಯಲು ಎಲ್ಲಿಯೂ ಸಾಧ್ಯವಿಲ್ಲ. ಗ್ರಂಥವು

ವಿಸ್ತಾರವಾಗಿದ್ದು, ಕೆಲವೆಡೆ ಸ್ವಲ್ಪ ಪುನರುಕ್ತಿಗಳು ಕಂಡುಬರುವುದರಿಂದ, ವಾಚಕರಿಗೆ ಅಲ್ಲಲ್ಲಿ ಸ್ವಲ್ಪ ಬೇಸರ ಬರಬಹುದು. ಆಸ್ತಿಕಮನೋಭಾವನೆಯಿಂದ ಬರೆದಿರುವ ಇಂತಹ ಗ್ರಂಥಗಳನ್ನು ಓದುವ ಆಸ್ತಿಕವೃಂದಕ್ಕೆ ಅದು ಅಷ್ಟು ಜುಗುಪ್ಸಾದಾಯಕ ವಲ್ಲ. ಒಂದೊಂದು ವಿಷಯದ ಮೇಲೆ ಇಷ್ಟು ದೊಡ್ಡ ಗ್ರಂಥಭಾಗವನ್ನು ರಚಿಸು ವುದು ಸಾಮಾನ್ಯರಿಂದ ಆಗದ ಮಾತು. ಆ ದೃಷ್ಟಿಯಿಂದ ಇಂತಹ ಗ್ರಂಥಗಳನ್ನು ಪರಿಶೀಲಿಸುತ್ತಾ, ಅಲ್ಲಲ್ಲಿ ದೊರೆತ ಒಂದೊಂದು ಅಪೂರ್ವ ವಿಷಯವನ್ನೇ ಸಂಗ್ರಹಿ ಸುತ್ತಾ ಹೋದರೆ, ವಾಚಕರ ಜ್ಞಾನಭಂಡಾರವು ವೃದ್ಧಿಯಾಗುವುದರಲ್ಲಿ ಅನುಮಾನವಿಲ್ಲ.

'ಏಕೋ ದೇವಃ ಕೇಶವೋ ವಾ ಶಿವೋ ವಾ' ಎಂಬ ಆರ್ಯೋಕ್ತಿಯಂತೆ ಶಿವಾತ್ಮಕವಾದ ದೈವವೊಂದಕ್ಕೇ ಪ್ರಾಶಸ್ತ್ಯವಿತ್ತು, ಜಗತ್ತಿನಲ್ಲಿ ಶಿವಭಿನ್ನವಾದ ವಸ್ತುವೇ ಮತ್ತೊಂದಿಲ್ಲ ಎಂಬುದನ್ನು ದೃಢಪಡಿಸುವ ಗ್ರಂಥವೆಂದರೆ ಈ ಶಿವರಹಸ್ಯ ವೊಂದೇ. ಇದು ಇತರ ಪುರಾಣಗಳಂತೆ ಸಂದರ್ಭೋಚಿತವಾಗಿ ಬೇರೆ ಬೇರೆ ದೇವತಾಸ್ವರೂಪವನ್ನು ವಿವರಿಸಿ, ದೇವತೆಗಳಲ್ಲಿಯೂ ತಾರತಮ್ಯವನ್ನೂ ಕಲ್ಪಿಸಿ, ಎಲ್ಲ ಮತಾನುಯಾಯಿಗಳಿಗೂ ತೃಪ್ತಿಯನ್ನುಂಟುಮಾಡಲಾರದು. ಶೈವಧರ್ಮಾಭಿ ಮಾನವಿಲ್ಲದವರಿಗೆ ಅನೇಕ ಕಡೆಗಳಲ್ಲಿ ಈ ಶಿವರಹಸ್ಯವು ಕುಠಾರಪ್ರಾಯವಾಗಿಯೇ ಕಾಣುವುದು. ಒಂದೊಂದು ಧರ್ಮದ ಪರವಾಗಿಯೂ ಇಂತಹ ಮಹಾಗ್ರಂಥಗಳಿರು ವುದು ಒಳ್ಳೆಯದು. ಇದನ್ನು ಆಮೂಲಾಗ್ರವಾಗಿ ಓದಿದವರಿಗೆ ಮಾತ್ರ ಇದನ್ನು ರಚಿಸಿದ ಮಹಾತ್ಮರ ಮಹಿಮೆಯೂ ಮತ್ತು ಹೃದಯವೂ ಗೋಚರವಾದೀತು.

ಸಣ್ಣ ದೊಡ್ಡ ನದಿಗಳಿಗೆಲ್ಲಾ ಸಮುದ್ರವು ಆಶ್ರಯಗೊಡುವಂತೆ, ಒಂದು ನಾಡಿನಲ್ಲಿರುವ ಎಲ್ಲ ಮತಧರ್ಮಗಳಿಗೂ ಮತ್ತು ಮತೀಯರಿಗೂ ರಕ್ಷಣೆ ಕೊಡುವವರು ಆ ನಾಡಿನ ಮಹಾಪ್ರಭುಗಳೇ. ಅದಕ್ಕೆ ನಿದರ್ಶನವಾಗಿ ನಮ್ಮನ್ನಾಳುವ ಶ್ರೀಮತ್ಕರ್ಣಾಟಕ ಸಿಂಹಾಸನಾಧೀಶ್ವರರಾದ ಶ್ರೀಮನ್ಮಹಾರಾಜ ಶ್ರೀಜಯಚಾಮರಾಜ ಒಡೆಯರ್ ಬಹದ್ದೂರ್, ಜಿ.ಸಿ.ಬಿ., ಜಿ.ಸಿ.ಎಸ್.ಐ. ಮಹಾಪ್ರಭುವರ್ಯರು ಸರ್ವಮತಗಳಿಗೂ ಮೂಲಭೂತಗಳಾಗಿರುವ ಅಷ್ಟಾದಶ ಮಹಾಪುರಾಣಗಳನ್ನು ಉಪಪುರಾಣಗಳೊಂದಿಗೆ ಕನ್ನಡಭಾಷೆಗೆ ಪರಿವರ್ತನೆಮಾಡಿಸಿ, ಅಚ್ಚುಹಾಕಿಸಿ, ಕನ್ನಡಿಗರಿಗೆ ಸುಲಭವಾಗಿ ದೊರೆಯುವಂತೆ ಮಾಡಿರುವುದು, ನಮ್ಮ ಭಾಗ್ಯೋದಯವೆಂದೇ ಹೇಳಬಹುದು.

ಇಂತಹ ಆಸ್ತಿಕಾಭಿಮಾನಿಗಳೂ, ಸನಾತನಧರ್ಮೋದ್ದೀಪಕರೂ ಆದ ಮಹಾಪ್ರಭುಗಳನ್ನೂ ಅವರ ಕುಟುಂಬವರ್ಗದವರನ್ನೂ, ಭಗವಂತನು ಚಿರಾಯುಷ್ಮಂತರನ್ನಾಗಿ ಮಾಡಿ ಅವರಿಗೆ ಸಕಲ ಸನ್ಮಂಗಳಗಳನ್ನೂ ದಯಪಾಲಿಸಿ ಸಲಹುತ್ತಿರಲಿ ಎಂದು ನಾನು ಅನನ್ಯಭಕ್ತಿಯಿಂದ ಪರಮೇಶ್ವರನನ್ನು ಪ್ರಾರ್ಥಿಸುತ್ತೇನೆ.

ಶ್ರೀಖರನಾಮ ಸಂವತ್ಸರದ<br>
ಮಾರ್ಗಶೀರ್ಷ ಕೃಷ್ಣ ದ್ವಿತೀಯಾ<br>
ಸ್ಥಿರವಾರ<br>
15—12—1951.

ಸಜ್ಜನವಿಧೇಯ,<br>
ಹೊನ್ನೇನಹಳ್ಳಿ ಗಂಗಾಧರಶಾಸ್ತ್ರೀ,<br>
ಆಸ್ಥಾನವಿದ್ವಾನ್, ಮೈಸೂರು.

# ಶ್ರೀ ಶಿವರಹಸ್ಯದ ಈಶ್ವರನಾಮಕ ದಶಮಾಂಶ ಪೂರ್ವಾರ್ಧದ ವಿಷಯಾನುಕ್ರಮಣಿಕಾ

ಅಧ್ಯಾಯಗಳು ೧—೩೦ ಪೂರ್ತಿ

## ಎಂಟನೆಯ ಅಧ್ಯಾಯ



## ಒಂಬತ್ತನೆಯ ಅಧ್ಯಾಯ



## ಹತ್ತನೆಯ ಅಧ್ಯಾಯ



## ಹನ್ನೊಂದನೆಯ ಅಧ್ಯಾಯ



## ಹನ್ನೆರಡನೆಯ ಅಧ್ಯಾಯ



## ಹದಿಮೂರನೆಯ ಅಧ್ಯಾಯ



## ಹದಿನಾಲ್ಕನೆಯ ಅಧ್ಯಾಯ

## ಇಪ್ಪತ್ತುಮೂರನೆಯ ಅಧ್ಯಾಯ



## ಇಪ್ಪತ್ತುನಾಲ್ಕನೆಯ ಅಧ್ಯಾಯ



## ಇಪ್ಪತ್ತೈದನೆಯ ಅಧ್ಯಾಯ



## ಇಪ್ಪತ್ತಾರನೆಯ ಅಧ್ಯಾಯ



## ಇಪ್ಪತ್ತೇಳನೆಯ ಅಧ್ಯಾಯ



## ಇಪ್ಪತ್ತೆಂಟನೆಯ ಅಧ್ಯಾಯ



## ಇಪ್ಪತ್ತೊಂಬತ್ತನೆಯ ಅಧ್ಯಾಯ



## ಮೂವತ್ತನೆಯ ಅಧ್ಯಾಯ

॥ ಶ್ರೀಃ ॥

॥ ಶ್ರೀ ಶಿವಾಯನಮಃ ॥

# ಅಥ ಶ್ರೀಶಿವರಹಸ್ಯೇ

## ಈಶಾನಾಖ್ಯೇ

## ದಶಮಾಂಶಪೂರ್ವಾರ್ಧೇ

## ಪ್ರಥಮೋಽಧ್ಯಾಯಃ

ಓಂ॥ ವೇತಂಡತುಂಡಮವತಂಸಿತಚಂದ್ರಖಂಡಂ
ಸತ್ಕುಂಡಲೀಶಪರಿವೇಷ್ಟಿ ಬೃಹತ್ಪಿಚಂಡಂ
ಶುಂಡಾವಲೀಕಲಿತದಂತ ಕೃತಾರ್ಧಖಂಡಂ
ವಿಘ್ನಾದ್ರಿಷಂಡಭಿದುರಂ ಪ್ರಣಮಾಮ್ಯಖಂಡಂ ॥೧॥

॥ ಸೂತ ಉವಾಚ ॥

ಜೈಗೀಷವ್ಯಸ್ತದಾ ಪ್ರಾಹ ಜಿತಷಡ್ವೈರಿವಿಕ್ರಮಃ ।
ಕ್ರೌಂಚದಾರಣಮಾನಮ್ಯ ತತ್ಪದಂ ಶರಣಂ ಯಯೌ ॥೨॥

---

## ಶ್ರೀಶಿವರಹಸ್ಯದ ಈಶಾಖ್ಯ ದಶಮಾಂಶದ ಪೂರ್ವಾರ್ಧದಲ್ಲಿ ಮೊದಲನೆಯ ಅಧ್ಯಾಯ

ಚಂದ್ರಾರ್ಧಕಲೆಯಿಂದ ಅಲಂಕೃತನಾಗಿ, ತನ್ನ ದೊಡ್ಡದಾದ ಹೊಟ್ಟೆಗೆ ಸರ್ಪರಾಜನನ್ನೇ ಬಲವಾಗಿ ಬಿಗಿದು, ನೀಳವಾದ ಸೊಂಡಿಲಿನಿಂದ ತನ್ನ ಅರ್ಧದಂತವನ್ನು ಹಿಡಿದು, ವಿಘ್ನಗಳ ಸಮುದಾಯವನ್ನು ಕ್ಷಣಮಾತ್ರದಲ್ಲಿ ನಾಶಗೊಳಿಸುವ ಗಜಾನನ ರೂಪಿಯಾದ. ಪರಶಿವಪುತ್ರನನ್ನು ನಾನು ಶಿರಸಾ ವಂದಿಸುವೆನು. ಎಂದು ಸೂತ ಮಹರ್ಷಿಗಳು ದಶಮಾಂಶಾರಂಭದಲ್ಲಿ ವಿಘ್ನೇಶ್ವರನನ್ನು ಸ್ತೋತ್ರಮಾಡುವರು ॥೧॥

ಕಾಮಕ್ರೋಧಾದಿ ಅರಿಷಡ್ವರ್ಗಗಳನ್ನೂ ಜಯಿಸಿದ ಜೈಗೀಷವ್ಯ ಮಹರ್ಷಿಯು, ಕ್ರೌಂಚಪರ್ವತವನ್ನು ಭೇದಿಸಿದ ಮಹಾಸೇನಾನಿಯಾದ ಕುಮಾರ ಸ್ವಾಮಿಯ ಪಾದಗಳಿಗೆ ವಂದಿಸಿ, ಅವನನ್ನೇ ಶರಣುಹೊಕ್ಕು ಹೀಗೆ ಪ್ರಾರ್ಥಿಸಿದನು.

ಅರ್ಧೇಂದುಮೌಳಿಪಾದಾಬ್ಜಮೋದಾನಂದಾಬ್ಧಿಚಂದ್ರಮಾಃ ।
ತರಂಗರಂಗಿತಹೃದಾ ಶಾಂಗಸಂಗಾಘ ಭಂಗಕಃ ॥೩॥

ತೇನೈವ ಪೃಷ್ಟೋ ಮುನಿನಾ ಶಿಪಿವಿಷ್ಟಕಥಾನಕಂ ।
ಸಮುಲ್ಲಸತ್ಸುಮನಸಾ ಫಾಲಾನಲಪದಾಂಬುಜೇ ॥೪॥

ಸೇನಾನಿಪುತ್ರಃ ಸೇನಾನೀರ್ಭಕ್ತಿಶಕ್ತಿಧರಸ್ತದಾ ।
ಮುಕ್ತಿಮಾರ್ಗಮಶಕ್ತಾನಾಂ ಭಕ್ತಾನಾಂ ಪ್ರಾಹ ಷಣ್ಮುಖಃ ॥೫॥

॥ ಮುನಯ ಊಚುಃ ॥

ಸ್ವೇಚ್ಛೇನಾಪೃಚ್ಛಿ ಕಿಂ ತೇನ ಮುನಿನಾ ಶಾಂಕರೇಣ ಹಿ ।
ವೀರಶ್ಶಕ್ತಿಧರಃ ಸ್ಕಂದಃ ಸೂದಿತಾರಾತಿಮಂಡಲಃ ॥೬॥

---

ಕುಮಾರಸ್ವಾಮಿಯಾದರೋ, ಪರಶಿವನ ಪಾದಕಮಲಗಳ ದರ್ಶನದಿಂದ, ಸಂತೋಷ ಪಡುವ ಭಕ್ತವೃಂದವೆಂಬ ಸಮುದ್ರಕ್ಕೆ ಚಂದ್ರನಂತೆ ಆನಂದದಾಯಕನಾದವನು. ಅಲ್ಲದೆ ಶಾಂಭವರ ಸಹವಾಸದಲ್ಲಿದ್ದು ಅವರ ಪಾಪರಾಶಿಯನ್ನೆಲ್ಲಾ ನಿರ್ಮೂಲಗೊಳಿಸುವವನು. ಇಂತಹ ಮಹಾಮಹಿಮನಾದ ಸ್ಕಂದಸ್ವಾಮಿಯು, ಶಿವಕಥೆಯೆಂಬ ಪವಿತ್ರೋದಕಗಳ ಅಲೆಗಳಿಂದ ತೊಳೆಯಲ್ಪಟ್ಟ ಅಂತಃಕರಣವುಳ್ಳ ಜೈಗೀಷವ್ಯ ಮಹರ್ಷಿಯಿಂದ ಶಿವರಹಸ್ಯೋಪದೇಶಾರ್ಥವಾಗಿ ಪ್ರಾರ್ಥಿಸಲ್ಪಟ್ಟನು. ॥೨ ೩॥

ಶಿವಕಥಾಶ್ರವಣಕ್ಕಾಗಿ ವಿಕಾಸಗೊಂಡ ಮನಸ್ಸುಳ್ಳ ಜೈಗೀಷವ್ಯಮಹರ್ಷಿಯು ಈಶ್ವರಕಥೆಗಳನ್ನು ಹೇಳಬೇಕೆಂದು ಕುಮಾರಸ್ವಾಮಿಯನ್ನು ಪ್ರಶ್ನಿಸಲು, ದೇವ ಸೇನಾಪತಿಯೂ, ಪರಶಿವಪುತ್ರನೂ ಆದ ಸ್ಕಂದಸ್ವಾಮಿಯು ಈಶ್ವರಪಾದಕಮಲದಲ್ಲಿ ತನ್ನ ಭಕ್ತಿಯನ್ನು ತೋರ್ಪಡಿಸುತ್ತಾ, ಭಕ್ತರಾಗಿದ್ದರೂ ಮುಕ್ತಿಮಾರ್ಗವನ್ನು ಕಾಣದಿರುವವರ ಉಪಕಾರಕ್ಕಾಗಿ ಮುಂದೆ ಹೇಳುವ ರೀತಿಯಲ್ಲಿ ಶಿವಾಖ್ಯಾಯಿಕೆಗಳನ್ನು ಬೋಧಿಸಲುಪಕ್ರಮಿಸಿದನು, ಎಂದು ಸೂತಮಹರ್ಷಿಗಳು ವಾಜಶ್ರವಸಾದಿ ಋಷಿಗಳಿಗೆ ಜೈಗೀಷವ್ಯಾದಿ ಋಷಿಗಳಿಗೂ ಮತ್ತು ಕುಮಾರಸ್ವಾಮಿಗೂ ನಡೆದ ಸಂಭಾಷಣರೂಪವಾದ ಶಿವರಹಸ್ಯಕಥೆಯನ್ನು ಮುಂದೆ ಹೇಳುವಂತೆ ವಿವರಿಸಿ ಹೇಳಲಾರಂಭಿಸಿದನು. ॥೪-೫॥

ಆಗ ವಾಜಶ್ರವಸಾದಿ ಮುನಿಗಳು, ಸೂತರನ್ನು ಕುರಿತು " ಮಹರ್ಷಿಯೇ, ಈಶ್ವರಭಕ್ತನೂ, ಮಹಾತ್ಮನೂ ಆದ ಜೈಗೀಷವ್ಯಮಹರ್ಷಿಯು, ಸಮಸ್ತಶತ್ರು

ತಸ್ಮೈ ವಿಸ್ಮಯದಂ ಕಿಂ ವಾ ಸ್ಮರಾರಾತಿಕಥಾನಕಂ ।
ಉಕ್ತವಾನ್ ಸೂಕ್ತಸರಸಂ ಭಕ್ತಹೃತ್ತಾಪಹಾರಕಂ ॥೭॥

ತನ್ನೋ ವದ ವಿಶೇಷೇಣ ಪೂಷಲೋಚನಸತ್ಕಥಾಂ ॥೮॥

॥ ಸೂತ ಉವಾಚ ॥

ಧನ್ಯಾ ಯೂಯಂ ಸದಾ ಮಾನ್ಯಾಃ ಮಹಾಮುನ್ಯುಕಥಾದರಾಃ ।
ಶೈಲಕನ್ಯಾಪತೇರ್ನಾನ್ಯಾಃ ಕಥಾ ಭವವಿನಾಶಕಾಃ ॥೯॥

ಭವತಾಂ ಭವತಾಂ ಭೂತ್ಯೈ ಭೂಯೋ ಭೂಯೋ ವದಾಮ್ಯಹಂ ।
ಸ್ಕಂದಂ ಸೇವಿತಮಂದಾರಮಿಂದಿರಾರಮಣಾರ್ಚಿತಂ ॥೧೦॥

॥ ಜೈಗೀಷವ್ಯ ಉವಾಚ ॥

ಗಣೇಂದ್ರವೃಂದವಂದ್ಯಾಂಘ್ರಿಮಾಬಭಾಷೇ ವಿಶೇಷವಿತ್ ॥೧೧॥

ಅಪರ್ಣಾವಕ್ತ್ರಪಾಥೋಜವಿಕಾಸನದಿವಾಕರ ।
ಶೂರತಾರಕಸಂಹಾರ ಸ್ಮರಮಾರಪ್ರಿಯಾರ್ಚಕ ॥೧೨॥

---

ನಾಶಕನೆನಿಸಿ, ವೀರನಾಗಿ ಶಕ್ತ್ಯಾಯುಧಧಾರಿಯಾಗಿದ್ದ ಕುಮಾರಸ್ವಾಮಿಯನ್ನು ಕುರಿತು ಕೇಳಿದ ಪ್ರಶ್ನೆಗಳೇನು? ಅದಕ್ಕೆ ಉತ್ತರವಾಗಿ ಷಣ್ಮುಖಸ್ವಾಮಿಯು, ಭಕ್ತರ ಹೃದಯವು ಆನಂದಪಡುವಂತೆ ಹೇಳಿದ ಶಿವರಹಸ್ಯಾಂಶಗಳಾವುವು? ಅಂತಹ ಸೂಕ್ತಿಯಿಂದ ರಸಭರಿತವಾದ ಈಶ್ವರಕಥೆಗಳನ್ನು ದಯೆಯಿಂದ ನಮಗೆ ಬೋಧಿಸಬೇಕು" ಎಂದು ಪ್ರಾರ್ಥಿಸಲು ಆಗ ಸೂತಮಹರ್ಷಿಗಳು ಹೀಗೆಂದರು. ॥೬-೭-೮॥

ಶಿವಕಥಾಶ್ರವಣಕುತೂಹಲಿಗಳಾದ ಮಹರ್ಷಿಗಳೇ, ನೀವೇ ಧನ್ಯರು. ಈಶ್ವರ ಕಥೆಯನ್ನು ಬಿಟ್ಟರೆ ಉಳಿದ ಕಥೆಗಳಾವುವೂ ಸಾಂಸಾರಿಕವಾದ ಕ್ಲೇಶಗಳನ್ನು ಎಂದೂ ನಿವಾರಿಸಲಾರವು. ಇದು ನಿಜ. ಮುಂದೆ ಜೈಗೀಷವ್ಯಮಹರ್ಷಿಗೆ ಸ್ಕಂದ ನಿಂದ ಪ್ರೋಕ್ತವಾದ ಶಿವಕಥೆಯನ್ನು ನಿಮಗೆ ತಪ್ಪದೆ ಹೇಳುವೆನು. ದುಃಖನಿವಾರ ಣೆಯ ಉದ್ದೇಶಕ್ಕಾಗಿ ನೀವು ಅದನ್ನು ಕೇಳಿ ಆನಂದವನ್ನು ಪಡೆಯಿರಿ. ಎಂದು ಸೂತಮಹರ್ಷಿಗಳು ಮುಂದಿನ ಕಥೆಯನ್ನು ವಿವರಿಸಲು ಆರಂಭಿಸಿದರು. ॥೯-೧೦॥

ಸಮಸ್ತಗಣದೇವತೆಗಳಿಂದಲೂ ಪೂಜಿತನಾದ ಕುಮಾರಸ್ವಾಮಿಯನ್ನು

ವಿಶಿಷ್ಟಶಿಷ್ಟಭಕ್ತೇಷ್ಟಸಿದ್ಧ್ಯಷ್ಟಕವರಪ್ರದ ।
ವಿಶಿಷ್ಟಧರ್ಮಾನಾಚಕ್ಷ್ವಚಕ್ಷುಶ್ಶ್ರೋತ್ರಪ್ರಿಯಸ್ಯ ಹಿ ॥೧೩॥

ಕಿಂ ವಾ ಪ್ರಸಾದಜನಕಂ ಶಂಭೋರಂಭೋದವಾಹಿನಃ ।
ಕೇಷು ಸ್ಥಾನೇಷು ವಸತಾಂ ತುಷ್ಯತ್ಯೇವ ಮಹೇಶ್ವರಃ ॥೧೪॥

ಕಸ್ಯಾರ್ಚನೇನ ಮುಕ್ತಿಃ ಸ್ಯಾದ್ವೇದೋಕ್ತೇರ್ಭರ್ಗಜನಂ ಹಿ ಕಃ ।
ಘೃತೇನ ಕೇನ ಭಗವಾನ್ ಭಕ್ತಮುಕ್ತಿಂ ಪ್ರಯಚ್ಛತಿ ॥೧೫॥

ತ್ರಿಯಂಬಕೋಂಬಿಕಾನಾಥಃ ಕಥಂ ನಾಥಯತಿ ಪ್ರಜಾಃ ।
ಏತನ್ಮೇ ಕೌತುಕಂ ಹೃದ್ಗಂ ತ್ವದುಕ್ತ್ಯಾ ಸಾಧಯಾಮ್ಯಹಂ ॥೧೬॥

ಮಹ್ಯಂ ಸಹ್ಯಾಪಗಾಜಾನಿಸಮುದ್ಭವಗರಾಶಿನಃ ।
ಕಥಾಃ ಕಥಯ ಸಾನಂದಂ ಪೃಚ್ಛತೇಚ್ಛಿನ್ನಚೇತಸೇ ॥೧೭॥

---

ಕುರಿತು ಮುನಿಯು ಹೀಗೆ ಪ್ರಾರ್ಥಿಸಿಕೊಂಡನು. "ಪಾರ್ವತಿಯ ಮುಖಕಮಲವನ್ನು ಅರಳಿಸುವ ಬಾಲಭಾಸ್ಕರನೇ, ಶೂರರಾದ ತಾರಕಾಸುರರನ್ನು ಕೊಂದು, ಮನ್ಮಥಾರಿ ಯಾದ ಪರಶಿವನನ್ನು ಅರ್ಚಿಸುವವನೇ, ಯೋಗ್ಯರಾದ ಭಕ್ತಜನರಿಗೆ ಅವರ ಇಷ್ಟಾ ರ್ಥಗಳನ್ನೆಲ್ಲಾ ಪೂರ್ತಿಗೊಳಿಸುವ ಷಣ್ಮುಖಸ್ವಾಮಿಯೇ, ನಮಗೆ ಆದಿಶೇಷನನ್ನೇ ಆಭರಣವನ್ನಾಗಿ ಮಾಡಿಕೊಂಡಿರುವ ಪರಶಿವನ ಪ್ರಿಯಕಥೆಗಳನ್ನು ಹೇಳುವವ ನಾಗು. ॥೧೧-೧೨-೧೩॥

ದಯಾಸಮುದ್ರನಾದ ಪರಶಿವನ ಅನುಗ್ರಹವನ್ನು ಒದಗಿಸುವ ವಸ್ತು ವಾವುದು? ಯಾವ ಕ್ಷೇತ್ರದ ವಾಸದಿಂದ ಪರಶಿವನು ತೃಪ್ತನಾಗುವನು? ಶಂಕರ ತೃಪ್ತ್ಯರ್ಥವಾಗಿಯೂ ಭಕ್ತರ ಮುಕ್ತ್ಯರ್ಥವಾಗಿಯೂ ಎಂತಹ ಘೃತಮಿಶ್ರವಾದ ಹವಿಸ್ಸನ್ನರ್ಪಿಸಬೇಕು? ॥೧೪-೧೫॥

ಮೂರುಕಣ್ಣುಳ್ಳವನೂ, ಪಾರ್ವತೀಪತಿಯೂ ಆದ ಶಂಕರನು ಜನರನ್ನು ಯಾವರೀತಿ ರಕ್ಷಿಸುವನು? ಇವೇ ಮೊದಲಾದ ಆಶ್ಚರ್ಯಕರಗಳಾದ ಸಂಗತಿ ಗಳನ್ನೂ ನದಿಗಳಿಗೆ ಆಶ್ರಯವಾದ ಸಮುದ್ರಮಥನಕಾಲದಿಂದ ವಿಷಕಂಠನೆನಿಸಿದ ಪರಶಿವನ ಪುಣ್ಯೇತಿಹಾಸಗಳನ್ನೂ ದೃಢಮನಸ್ಕನವನಾದ ನನಗೆ ತಿಳಿಯಪಡಿಸು. ॥೧೬-೧೭॥

|| ಸೂತ ಉವಾಚ ||

ಸ್ಕಂದಸ್ತತ್ಸೂಕ್ತಿಮಾಧುರ್ಯವಚೋವೀಚೀಪ್ರಹರ್ಷಿತಃ ।
ಉದ್ಯದ್ಧಿಮಾಂಶುವದನೋ ಮದನಾರಾತಿಸುಪ್ರಜಾಃ ||೧೮||

ಶಾಂಗಂ ತಂ ಮುನಿಮಾಲಿಂಗ್ಯ ಭುಜಂಗಾಭರಣಪ್ರಿಯಾಃ ।
ಕಥಾಶ್ಚ ಕಥಯತ್ತ್ರಸ್ಮೈ ದೇವ್ಯೈದೇವೇನ ಕೀರ್ತಿತಾಃ ||೧೯||

ತಾ ಏವವೋ ವದಾಮ್ಯದ್ಯ ಸ್ಕಂದೇನಾನಂದದಾಯಿನಾ ।
ಜೈಗೀಷವ್ಯಾಯ ಮುನಯೋ ಯಾಃ ಪ್ರೋಕ್ತಾಃ ಶ್ರುತಿದರ್ಶಿತಾಃ ||೨೦||

|| ಶ್ರೀಸ್ಕಂದ ಉವಾಚ ||

ಶೃಣು ತ್ವಂ ಸಾವಧಾನೇನ ನಿದಾನಕಲಶಂ ಮಮ ।
ದೇವ್ಯೈ ಪುರಾ ಮಹೇಶೇನ ಕೈಲಾಸಸ್ಥೇನ ಶಂಕರ ||೨೧||

ರಹಸ್ಯೇ ಹಾಸ್ಯಸುಹೃದಾ ತದಾ ಶಿವರಹಸ್ಯಗಾಃ ।
ಮನ್ಮಥಾಂತಕರಂ ದೇವೀ ತದಾ ಪ್ರಣಯಗರ್ಭಿತಾ ||೨೨||

---

ಎಂದು ಜೈಗೀಷವ್ಯಮಹರ್ಷಿಯು ಪ್ರಾರ್ಥಿಸಲು, ಆ ಋಷಿಯ ಮಧುರವಾದ ವಾಣಿಗೆ ಹರ್ಷಿತನಾಗಿ, ಚಂದ್ರನಂತೆ ವಿಶಾಲವಾದ ಮುಖವುಳ್ಳವನಾಗಿ, ಪರಶಿವಭಕ್ತನೆನಿಸಿದ ಜೈಗೀಷವ್ಯಮಹರ್ಷಿಯನ್ನು ಆಲಿಂಗಿಸಿಕೊಂಡು, ಶಿವಮಹಿಮಾ ಪ್ರದರ್ಶಕಗಳಾದ ಕಥೆಗಳನ್ನು ವಿವರವಾಗಿ ಹೇಳತೊಡಗಿದನು. ಎಲೈ ವಾಜಶ್ರವಸಾದಿ ಮಹರ್ಷಿಗಳೇ, ಆ ಕುಮಾರಸ್ವಾಮಿಯು ಜೈಗೀಷವ್ಯಾದಿಗಳಿಗೆ ಹೇಳಿದ ಶಿವೇತಿಹಾಸವನ್ನೇ ನಿಮಗೆ ಈಗ ಪ್ರೀತಿಯಿಂದ ಉಸುರುವೆನು. ಅವೆಲ್ಲವೂ ಶ್ರುತಿಸಮ್ಮತವಾದವುಗಳೆಂದು ತಿಳಿಯಿರಿ; ಎಂದು ಸೂತಮಹರ್ಷಿಯು ಸ್ಕಂದೋಕ್ತಿಯನ್ನು ವಿವರಿಸಲುಪಕ್ರಮಿಸಿದನು. ||೧೮-೧೯-೨೦||

" ಜೈಗೀಷವ್ಯನೇ ಕೇಳು, ಹಿಂದೆ ಕೈಲಾಸದಲ್ಲಿ ಕುಳಿತು ಶಂಕರನು ಪಾರ್ವತಿಗೆ ಸಂತೋಷಕರವಾದ ಮನಸ್ಸಿನಿಂದ ಹೇಳಿದ ರಹಸ್ಯಾಂಶಗಳನ್ನೇ ಈಗ ನಿನಗೆ ತಿಳಿಸುವೆನು. ಒಮ್ಮೆ ದೇವಿಯು ಪತಿಪ್ರೇಮದಿಂದ ಪತಿಯನ್ನು ಕುರಿತು ಹೀಗೆಂದಳು. ||೨೧-೨೨||

ಕೈಲಾಸಶೈಲಪ್ರಾಸಾದೇ ಪ್ರಸಾದಾಭಿಮುಖಂ ಸ್ಥಿತಂ ।
ನವರತ್ನಪರಿಷ್ಕಾರಿ ದಿವ್ಯಮಂಚೋತ್ತರಚ್ಛದೇ ॥೨೩॥

ಮಂದಾರಪುಷ್ಪಗರ್ಭೋತ್ಥಮರಂದಾಸಾರಸೌರಭೇ ।
ಕಾಸಾರಮಧ್ಯಸರಸಪ್ಫುಲ್ಲತಾಮರಸಾಶ್ರಯೇ ॥೨೪॥

ರಣಧ್ವಂಸಮುಖಾರಾವಸಮೀರಣಗಣಾವೃತೇ ।
ಚಂಡತಾಂಡವಸನ್ನಾಹಶಿಖಂಡಿಕುಲಕೂಜಿತೇ ॥೨೫॥

ಕೋಕಿಲಾಕಾಕಲರವಪಿಕಸಾರಸನಾದಿತೇ ।
ವನಾವನೀಗಲತ್ಪುಷ್ಪರಜಸಾಮೋದಿಮಾರುತೇ ॥೨೬॥

ಘ್ರಾಣಸರ್ಪಿವಿಸರ್ಪಿದ್ಯೌಭೂಮಿಗಂಧಾಯಿತಾದಿಶಿ ।
ಪಶ್ಯಂತಂ ಸಾಗರೋಪಾಂತಂ ನಿತಾಂತಂ ಸಾಂತಕಾಂತಕಂ ॥೨೭॥

ಅಪೃಚ್ಛತ್ಪಾರ್ವತೀಕಾಂತಂ ಶಾಂತಂ ಸ್ವಾಂತಂ ತದಾ ಮುದಾ ॥೨೮॥

---

ಆಗ ಶಂಕರನು ಕೈಲಾಸಾಚಲದಲ್ಲಿರುವ ಉಪ್ಪರಿಗೆಯಲ್ಲಿ ಪ್ರಸನ್ನವದನನಾಗಿ ಕುಳಿತಿದ್ದನು. ನವರತ್ನಗಳಿಂದ ನಿರ್ಮಿತವಾದ ದಿವ್ಯಮಂಚದಮೇಲೆ ಮಂದಾರವೇ ಮೊದಲಾದ ಸುಗಂಧಮಯವಾದ ಪುಷ್ಪಗಳ ಸೌರಭವನ್ನು ಆಘ್ರಾಣಿಸುತ್ತಾ ಸಂತೋಷದಲ್ಲಿದ್ದನು. ಮುಂಭಾಗದಲ್ಲಿ ನೀರಿನ ಕೊಳವೂ, ಅದರಲ್ಲಿ ಅರಳಿದ ಕಮಲಗಳೂ, ಅಲ್ಲಲ್ಲಿಯೇ ರಣಮುಖದಲ್ಲಿ ಗರ್ಜಿಸುವ ವಾದ್ಯಧ್ವನಿಯನ್ನು ಅನುಕರಿಸುವ ವಾಯುವಿನ ರಭಸವೂ, ಪ್ರಚಂಡವಾದ ನಾಟ್ಯವನ್ನು ಪ್ರದರ್ಶಿಸುವ ನವಿಲುಗಳ ಧ್ವನಿಯೂ ಅಲ್ಲಿ ಪರಶಿವನಿಗೆ ಮನೋಹರವಾಗಿದ್ದಿತು. ॥೨೩-೨೪-೨೫॥

ಕೋಗಿಲೆಗಳು, ಅವ್ಯಕ್ತ ಮಧುರವಾದ ಧ್ವನಿಯಿಂದ ಕರ್ಣಾನಂದವನ್ನುಂಟುಮಾಡುತ್ತಿದ್ದುವು. ಕಾಡುಹೂಗಳ ಮಕರಂದದಿಂದ ಕೂಡಿ ವಾಯುವು ಸುಗಂಧವಾಗಿ ಬೀಸುತ್ತಿತ್ತು. ಸುವಾಸನೆಕೊಡುವ ತುಪ್ಪದ ಹೋಮಧೂಮದಿಂದ ಅಂತರಿಕ್ಷವೆಲ್ಲವೂ ಗಮಗಮಿಸುತ್ತಿದ್ದಿತು. ಪರಶಿವನು ಕುಳಿತಿದ್ದ ಸ್ಥಳಕ್ಕೆ ಸಮಸ್ತದಿಕ್ಕುಗಳಲ್ಲಿಯೂ ಸಮುದ್ರವು ಮನೋಹರವಾಗಿ ಕಂಡುಬರುತ್ತಿದ್ದಿತು. ಇಂತಹ ಸನ್ನಿವೇಶದಲ್ಲಿ ಸಂತೋಷದಿಂದಿರುವ ಕಾಲಕಾಲನೂ, ಕರುಣಾಮೂರ್ತಿಯೂ ಆದ ಪರಶಿವನನ್ನು ಕುರಿತು ಪಾರ್ವತಿಯು ಈರೀತಿ ಪ್ರಶ್ನಿಸಿದಳು. ॥೨೬-೨೭-೨೮॥

॥ ಪಾರ್ವತ್ಯುವಾಚ ॥

ದೇವದೇವ ಮಹಾದೇವ ಹರಗಂಗಾಧರಪ್ರಭೋ ।
ಅಂತಕಾಂತಕಕಾಮಾರೇ ಅಂಧಕಾಸುರಸೂದನ ॥೨೯॥

ಮಹಾಕೈಲಾಸನಿಲಯ ವಿಶ್ವನಾಥ ಹರಾವ್ಯಯ ।
ಕಿಂ ತ್ವಂ ಮುಕ್ತ್ಯುಪಾಯಂ ಕಿಂ ಸಾಧನಂ ತದ್ವದಸ್ವ ಮೇ ॥೩೦॥

ಅಸತ್ಯಜನತಾಸ್ವಾಂತಪಾಪತಾಪನಿವಾರಕಂ ।
ಮಹ್ಯಂ ವಿಶ್ವಾಧಿಕ ಬ್ರೂಹಿ ನಿಸ್ತಾರಂ ವಿಸ್ತರಾಚ್ಛಿವ ॥೩೧॥

ಇತ್ಯುಕ್ತೋ ಭಗವಾನ್‌ರುದ್ರೋ ಗಿರಿಜಾಜಾಯಯಾ ತದಾ ।
ಮುದಾ ಹೃದಿ ಚಿರಂಧ್ಯಾತ್ವಾ ಮುಕ್ತ್ಯುಪಾಯಂ ಹರೋವದತ್ ॥೩೨॥

॥ ಸದಾಶಿವ ಉವಾಚ ॥

ಧನ್ಯೇ ಮಾನ್ಯೇದ್ರಿಕನ್ಯೇ ತ್ವಯಿ ವರಕರುಣಾಪೂರ್ಣದೃಷ್ಟ್ಯಾಭಿವೃಷ್ಟ್ಯೇ ।
ಸಂಪೂರ್ಣಂ ಕುರು ಕರ್ಣಸಾರಸುರಸಾ ಮೋಹಾಸ್ಪದಂ ತೇ ಮನಃ ।
ಮಹ್ಯತ್ಯಜ್ಞೋಪಿ ಗುಹ್ಯಪ್ರಕಥನಮಹಿಮಾಶಹ್ಯಪಾಪೌಘನಾಶಂ ।
ಪಾಹ್ಯಸ್ಮತ್ಕೃಪಯೈವ ಲೋಕಮಭಿತೋಽಪ್ಯೂಹ್ಯಂ ತ್ವಯಾ ಶೈಲಜೇ॥೩೩॥

"ದೇವದೇವನೇ, ಗಂಗಾಧರನೆನಿಸಿದ ಮಹಾದೇವನೇ, ಕಾಲಕಾಲನೆನಿಸಿದವನೇ, ಅಂಧಕಾಸುರ, ಮನ್ಮಥ ಇವರನ್ನು ಧ್ವಂಸಮಾಡಿದವನೇ, ಕೈಲಾಸವಾಸಿಯಾಗಿ, ವಿಶ್ವನಾಥನೆನಿಸಿ ನಾಶರಹಿತನಾಗಿರುವವನೇ, ಸಾಮಾನ್ಯಮಾನವರು ಸುಲಭವಾಗಿ ಶಾಶ್ವತವಾದ ಮೋಕ್ಷವನ್ನು ಪಡೆಯುವ ಸಾಧನವಾವುದೆಂಬುದನ್ನು ದಯೆಯಿಟ್ಟು ತಿಳಿಸು. ॥೨೯-೩೦॥

ದುರ್ಮಾರ್ಗಿಗಳಾದ ಜನರ ಸಂತಾಪವನ್ನು ಸಹ ನಿವಾರಣೆಮಾಡಬಲ್ಲ ತತ್ತ್ವವೇನಾದರೂ ಇದ್ದರೆ ಅದನ್ನು ನನಗೆ ವಿಸ್ತಾರವಾಗಿ ತಿಳಿಸು." ಎಂದು ದೈನ್ಯದಿಂದ ದೇವಿಯು ಪ್ರಾರ್ಥಿಸಲು, ಆಗ ಮಹಾದೇವನು ಮನಸ್ಸಿನಲ್ಲಿಯೇ ಸಂತೋಷಪಡುತ್ತಾ, ದೇವಿಯ ಇಷ್ಟದಂತೆ ಮುಕ್ತಿಮಾರ್ಗವನ್ನು ಹೇಳಲುಪಕ್ರಮಿಸಿದನು. ॥೩೧-೩೨॥

ಪರ್ವತರಾಜಪುತ್ರಿಯಾದ ಗೌರೀದೇವಿಯೇ, ನೀನೇ ಧನ್ಯಳು. ನಿನ್ನಲ್ಲಿರುವ ಪ್ರೀತಿಯಿಂದ ನಾನು ನಿನಗೆ ನನ್ನ ರಹಸ್ಯವನ್ನೆಲ್ಲಾ ವಿವರಿಸಿ ಹೇಳುವೆನು. ಅದರಿಂದ

ಯಾತಾಯಾತಪರಂ ಪರಾಸುಭವಜೈರ್ದುಃಖಾಭಿಘಾತೈಃಶಿವೇ
ನೋಮುಹ್ಯತ್ಯಪಿ ಪಾತಶಾತನಮಿಷೈರುನ್ಮೇಷ ಮೇಷೋನ್ಮಿಷೈಃ ।
ದುರ್ದಾಂತದ್ರುಹಿಣೇನ ಹಾ ಹತಧಿಯೋ ಭಕ್ತಿಂ ಪರಾಂ ಮುಕ್ತಿದಾ
ಮಿತ್ಯೇವ ಶ್ರುತಿ ಸೂಕ್ತಿಗರ್ಭಿತವಚೋ ಮುಂಚಂತಿ ನೋ ಪಾಮರಾಃ॥೩೪॥

ವಾರಂ ವಾರಮುಮಾಸಹಾಯಚರಣಂ ಪಾರಂ ಭವಾಬ್ಧೇಃಪರಂ
ದ್ವಾರಂ ಮುಕ್ತಿನಿಕಾಯ್ಯವರ್ಗಮವರಂ ಜಾನಂತಿ ಹಾಹಾ ಪರಂ ।
ಘೋರಂ ಪಾತಕಪಂಜರಂ ಪ್ರವಿಜಹಾತ್ಯೇವಾದ್ಭುತಂ ನೋ ಬುಧೇ
ಬೋಧಾಯ್ಯೈವ ಭವಿಷ್ಯತಿ ಪ್ರಿಯತರಮಾಜ್ಞಾನಮೇಕಂ ಶಿವೇ ॥೩೫॥

ಕಲೌ ಖಲು ರಸಾಯನಂ ಹರಮಹಾಜನೇ ಪಾವನಂ
ಸದೈವ ಸುಖಸಾಧನಂ ಗಿರಿಶತುಂಗಲಿಂಗಾರ್ಚನಂ ।

---

ನಿನ್ನ ಪೂರ್ಣವಾದ ಮನಸ್ಸು ಇನ್ನೂ ಕರುಣಾರಸಪರಿಪೂರ್ಣವಾಗುವುದು. ಮತ್ತು ಮೋಹವು ದೂರವಾಗುವುದು. ನಿನಗೆ ಹೇಳಲಿರುವ ಈ ಶಿವರಹಸ್ಯ ಭಾಗವನ್ನು ಕೇಳುವುದರಿಂದ ಕೇವಲ ಅಜ್ಞಾನಿಯೂ ಪಾಪರಹಿತನಾಗುವನು. ನೀನಾದರೋ ನನ್ನ ಅನುಗ್ರಹವನ್ನು ಪಡೆದು, ನನ್ನ ಪರಿಪೂರ್ಣವಾದ ಇತಿಹಾಸವನ್ನು ಕೇಳುತ್ತಾ ಲೋಕವನ್ನು ರಕ್ಷಿಸುವವಳಾಗು. ॥೩೩॥

ಹುಟ್ಟುವ ಹಾಗೆಯೇ ನಷ್ಟವಾಗುವ ಜನ್ಮಪರಂಪರೆಗೆ ಸಿಲುಕಿ ಪಾಮರರು, ಆಗಾಗ ಅಜ್ಞಾನದಿಂದ ಅಕಾರ್ಯಗಳನ್ನೆಸಗಿ, ದುಷ್ಟಶಿಕ್ಷಣಕಾರ್ಯದಲ್ಲಿ ಪಾತ್ರರಾಗಿ ಹತಭಾಗ್ಯರಾಗುವರು. ಮತ್ತು ಸೃಷ್ಟಿಕರ್ತನಾದ ಬ್ರಹ್ಮನ ಆಘಾತಕ್ಕೆ ಸಿಕ್ಕಿ ನರಳಿ ಹೋಗುವರು. ಆಷ್ಟಾದರೂ ಶ್ರುತಿಸ್ಮೃತಿಗಳಲ್ಲಿ ಉಕ್ತವಾಗಿರುವ ನನ್ನ ವಿಷಯಕವಾದ ಭಕ್ತಿಯನ್ನು ಮಾತ್ರ ಹೃದಯದಲ್ಲಿ ಹೊಂದುವುದಿಲ್ಲ. ॥೩೪॥

ಗೌರೀಪತಿಯೆನಿಸಿದ ನನ್ನ ಪಾದವು - ಸಂಸಾರಸಾಗರದ ಕೊನೆಯ ದಡ ಎಂಬುದನ್ನು ಪಾಮರರು ತಿಳಿಯಲಾರರು. ಅವರಿಗೆ ಇದು ಮುಕ್ತಿಸ್ಸೋಪಾನವೆಂಬುದು ತಿಳಿಯದು. ದೇವಿಯೇ, ಅದರಿಂದಲೇ ಅವರು ಪಾತಕಪಂಜರದಂತಿರುವ ಸಂಸಾರಸಾಗರದಲ್ಲಿ ಬಿದ್ದು ತೇಲಾಡುತ್ತಿರುವರು. ನನ್ನ ವಿಷಯಕವಾದ ಜ್ಞಾನವು ಕೇವಲ ಸುಕೃತಿಗಳಿಗೆ ಮಾತ್ರ ಲಭಿಸುವುದೆಂದು ತಿಳಿ. ॥೩೫॥

ಭೂಲೋಕದಲ್ಲಿ ಶಿವಲಿಂಗಾರ್ಚನೆಯು ಕಲಿಕಲ್ಮಷ ನಾಶಕವಾದದ್ದು. ಶಾಂಭವರಿಗೆ ರಸಾಯನದಂತೆ ಪವಿತ್ರಪ್ರದವಾದದ್ದು. ಐಹಿಕಾಮುಷ್ಮಿಕ ಸುಖಗಳನ್ನು

ಮಹಾಘಗಿರಿಭೇದನಂ ಪ್ರಬಲದುಃಖಸಂದೀಪನಂ
ಜನೇಷು ಜನಿನಾಶನಂ ಹೃದಯಮೋಹಸಂಭೇದನಂ ॥೩೬॥

ಶೃಣುಷ್ವ ಶಶಿಶೇಖರೇ ತ್ರಿನಯನೇಂದುಬಿಂಬಾನನೇ
ಸದೈವ ಸುಕೃತೀ ಭವತಿ ಭಸ್ಮಭೂಷೋಜ್ಜ್ವಲಃ ।
ಸ ರುದ್ರಸದೃಶೋ ಭವೇತ್ಸಕಲದೇಹರುದ್ರಾಕ್ಷಧೃಕ್
ಸ ದೇವಿ ಮಮ ಸಂಮತೋ ಭವತಿ ಭಾಗ್ಯಪೂರ್ಣೋಜನಃ ॥೩೭॥

ಮತ್ಪಂಚಾಕ್ಷರ ಪಾವನೋತ್ತಮಮತಿರ್ಯಾ ಸಂಶ್ರಿತೇ ತಾಂ ಗತಿಂ
ಸಂಸಾರೇಷು ವಿರಜ್ಯ ನಿರ್ಮಮಹೃದಾ ತ್ಯಕ್ತೇಷಣೋ ವಾ ಯತಿಃ ।
ನೈತಾಮೇತಿ ಗತಾಗತಿಪ್ರಚಲಿತೋ ಬ್ರಹ್ಮಾಂಡಲೋಕೋರ್ಧ್ವಗಃ ।
ಸತ್ಯಂ ರುದ್ರಪರಾಯಣೋಽಪಿ ಗಿರಿಜೇ ನಾರಾಯಣಸ್ಯಾಘಹೃತ್ ॥೩೮॥

---

ಒದಗಿಸಬಲ್ಲುದು. ಪಾಪವೆಂಬ ಪರ್ವತವನ್ನು ಭೇದಿಸಿ, ಸಾಂಸಾರಿಕವಾದ ದುಃಖವನ್ನು ನಾಶಗೊಳಿಸಿ, ಅಜ್ಞಾನವನ್ನು ಹೋಗಲಾಡಿಸಿ, ಜನನಮರಣರಹಿತವಾದ ಮೋಕ್ಷವನ್ನು ಅದು ಅನುಗ್ರಹಿಸಬಲ್ಲುದು. ॥೩೬॥

ಅರ್ಧಚಂದ್ರಕಲೆಯನ್ನೂ, ನೇತ್ರತ್ರಯವನ್ನೂ ಧರಿಸಿ, ಚಂದ್ರಮಂಡಲದಂತೆ ಮುಖವುಳ್ಳ ದೇವಿಯೇ, ಕೇಳು. ಯಾವನು ಭಯಭಕ್ತಿಯಿಂದ ನನ್ನನ್ನು ಧ್ಯಾನಿಸುವನೋ, ಯಾವನು ಭಸ್ಮರುದ್ರಾಕ್ಷಾದಿಗಳಿಂದ ಅಲಂಕೃತನಾಗುವನೋ, ಅವನು ಮಹಿಮೆಯಲ್ಲಿ ನನಗೆ ಸಮನಾಗುವನು. ಸಂಪೂರ್ಣ ಭಾಗ್ಯಶಾಲಿಯೆನಿಸಿ ನನ್ನ ಪ್ರೀತಿಗೆ ಅವನೇ ಪಾತ್ರನೆನಿಸುವನು. ॥೩೭॥

ಶಿವಪಂಚಾಕ್ಷರೀ ಮಂತ್ರದಲ್ಲಿ ಭಕ್ತಿಯಿಟ್ಟು ಅದನ್ನು ಜಪಿಸುವ ಮನುಜನು ಹೊಂದುವ ದಿವ್ಯಸ್ಥಾನವನ್ನು ಸಂಸಾರದಲ್ಲಿ ವೈರಾಗ್ಯಹೊಂದಿ, ಜಿತೇಂದ್ರಿಯನೆನಿಸಿದ ಸಂನ್ಯಾಸಿಯೂ ಪಡೆಯಲಾರನು. ಶ್ರೀ ರುದ್ರಪಾರಾಯಣದಲ್ಲಿ ಅಭಿಮಾನವಿಟ್ಟವನು, ಜನನಮರಣಾತ್ಮಕವಾದ ಸಂಸಾರಸಾಗರದಲ್ಲಿ ಸುಖವನ್ನು ಅನುಭವಿಸಿ, ಶ್ರೀಮನ್ನಾರಾಯಣನ ಪಾಪವನ್ನು ಸಹ ನಿರ್ಮೂಲಗೊಳಿಸುವಷ್ಟು ಮಹಾಪುಣ್ಯಶಾಲಿಯಾಗುವನು. ॥೩೮॥

ಹರ ಹರ ಶಿವಶಂಕರ ತ್ರಿಶೂಲಿನ್
ಇತಿ ನಾಮ್ನೈವ ವಿಮುಕ್ತಪಾಪಸಂಘಃ ।
ಯದಿ ಹೃದಿ ಮಮ ಪಾದಧ್ಯಾನಧಾರಾನುರಕ್ತೋ
ಭವತಿ ಕಲಿಜಮರ್ತ್ಯೋ ಮುಕ್ತಿಸಕ್ತೋ ವಿಶಿಷ್ಟಃ ॥೩೯॥

ಮಮಾವಿಮುಕ್ತೇ ಶತರುದ್ರಜಾಪೀ
ಪರಾಂ ವರಾಂ ಮುಕ್ತಿಮುಪೈತಿ ಶಶ್ವತ್ ।
ನಿಶ್ಚಿತ್ಯ ಪಂಚಾಕ್ಷರಮಂತ್ರ ಜಾಪೀ
ಕ್ಷೇತ್ರೇಷು ವಾ ತಸ್ಯ ಕುತೋ ಜನಿರ್ಹಿ ॥೪೦॥

ಭುವಿ ಭಾರತವರ್ಷಮೇತದ್ಗಿರಿಜೇ
ರಾಜತಿ ಪುಣ್ಯಮಾರ್ಗದಾನೇ ।
ಇದಮಾಸಾದ್ಯ ನರೋತ್ತಮೋ ವರೋ ವಾ
ನ ಹಿ ತಿಷ್ಠೇದ್ವಿಷಯೇಷು ದುಃಖಭಾವಃ ॥೪೧॥

---

ಕಲಿಯುಗದಲ್ಲಿ ಹರ, ಶಿವ ಎಂಬ ನನ್ನ ನಾಮಗಳನ್ನುಚ್ಚರಿಸುತ್ತಾ, ಹೃದಯದಲ್ಲಿ ನನ್ನ ಪಾದಧ್ಯಾನಮಾಡುವ ಮಾನವನು, ಪಾಪಶೇಷದಿಂದ ದೂರನಾಗಿ ಮುಕ್ತಿಪಾತ್ರನೆನಿಸುವನು. ಅವನಿಗೆ ಕಲಿಯುಗದ ಯಾವ ದುಃಖವೂ ಪೀಡಿಸಲಾರದು. ಇದು ನಿಜ. ॥೩೯॥

ಅವಿಮುಕ್ತಕ್ಷೇತ್ರವೆನಿಸಿದ ಕಾಶಿಯಲ್ಲಿ ಶತರುದ್ರಾಧ್ಯಾಯವನ್ನು ಜಪಿಸುವವನಿಗೂ, ಶಿವಕ್ಷೇತ್ರಗಳಲ್ಲಿ ಶಿವಪಂಚಾಕ್ಷರಮಂತ್ರವನ್ನು ಪುರಶ್ಚರಣೆಮಾಡುವವನಿಗೂ ಪುನಃ ಜನ್ಮವೆಲ್ಲಿ ಬರುವುದು? ಜನನಮರಣರಹಿತವಾದ ಮೋಕ್ಷವೇ ಅವನಿಗೆ ಅದರಿಂದ ಲಭಿಸುವುದು. ॥೪೦॥

ದೇವಿಯೇ, ಪ್ರಪಂಚದಲ್ಲಿ ಈ ಭರತಖಂಡವೆಂಬುದು ಜನರಿಗೆ ಪುಣ್ಯಮಾರ್ಗವನ್ನು ತೋರಿಸುವುದರಲ್ಲಿ ಖ್ಯಾತಿಪಡೆದಿದೆ. ಇಂತಹ ಭರತಖಂಡದಲ್ಲಿ ಜನಿಸಿದ ಯಾವ ಮನುಜನೇ ಆದರೂ ವಿಷಯಸುಖಗಳಲ್ಲಿಯೇ ಮನಸ್ಸಿಟ್ಟು ಸದಾ ದುಃಖಭಾಗಿಯಾಗಿರಭಾರದು. ॥೪೧॥

ತ್ರಿಲೋಚನ ವಿಲೋಕನೇ ಮತಿರುದೇತಿ ಭಾಗ್ಯೋದಯೈ ।
ರಭಾಗ್ಯನಿಧನಕ್ಷಮಾ ಕ್ಷಯುಗದಾದಿನಾಶ ಪ್ರದಾ ।
ಕ್ಷಪಾಪತಿಕಲಾಧರಂ ಕ್ಷಪಿತ ಪಾಪವಿಕ್ಷೇಪಹೃತ್ ।
ಕ್ಷಣಂ ಹೃದಿ ಸಮರ್ಚಯನ್ ಸಕಲ ಪುಣ್ಯನಿಕ್ಷೇಪಕೃತ್ ॥೪೨॥

ಶರ್ವಸ್ಪರ್ಶೇನ ಸರ್ವೋ ಭವತಿ ವಿಮಲತರಃ ಖರ್ವಪಾಪಾದಿಹೀನೋ
ಹೀನೋಽಪಿ ಸ್ಯಾದಹೀನಾಧ್ವರಫಲಭೃಚ್ಚೋರ್ವರಾದಾನಕೃತ್ಸ್ನಃ ।
ಯೋ ವಾ ಕೋವಾಪಿ ಲೋಕೇ ಪ್ರಥಿತಜನಿಜರಾನಾಶದೋಷೇಽಸ್ತದೋಷೇ
ದೇವಿ ಶ್ರೀಮತ್ಪ್ರದೋಷೇ ಅಪಚಿತಿಪರಮೋ ನೋಚಿತೋ
ದುಃಖಭೋಗೇ ॥೪೩॥

ಯಸ್ಯಾಂಗಸಂಗಜನಿತೋತ್ತಮಪಾಪಭಂಗೋ
ಲಿಂಗಾರ್ಚನೇನ ನಿರಯಂ ವಿಲಯಂ ವ್ರಜೇತ ।
ಯೋ ಮತ್ಕಥಾಸ್ತುತಿವಿಧೌ ಸಕಲಾಘಧೂತೋ
ಧಾತುಃ ಪ್ರಮಾರ್ಷ್ಟಿ ಫಲಕೇ ಲಿಪಿಜಾತರೇಖಾಂ ॥೪೪॥

---

ಪುಣ್ಯಶಾಲಿಗಳಿಗೆ ಮಾತ್ರ ದೌರ್ಭಾಗ್ಯನಾಶಕವೂ, ರೋಗಾದಿ ದುಃಖಧ್ವಂಸಕವೂ ಆದ ಈಶ್ವರಭಕ್ತಿಯು ತ್ರಿಲೋಚನನೆನಿಸಿದ ನನ್ನ ವಿಷಯದಲ್ಲಿ ಶ್ರಮದಿಂದ ಉಂಟಾಗುವುದು. ಚಂದ್ರಕಲೆಯನ್ನು ಶಿರದಲ್ಲಿ ಧರಿಸಿ, ಸಮಸ್ತಪಾಪವನ್ನೂ ನಾಶಗೊಳಿಸುವ ಶಂಕರಮೂರ್ತಿಯನ್ನು ಪುಣ್ಯಸಿದ್ಧಿಯೆನಿಸಿದವನು ಮಾತ್ರ ಸದಾ ಧ್ಯಾನಿಸಿ ಅರ್ಚಿಸಿ ಸುಖಪಡುವನು. ॥೪೨॥

ಶಿವಲಿಂಗ ಸ್ಪರ್ಶದಿಂದ ಸಕಲ ಮಾನವರು ಎಷ್ಟೇ ಪಾಪಿಷ್ಠರಾಗಿದ್ದರೂ, ಪಾಪಮುಕ್ತರಾಗಿ ಪವಿತ್ರರೆನಿಸುವರು. ಅದೂ ಅಲ್ಲದೆ ಜನನಮರಣರಹಿತವಾದ ಮೋಕ್ಷವನ್ನು ಅನುಗ್ರಹಿಸುವ ಪವಿತ್ರವಾದ ಪ್ರದೋಷಕಾಲದಲ್ಲಿ ನನ್ನ ಅರ್ಚನೆಯಲ್ಲಿ ತೊಡಗಿದವನಿಗೆ ಯಾವ ದುಃಖಾನುಭವವೂ ಕಾಣಲಾರದು. ಅವನೇ ಪರಮ ಸುಕೃತಿಯೆನಿಸುವನು. ॥೪೩॥

ಯಾವನು ಶಿವಲಿಂಗಕ್ಕೆ ಪೂಜಾದಿಗಳನ್ನು ನೆರವೇರಿಸಿ, ಪಾಪವನ್ನು ಕಳೆದುಕೊಳ್ಳುವನೋ, ಅವನಿಗೆ ಸಮಸ್ತ ನರಕವೂ ತಪ್ಪುವುದು. ಅಲ್ಲದೆ ನನ್ನ ಕಥಾಶ್ರವಣ

ಮದಾಲಯಕರೋಂಬಿಕೇ ಭವತಿ ಪೂರ್ವಪುಣ್ಯೋದಯೈಃ
ಸುದೀಪವರದಾನಕೃದ್ವಿಮಲಧೂಪನೋದಪ್ರದಃ ।
ಭವೇಮ ವಿಭವೇಪಿ ಯಃ ಪ್ರತಿಭವೇಪಿ ಭಾವಾದರೋ
ಭವಾಯ ಜಗತಾಂ ಶಿವೇ ಸ ಭವತೇ ಗಣೇಷೂತ್ತಮಃ ॥೪೫॥

ಪ್ರಾತಸ್ಸಂಗಪುಂಗವೋರುವಹನ ಶ್ರೀದಿವ್ಯಲಿಂಗಾರ್ಚಕಃ
ಸಾಯಂ ವಾಪಿ. ಉಮಾಸಹಾಯಮಗಜೇ ವೀಕ್ಷೇತ ವಾ ಹೃಷ್ಟಧೀಃ ।
ತೇನೈವಾಧ್ವರಕೋಟಯೋ ವಿಧಿಹುತಾ ತೇನೈವ ದತ್ತೋರ್ವರಾ
ತೇನಾಘ್ಯಾದಿಗಜಾಶ್ವಕಾಂಚನವರಂ ದತ್ತಂ ದ್ವಿಜೇಭ್ಯಃ ಶಿವೇ ॥೪೬॥

ಏವಂ ದಶೈವ ವಿಹಿತಾ ಮಮ ತೋಷಧರ್ಮಾಃ
ಮುಕ್ತಿಪ್ರದಾ ಭುವಿ ನರೇಷು ಶಿವೇ ಸದೈವ ।

---

ದಲ್ಲಿ ಆದರವುಳ್ಳವನು ಪಾಪರಹಿತನಾಗಿ, ಬ್ರಹ್ಮನು ಹಣೆಯಲ್ಲಿ ಬರೆದಿದ್ದ ಕರ್ಮಫಲವನ್ನು ಸಹ ಬದಲಾಯಿಸಿಕೊಳ್ಳಬಲ್ಲನು. ॥೪೪॥

ಅಂಬಿಕೆಯೇ, ಮಾನವನು ತನ್ನ ಅನೇಕ ಪುಣ್ಯವಶದಿಂದ ನನ್ನ ದೇವಾಲಯ ನಿರ್ಮಾಣಕ್ಕೆ ಪ್ರಯತ್ನಿಸುವನು. ಹಾಗೆಯೇ ಶ್ರೇಷ್ಠವಾದ ದೀಪ, ಧೂಪ ಮುಂತಾದುವುಗಳಿಂದ ನನಗೆ ಆನಂದವನ್ನುಂಟುಮಾಡುವನು. ಅಂತಹ ಪುಣ್ಯಶಾಲಿಯು ಪ್ರತಿ ಜನ್ಮದಲ್ಲಿಯೂ ನನ್ನ ಭಕ್ತನಾಗಿ ಜನಿಸಿ, ಕೊನೆಯಲ್ಲಿ ನನ್ನ ದಿವ್ಯಗಣಶ್ರೇಷ್ಠರಲ್ಲಿ ಒಬ್ಬನೆನಿಸುವನು ॥೪೫॥

ಪ್ರಾತಃ, ಸಂಗವ, ಮಧ್ಯಾಹ್ನ, ಪ್ರದೋಷ ಮತ್ತು ರಾತ್ರಿಕಾಲಗಳಲ್ಲಿ ಯಾರು ಭಕ್ತಿಯಿಂದ ಶಿವಲಿಂಗಾರ್ಚನೆ ಮಾಡಿ ಸಂತೋಷದಿಂದ ಶಿವಲಿಂಗವನ್ನು ದರ್ಶನಮಾಡುವರೋ ಅವರೇ ಸಕಲ ಯಜ್ಞಾದಿಗಳನ್ನು ಆಚರಿಸಿದವರ ಫಲವನ್ನು ಪಡೆಯುವರು. ಅದೂ ಅಲ್ಲದೆ ದ್ವಿಜರಿಗೆ ಅಮೂಲ್ಯವಾದ ಆನೆ, ಕುದುರೆ, ಸುವರ್ಣ, ಗೃಹ ಮೊದಲಾದ ದಿವ್ಯವಸ್ತುಗಳ ದಾನದಿಂದ ಲಭಿಸುವ ಸುಕೃತವನ್ನೂ ಪಡೆಯುವರು. ॥೪೬॥

ಹೀಗೆ ದರ್ಶನಸ್ಪರ್ಶನಾದಿ ದಶವಿಧಭಕ್ತಿಕ್ರಿಯೆಗಳು ನನಗೆ ಸಂತೋಷವನ್ನುಂಟುಮಾಡತಕ್ಕವುಗಳು. ಅಲ್ಲದೆ ಭಕ್ತರಿಗೆ ಮುಕ್ತಿಯನ್ನೂ ಕೊಡಬಲ್ಲುವು ಮತ್ತು ಪಾರ್ವತಿಯೇ, ಈ ನನ್ನ ಇತಿಹಾಸವೆಂಬುದು ಜೇನುತುಪ್ಪದಂತೆ ಬಹುಸಾರ

ಅಸ್ಯೇತಿಹಾಸಮಧುನಾಮಧು ಸಾರಭೂತಂ
ಧಾರ್ಯಂ ತ್ವಯಾ ಶಿವರಹಸ್ಯಸಮುದ್ರಮಧ್ಯೇ ॥೪೭॥

ನಾಮ್ನಾ ಖ್ಯಾತೇಶ್ವರೋಽಯಂ ಜನಿಮೃತಿನಿದಶಾನಾಶಕೋಽಯಂ ಭವಾನಿ
ಅಂಶೋಽಯಂ ದಶಮಃ ಸದಾ ಶಶಿಕಲಾಚೂಡಾಂಘ್ರಿಭಕ್ತಿಪ್ರದಃ ।
ಅಧ್ಯಾಯಾಧ್ಯಯನೇನ ಸಂಸೃತಿಭವಂ ದುಃಖಂ ನ ಸ ಧ್ಯಾಯತಿ
ಧ್ವಾಂತಧ್ವಂಸನಮೇತದೇವ ಗಿರಿಜೇ ಪುಣ್ಯಂ ಶತಾಧ್ಯಾಯಕಂ ॥೪೮॥

॥ ಶ್ರೀಸ್ಕಂದ ಉವಾಚ ॥

ಇತ್ಯುಕ್ತಂ ಶಶಿಶೇಖರೋತ್ತಮವಚಃಪೀಯೂಷಮಾಧ್ವೀಝರೀ
ಧಾರಾನಂದಹೃದಾ ಗಿರೀಂದ್ರವರಜಾ ಜಾತಾ ಚ ಹರ್ಷಾಂತರಾ ।
ತೇನೈವೋಕ್ತಮಪಾರಸುಂದರಮಹಾಸಾರಾನುಧಾರಾರಸ
ಸ್ಫಾರಾಮೋದಮುದಾಯುತೇ ಪುನರಹಂ ವಿಸ್ತೃತ್ಯ ವಕ್ಷ್ಯೇ ಮುನೇ ॥೪೯॥

---

ವಾದದ್ದು. ಅದೂಅಲ್ಲದೆ ಈ ದಶಮಾಂಶದ ಕಥೆಯೆಂಬುದು ಶಿವರಹಸ್ಯವೆಂಬ ಸಮುದ್ರಮಧ್ಯದಲ್ಲಿ ಜನಿಸಿದ ಸುಧಾಸಮವಾದುದೆಂಬುದಾಗಿ ತಿಳಿ. ॥೪೭॥

ಭವಾನಿಯೇ, ಈ ದಶಮಾಂಶವು ಈಶಾನನಾಮಕವಾದುದು. ಉತ್ಪತ್ತಿ ಮರಣರೂಪವಾಗಿರುವ ಸಂಸಾರದುಃಖವನ್ನು ನಿವಾರಿಸಿ, ನನ್ನ ಅನುಗ್ರಹವನ್ನು ಒದಗಿಸುವ ಸಾಮರ್ಥ್ಯವು ಈ ಅಂಶಕ್ಕಿರುವುದು. ಈ ದಶಮಾಂಶವನ್ನು ಭಕ್ತಿಯಿಂದ ಓದುವವನಿಗೆ ಸಕಲದುಃಖಗಳೂ ಕಣ್ಮರೆಯಾಗುವುವು ಮತ್ತು ಒಂದು ನೂರು ಅಧ್ಯಾಯಗಳುಳ್ಳ ಈ ಅಂಶವು ಆಸ್ತಿಕನ ಅಜ್ಞಾನವೆಂಬ ಕತ್ತಲೆಯನ್ನು ನಿಜವಾಗಿಯೂ ನಾಶಗೊಳಿಸುವುದು. ॥೪೮॥

ಹೀಗೆ ಹೇಳಿದ ಶಂಕರನ ಮಾತುಗಳನ್ನು ಕುಮಾರಸ್ವಾಮಿಯು ಜೈಗೀಷವ್ಯ ಮಹರ್ಷಿಗೆ ತಿಳಿಸುತ್ತಾ 'ಮಹರ್ಷಿಯೇ, ಈ ಮಹಾದೇವನ ವಾಣಿಯು ಅಮೃತ ಪ್ರವಾಹಕ್ಕೆ ಸಮಾನವಾದುದು ; ಆನಂದ ಭಾರವನ್ನು ಹೊರಿಸಬಲ್ಲುದು. ಅದನ್ನು ಕೇಳಿದೊಡನೆಯೇ ಪಾರ್ವತಿಯು ಅತ್ಯಂತ ಹರ್ಷಗೊಂಡಳು. ಮುಂದೆಯೂ ಪಾರ್ವತಿಯು ಅದೇರೀತಿ ಸಂತೋಷಪಡುವಂತೆ ರಸಪೋಷಕವಾಗಿ ಶಿವರಹಸ್ಯವನ್ನು ಹೇಳಲು ಶಂಕರನು ಉಪಕ್ರಮಿಸಿದನು. ಅದೇ ಸಾರವಾದ ಇತಿಹಾಸವನ್ನು ಇನ್ನೂ ವಿಸ್ತಾರಮಾಡಿ ನಿನಗೆ ಈಗ ಹೇಳಬಯಸುವೆನು. ॥೪೯॥

ಅಂಶೋಽಯಂ ಶಶಿಶೇಖರೇಣ ಕಥಿತಃ ಪೂರ್ವಾಪರಾರ್ಧಾತ್ಮಕಃ ।
ಅಧ್ಯಾಯಾರ್ಧಶತೇನ ತದ್ವರಮತೋ ಪುಣ್ಯೇತಿಹಾಸೋಮಹಾನ್ ॥
ನಾನಾರ್ಥಾನುರಸೈಕಧೀರಸರಸಪ್ರೇಮಾಸ್ಪದೋ ವೈ ಮುದೇ ।
ಶೃಣ್ವನ್ಸ್ವೈ ಸತತಂ ಮಹಾಘಗಿರಿಭಿದ್ವಜ್ರಂ ಸುಖಾಯಾಸ್ತು ತೇ ॥೫೦॥

ಇತಿ ಶ್ರೀಶಿವರಹಸ್ಯೇ ಈಶಾನಾಖ್ಯೇ ದಶಮಾಂಶೇ
ಪ್ರಥಮೋಽಧ್ಯಾಯಃ

---

ಪೂರ್ವಾರ್ಧ, ಉತ್ತರಾರ್ಧವೆಂಬ ಹೆಸರಿನಿಂದ ಈ ದಶಮಾಂಶವು ಎರಡು ಭಾಗವಾಗಿದೆ. ಎರಡೂ ಐವತ್ತು ಅಧ್ಯಾಯಗಳಿಂದ ಕೂಡಿವೆ. ಇದರಲ್ಲಿ ಕಂಡು ಬರುವ ಇತಿಹಾಸಗಳೆಲ್ಲವೂ ಶಿವಭಕ್ತಿಪ್ರದವಾದವುಗಳು. ಮತ್ತು ನಾನಾರ್ಥಪ್ರದ ವಾದ ಪದಗಳಿಂದ ಕೂಡಿದ ಈ ದಶಮಾಂಶವನ್ನು ಭಕ್ತಿಯಿಂದ ಕೇಳುವವನು ಮಹ ತ್ತಾದ ಪಾಪಪರ್ವತಗಳನ್ನು ಭೇದಿಸುವ ವಜ್ರಾಯುಧದಂತಾಗುವನು. ಇದನ್ನು ಕೇಳುವುದರಿಂದ ನಿನಗೆ ಅತಿಶಯವಾದ ಸೌಖ್ಯವು ಲಭಿಸುವುದು, ಎಂದು ಸ್ಕಂದ ಸ್ವಾಮಿಯು ಜೈಗೀಷವ್ಯಾದಿಗಳಿಗೆ ಹೇಳಿದನು. ॥೫೦॥

ಇಲ್ಲಿಗೆ ಶ್ರೀಶಿವರಹಸ್ಯದ ಹತ್ತನೆಯ ಅಂಶದಲ್ಲಿ ಮೊದಲನೆಯ ಅಧ್ಯಾಯವು
ಸಮಾಪ್ತವಾದುದು.

॥ ಶ್ರೀಃ ॥

॥ ಶ್ರೀ ಶಿವಾಯ ನಮಃ ॥

# ಅಥ ಶ್ರೀಶಿವರಹಸ್ಯೇ

## ಈಶಾನಾಖ್ಯೇ

## ದಶಮಾಂಶಪೂರ್ವಾರ್ಧೇ

## ದ್ವಿತೀಯೋಽಧ್ಯಾಯಃ

॥ ಶ್ರೀಸ್ಕಂದ ಉವಾಚ ॥

ಶಿವಸಂಸ್ಪರ್ಶಜಾ ಲೋಕಭಸ್ಮರುದ್ರಾಕ್ಷಧಾರಿಣಾಂ ।
ರುದ್ರಪಂಚಾಕ್ಷರಮನೋರ್ನಾಮ್ನಾಮೀಶಸ್ಯ ಕೀರ್ತ್ಯತಾಂ ॥೧॥

ಕ್ಷೇತ್ರೇ ನಿವಸತಾಂ ವಿಪ್ರ ಭಕ್ತ್ಯಾರ್ಚನರತಾತ್ಮನಾಂ ।
ಪ್ರದೋಷೇ ಸೋಮವಾರೇಷು ಭೂತಾಷ್ಟಮ್ಯೋರ್ಮಹೇಶಿತುಃ ॥೨॥

ನಕ್ತಪೂಜನಮಾಹಾತ್ಮ್ಯಂ ಸೇತಿಹಾಸಂ ವದಾಮ್ಯಹಂ ।
ಪ್ರಾಕಾರಮಂಟಪಾರಾಮಗೋಪುರೋತ್ಸವಕಾರಿಣಾಂ ॥೩॥

---

## ಎರಡನೆಯ ಅಧ್ಯಾಯವು

ಸ್ಕಂದಸ್ವಾಮಿಯು ಜೈಗೀಷವ್ಯಾದಿಗಳನ್ನು ಕುರಿತು, ಈಶ್ವರಸಂಸ್ಪರ್ಶದಿಂದ ಜನಿಸಿ ಚಂದ್ರಿಕೆಯಂತೆ ಹೊಳೆಯುವ ಭಸ್ಮ, ರುದ್ರಾಕ್ಷಿ ಇವುಗಳನ್ನು ಧರಿಸಿ, ಶಿವ ಪಂಚಾಕ್ಷರ ಮಂತ್ರವನ್ನುಚ್ಚರಿಸಿದವರ ಇತಿಹಾಸಗಳನ್ನೂ, ಹಾಗೆಯೇ ಶಿವನಾಮಗಳ ಮಹಿಮೆಯನ್ನೂ ವಿವರಿಸುತ್ತಾ " ಜೈಗೀಷವ್ಯಾದಿಗಳೇ, ಈಗ ಈಶ್ವರಭಕ್ತರು ನೆಲಸಿ ರುವ ಶಿವಕ್ಷೇತ್ರಗಳ ಮಹಿಮೆಯನ್ನೂ, ಸೋಮವಾರ ಪ್ರದೋಷಕಾಲಗಳು, ಕೃಷ್ಣಾ ಷ್ಟಮೀ, ಕೃಷ್ಣ ಚತುರ್ದಶೀ ಈ ತಿಥಿಗಳಲ್ಲಿ ಶಿವಾರ್ಚನೆಮಾಡಿದವರ ಫಲವನ್ನೂ ಕೇಳಿರಿ " ಎಂದು ಅದನ್ನು ಹೇಳಲು ಉಪಕ್ರಮಿಸಿದನು. ॥೧-೨॥

' ಜೈಗೀಷವ್ಯಾದಿಗಳೇ, ಈಗ ರಾತ್ರಿವೇಳೆಯ ಶಿವಪೂಜೆಯ ಮಹಿಮೆಯನ್ನು ಇತಿಹಾಸದ ಮೂಲಕ ನಿಮಗೆ ತಿಳಿಸುವೆನು. ಹಾಗೆಯೇ ಶಿವಾಲಯ, ಗೋಪುರ,

ಪುಷ್ಪಜಾತಿವಿಶೇಷೇಣ ಕಾಲೇ ಕಾಲೇರ್ಚನಸ್ಯ ಹಿ ।
ಶಿವೇನ ಕಥಿತಂ ವಿಪ್ರ ಶೈಲಜಾಯೈ ವಿಶೇಷಶಃ ॥೪॥

ಹಂತ ತೇ ಕಥಯಿಷ್ಯಾಮಿ ಮಹಿಮಾನಂ ವಿಶೇಷತಃ ॥೫॥

॥ ಮುನಿರುವಾಚ ॥

ಕಿಮುಕ್ತಂ ದೇವದೇವೇನ ಶಿವೇನ ಪರಮಾತ್ಮನಾ ।
ಕೈಲಾಸಸದನೇ ದೇವ್ಯೈ ಮದನಾಂತಕರೇಣ ಹಿ ॥೬॥

ತನ್ಮೇ ಕ್ರೌಂಚರಿಪೋ ಬ್ರೂಹಿ ನಿಸ್ತಾರಂ ವಿಸ್ತರಾದ್ಧಿ ಮೇ ॥೭॥

॥ ಸೂತ ಉವಾಚ ॥

ಜೈಗೀಷವ್ಯವಚಶ್ಶ್ರುತ್ವಾ ಸ್ಕಂದಃ ಸೂದಿತತಾರಕಃ ।
ಬಭಾಷೈತತ್ತದಾ ವಿಪ್ರಾಸ್ತಚ್ಛೃಣುಧ್ವಂ ವಿಶೇಷತಃ ॥೮॥

॥ ಸ್ಕಂದ ಉವಾಚ ॥

ಪ್ರಣಮ್ಯ ಭಕ್ತಾನ್ ಸಂಸ್ತೌಮಿ ಪೂರ್ವಭಸ್ಮಾನುಲೇಪನಾನ್ ।
ತ್ರ್ಯಾಜ್ಯೋಽಸ್ಯ ಕಲ್ಪಸಂಗ್ರಾಮಸ್ತ್ರಯಃ ಕಲ್ಪಾಃ ಶಿವೋದಿತಾಃ ॥೯॥

---

ಪ್ರಾಕಾರ, ಮಂಟಪ, ಉದ್ಯಾನ, ಶಿವೋತ್ಸವ ಇವುಗಳನ್ನು ಏರ್ಪಡಿಸುವವರ ಮತ್ತು ಕಾಲಕಾಲದಲ್ಲಿ ಬೇರೆ ಬೇರೆ ಪುಷ್ಪಗಳ ಅರ್ಚನಾಫಲವನ್ನೂ ನಿಮಗೆ ತಿಳಿಯಪಡಿಸುವೆನು. ಈ ವಿಷಯಗಳೆಲ್ಲವನ್ನೂ ಹಿಂದೆ ಪರಶಿವನು ಪಾರ್ವತಿಗೆ ಹೇಳಿದ್ದನೆಂಬುದನ್ನು ತಿಳಿಯಿರಿ. ಅದರ ಮಹಿಮೆಯನ್ನೆಲ್ಲಾ ಮುಂದೆ ವಿವರಿಸುವೆನು. ॥೩-೪-೫॥

ಷಣ್ಮುಖದೇವನು ಹಾಗೆಂದೊಡನೆಯೇ, ಜೈಗೀಷವ್ಯನು ಅತ್ಯಾಸಕ್ತಿಯಿಂದ ಕುಮಾರಸ್ವಾಮಿಯನ್ನು ವಿಧವಿಧವಾಗಿ ಪ್ರಾರ್ಥಿಸುತ್ತಾ ಕೈಲಾಸದಲ್ಲಿ ಪರಶಿವನು ಪಾರ್ವತಿಗೆ ಹೇಳಿದ ವಿಷಯವನ್ನೆಲ್ಲಾ ವಿಸ್ತಾರವಾಗಿ ಹೇಳಬೇಕೆಂದು ಪ್ರಾರ್ಥಿಸಿಕೊಳ್ಳಲು, ಜೈಗೀಷವ್ಯನ ಪ್ರಾರ್ಥನೆಯಂತೆ, ತಾರಕಾಸುರನಾಶಕನಾದ ಕುಮಾರಸ್ವಾಮಿಯು ಎಲ್ಲ ವಿಷಯವನ್ನೂ ವಿಸ್ತಾರವಾಗಿ ಬೋಧಿಸಿದನೆಂದು ಸೂತಮಹರ್ಷಿಗಳು ವಾಜಶ್ರವಸಾದಿಗಳಿಗೆ ಹೇಳತೊಡಗಿದರು. ॥೬-೭-೮॥

ಜೈಗೀಷವ್ಯಮಹರ್ಷಿಯೇ, ಮೊದಲು ಭಸ್ಮಸ್ವರೂಪವನ್ನೂ ಅದನ್ನು ಧರಿಸುವ ಕ್ರಮವನ್ನೂ ವಿವರವಾಗಿ ತಿಳಿಸುವೆನು. ಪರಶಿವನು ತಾನೇ ಭಸ್ಮವನ್ನು

ತ್ರಿಧಾಲಪಿತಭಸ್ಮಶ್ರೀಕಥನಂ ಮೋಹನಾಶನಂ ।
ಕಲ್ಪಾನುಕಲ್ಪೋಪಕಲ್ಪಾ ಇತಿ ಭಸ್ಮಸಮುದ್ಭವಾಃ ॥೧೦॥

ಪುರಾರಿಣಾ ಪುರಾ ಪ್ರೋಕ್ತಾಃ ಕ್ರಮೇಣ ಕಥಯಾಮಿ ತಾನ್ ।
ಪಂಚಾನನಾಭಿಷೇಕಾರ್ಹಪಂಚಗವ್ಯಪ್ರಸೂತಯಃ ॥೧೧॥

ಚಿರಪ್ರಸೂತಾ ಗಾವೋ ಯಾ ಭವಂತೀತಿ ಚರೋಮಯಾ (?) ।
ಕರಾಭ್ಯಾಂ ಶುಚಿನಾ ತಾಸಾಮಾದೇಯಂ ಗೋಮಯಂ ನವಂ ॥೧೨॥

ಶಿವಾನಲೇ ವಿಧೇಯಂ ತಚ್ಛಿವಮಂತ್ರೇಣ ಗೋಮಯಂ ।
ಶಿವಮಂತ್ರೇಣ ತದ್ಭಸ್ಮ ಜಾಯತೇ ಬೋಧದಾಯಕಂ ॥೧೩॥

ಇದಂ ಹಿ ಕಲ್ಪಸಂಭೂತಂ ಭಸ್ಮಧಾರ್ಯಂ ಶಿವಾರ್ಚಕೈಃ ।
ಶುಷ್ಕಂ ಗೋಮಯಮಾರಣ್ಯಂ ಚೂರ್ಣಯಿತ್ವಾ ಯಥಾವಿಧಿ ॥೧೪॥

ಗೋಮೂತ್ರೇಣ ಸಮೂಹಸ್ಯ ವಿಶೋಧ್ಯೇಶಾನಮಂತ್ರತಃ ।
ಪಿಂಡೀಕೃತ್ಯ ಚ ತತ್ಕ್ಷಿಪ್ತ್ವಾ ಜ್ವಲಿತೇ ಹೋಮಪಾತಕೇ ॥೧೫॥

---

ಮೂರು ರೀತಿ ವಿಂಗಡಿಸಿ ಹೇಳಿರುವನು. ಅದು ಕಲ್ಪ, ಅನುಕಲ್ಪ, ಉಪಕಲ್ಪಗಳೆಂಬ ಮೂರು ಹೆಸರುಗಳ ವಿಧಿಗಳಿಂದ ಭಸ್ಮವುಂಟಾಗಿ, ಭಕ್ತರ ಅಜ್ಞಾನವನ್ನು ನಾಶ ಮಾಡಬಲ್ಲುದು. ॥೯-೧೦॥

ಈಗ ಸಾಕ್ಷಾತ್ಪರಮೇಶ್ವರನೇ ಹೇಳಿದ ಭಸ್ಮರಚನಾವಿಧಾನಕ್ರಮವನ್ನು ವಿವರಿಸಿ ಹೇಳುವೆನು. ಪರಶಿವನ ಅಭಿಷೇಕದ್ರವ್ಯವೆನಿಸಿದ ಪಂಚಗವ್ಯಗಳನ್ನು ಅಂದರೆ, ಹಾಲು, ಮೊಸರು, ತುಪ್ಪ, ಗೋಮಯ, ಗೋಮೂತ್ರಗಳನ್ನೂ ಒದಗಿಸುವ ಹಳೇ ಹಸುವಿನ ಹೊಸ ಸಗಣಿಯನ್ನು ಶುದ್ಧವಾದ ಕೈಗಳಿಂದ ಎತ್ತಿ ತರಬೇಕು.॥೧೧-೧೨॥

ಅದನ್ನು ಶಿವಪೂಜಾರ್ಥವಾಗಿ ಮಂತ್ರಸಿದ್ಧವಾದ ಅಗ್ನಿಯಲ್ಲಿ ಶಿವಮಂತ್ರ ಪೂರ್ವಕವಾಗಿಟ್ಟು ಭಸ್ಮಮಾಡಿದರೆ ಅದಕ್ಕೆ ಕಲ್ಪಭಸ್ಮವೆಂಬ ಹೆಸರು ಬರುವುದು. ಅದನ್ನು ಶಿವಪೂಜಕರು ಉತ್ತಮಭಸ್ಮವೆಂದು ಧರಿಸುವರು. ಅಥವಾ ಅರಣ್ಯದಲ್ಲಿ ಬಿದ್ದಿರುವ ಕಾಡುಬೆರಣಿಯನ್ನು ತಂದು ಪುಡಿಮಾಡಿ, ಗಂಜಲದಲ್ಲಿ ಬೆರಸಿ, ಸೋಸಿ, ಶಿವಮಂತ್ರೋಚ್ಚಾರಣೆಮಾಡುತ್ತಾ, ಅದನ್ನು ಉಂಡೆಯನ್ನಾಗಿಮಾಡಿ, ಹೋಮಾಗ್ನಿಯಲ್ಲಿ ಭಸ್ಮಮಾಡಬೇಕು. ॥೧೩-೧೪-೧೫॥

ತದ್ಭಸ್ಮ ಜಾಯತೇ ಧಾರ್ಯಮನುಕಲ್ಪಸಮುದ್ಭವಂ ।
ಏತತ್ಪೃಥಕ್ಪೃಥಗ್ಭಸ್ಮ ಗೋಮೂತ್ರೇಣಾಭಿಮೃಶ್ಯ ತತ್ ॥೧೬॥

ಪಿಂಡೀಕೃತ್ಯಾದಿಮಂತ್ರೇಣ ಕ್ಷಿಪೇದ್ಭಸ್ಮ ಶಿವಾನಲೇ ।
ತದ್ದಗ್ಧಂ ಭಸಿತಂ ಪ್ರಾಹುರುಪಕಲ್ಪೋಪಕಲ್ಪಿತಂ ॥೧೭॥

ತದ್ಧಾರ್ಯಮೇವ ತದ್ಭಕ್ತೈರಿತಿ ಶಂಕರಶಾಸನಂ ।
ವಾಮೇ ಕರತಲೇ ಭಸ್ಮ ನ್ಯಸ್ಯ ಕೈಶ್ಚನ ಪಾಂಸುಭಿಃ ॥೧೮॥

ಶಿವಾರ್ಚಕಸ್ತದೀಯೈಶ್ಚ ದಿಶೋ ದಶ ನಿರೋಧಯೇತ್ ।
ಅನಲೋ ಹಿ ಮಹಾನ್ರುದ್ರಸ್ತದ್ರೂಪಂ ಭಸ್ಮ ಕಥ್ಯತೇ ॥೧೯॥

ದುರುತ್ಸಹಂ ಚ ತದ್ಭೂಯಃ ಸುಖಸ್ಪರ್ಶಂ ಗುರೋರ್ದಿಶಾ ।
ಮೇಧಾವೀ ಧಾರಯೇದ್ಭಸ್ಮ ಸರ್ವೇಷ್ವವಯವೇಷು ತತ್ ॥೨೦॥

ಮುದ್ರಿತಂ ಪ್ರಣವೇನೈವ ಜಪನ್ ಪಂಚಾಕ್ಷರಂ ಮನುಂ ।
ವಿನಿಯೋಗಾಸ್ತ್ರಯಃ ಪ್ರೋಕ್ತಾಸ್ಸ್ನಾನೋದ್ಧೂಲನಧಾರಣೈಃ ॥೨೧॥

---

ಆದಕ್ಕೆ ಅನುಕಲ್ಪಭಸ್ಮವೆಂದು ಹೆಸರುಬರುವುದು. ಅಥವಾ ಉಳಿದ ಯಾವ ಭಸ್ಮವನ್ನಾದರೂ ತೆಗೆದುಕೊಂಡು, ಅದಕ್ಕೆ ಗೋಮೂತ್ರವನ್ನು ಬೆರಸಿ, ಉಂಡೆ ಮಾಡಿ ಈಶ್ವರಮಂತ್ರದಿಂದ ಅದನ್ನು ಮತ್ತೆ ಭಸ್ಮಮಾಡಿದರೆ, ಆದಕ್ಕೆ ಉಪಕಲ್ಪ ಭಸ್ಮವೆಂದು ಹೆಸರುಬರುವುದು. ಹೀಗೆ ಶುದ್ಧೀಕೃತವಾದ ಭಸ್ಮವನ್ನೇ ಭಕ್ತರಾದವರು ಧರಿಸಬೇಕೆಂದು ಶಿವಾಜ್ಞೆಯಿದೆ. ಭಸ್ಮವನ್ನು ಎಡಗೈಯಲ್ಲಿಟ್ಟು ನೀರಿನಿಂದ ಕಲಸಿ ಶರೀರಕ್ಕೆ ಧರಿಸಬೇಕೇ ಹೊರತು ಪುಡಿಭಸ್ಮವನ್ನು ಲೇಪಿಸಿಕೊಳ್ಳಬಾರದು. ॥೧೬-೧೭-೧೮॥

ಈ ವಿಧವಾದ ಭಸ್ಮಧಾರಣೆಯಿಂದ ಶಿವಾರ್ಚಕನು ದಶದಿಕ್ಕುಗಳಿಂದ ಲಭಿಸುವ ಸಮಸ್ತಪೀಡಾದಿಗಳನ್ನು ಜಯಿಸಬಲ್ಲನು. ಏಕೆಂದರೆ ಈ ಭಸ್ಮವೆಂಬುದು ಸಾಕ್ಷಾದಗ್ನಿಸದೃಶವಾದುದು. ಅಗ್ನಿರೂಪವೇ ಈ ಭಸ್ಮ. ಆದರೆ ಈ ಭಸ್ಮವನ್ನು ಗುರೂಪದೇಶದಿಂದ ಧರಿಸಿದುದೇ ಆದರೆ ಅದು ಸುಖಸ್ಪರ್ಶವೆನಿಸುವುದು. ಆದರಿಂದಲೇ ಬುದ್ಧಿಶಾಲಿಯೆನಿಸಿದವನು ಸರ್ವಾವಯವಗಳಲ್ಲಿಯೂ ಭಸ್ಮಧಾರಣೆ ಮಾಡಿಕೊಳ್ಳಬೇಕು. ॥೧೯-೨೦॥

ಭಸ್ಮಸ್ನಾನ, ಭಸ್ಮೋದ್ಧೂಲನ, ಭಸ್ಮಧಾರಣೆಯೆಂದು ಭಸ್ಮವನ್ನು ಸಾಕ್ಷಾ

ತೀರ್ಥೇ ಸ್ನಾಯಾತ್ತ್ರಿರಾಚಮ್ಯ ಪ್ರಾಙ್ಮುಖೋ ವಾಪ್ಯುದಙ್ಮುಖಃ ।
ಪ್ರಾಣಾನ್ಯಚ್ಛಿನ್ನಘೋರೇಣ ಷಡಂಗೈರ್ನ್ಯಾಸಮಾಚರೇತ್ ॥೨೨॥

ಅಘೋರಮನುಮಂತ್ರೇತು ಪ್ರಾಣಾನಶ್ರಮುಮುಚ್ಚರನ್ ।
ಉಚ್ಚಾರ್ಯೋಂಕಾರಮವ್ಯಗ್ರಃ ಪಾಣಿನಾದಾಯಭಸ್ಮ ತತ್ ॥೨೩॥

ಅಗ್ನಿರಿತ್ಯಾದಿಮನುಭಿಃ ಪ್ರಕ್ಷಿಪೇತ್ಸವ್ಯತಃ ಕರೇ ।
ವಿಕೀರ್ಯ ಕಿಂಚಿತ್ತತ್ಕ್ರೋರ್ವ್ಯಾಂ ಭೂತಾದಿತ್ಯ ಇತಿ ಬ್ರುವನ್ ॥೨೪॥

ನಿಧಾಯ ಪಾಣಿನಾ ಭಸ್ಮ ತಸ್ಯ ಸವ್ಯಕರಸ್ಥಿತಂ ।
ತನ್ಮಂತ್ರೈರಗ್ನಿರಿತ್ಯಾದಿ ಶ್ರೀಕಾರೋಂಕಾರಕೌ ತಥಾ ॥೨೫॥

ಮೂಲಮಂತ್ರಂ ಜಪೇದ್ವಿದ್ವಾನಷ್ಟವಾರಂ ಸ್ವಸಿದ್ಧಯೇ ।
ನಿದಧೇತ್ತತ್ತದಾತ್ಮಜ್ಞಃ ಪರೇಶಾಯಾಂತರಾತ್ಮನೇ ॥೨೬॥

---

ತ್ಕರಿಸಿಕೊಳ್ಳುವುದರಲ್ಲಿ ಮೂರುವಿಧಗಳಿವೆ. ಈ ಮೂರು ಕರ್ಮಗಳಿಗೂ ಮೊದಲು ಪ್ರಣವಮಂತ್ರದಿಂದ ಭಸ್ಮವನ್ನು ಅಂಗೈಲಿಟ್ಟು ಮುಚ್ಚಿಕೊಂಡು, ಶಿವಪಂಚಾಕ್ಷರ ಮಂತ್ರದಿಂದ ಅಭಿಮಂತ್ರಿಸಬೇಕು. ಭಸ್ಮಸ್ನಾನವೆಂದರೆ, ಶುದ್ಧವಾದಜಲದಲ್ಲಿ ಸ್ನಾನಮಾಡಿ ಅನಂತರ ಮೂರು ಆಚಮನಮಾಡಿ, ಪೂರ್ವಾಭಿಮುಖವಾಗಿಯೋ ಉತ್ತರಾಭಿಮುಖವಾಗಿಯೋ ಕುಳಿತು, ಪ್ರಾಣಾಯಾಮಪುರಸ್ಸರವಾಗಿ 'ಅಘೋರೇ ಭ್ಯೋಥಘೋರೇಭ್ಯೋ' ಎಂಬ ಮಂತ್ರದಿಂದ ಅಂಗನ್ಯಾಸ, ಕರನ್ಯಾಸಗಳನ್ನು ಮಾಡಬೇಕು. ॥೨೧-೨೨॥

ಅನಂತರ ಅದೇ ಮಂತ್ರಗಳಿಂದ ಭಸ್ಮವನ್ನು ಸ್ಪರ್ಶಮಾಡುತ್ತಾ, ಪ್ರಣವವನ್ನುಚ್ಚರಿಸುತ್ತಾ ಭಸ್ಮಪಾತ್ರೆಯಿಂದ ಭಸ್ಮವನ್ನು ತೆಗೆದು 'ಅಗ್ನಿರಿತಿ ಭಸ್ಮ' ಎಂಬ ಮಂತ್ರಗಳಿಂದ ಭಸ್ಮವನ್ನು ಎಡ ಅಂಗೈಯಲ್ಲಿಟ್ಟುಕೊಳ್ಳಬೇಕು. ಅನಂತರ ಸ್ವಲ್ಪ ಭಸ್ಮವನ್ನು 'ಭೂತಾದಿತ್ಯಾಯ' ಎಂದು ಹೇಳುತ್ತಾ ಭೂಮಿಯ ಮೇಲೆ ಎರಚಬೇಕು. ಪುನಃ ಸ್ವಲ್ಪ ಭಸ್ಮವನ್ನು ಬಲಗೈಯಲ್ಲಿ ಹಿಡಿದುಕೊಂಡು, ಮೇಲೆ ಹೇಳಿದ 'ಅಗ್ನಿರಿತಿ ಭಸ್ಮ' ಎಂಬ ಮಂತ್ರಗಳನ್ನುಚ್ಚರಿಸುತ್ತಲೇ, ಶ್ರೀಕಾರ ಮತ್ತು ಓಂಕಾರ ಸಹಿತವಾಗಿ ಶಿವಪಂಚಾಕ್ಷರೀ ಮಂತ್ರವನ್ನು ಎಂಟುಸಾರಿ ಜಪಿಸಬೇಕು. ಅನಂತರ ಆತ್ಮಸ್ವರೂಪವನ್ನು ಮನದಲ್ಲಿ ಅನುಸಂಧಾನಮಾಡುತ್ತಾ ಆ ಭಸ್ಮವನ್ನು ಅಂತರಾತ್ಮನಿಗೆ ಸಮರ್ಪಿಸಬೇಕು. ॥೨೪-೨೫-೨೬॥

ಅಭ್ಯುಕ್ಷ್ಯೇಶಾನಮಂತ್ರೇಣ ಮೂರ್ಧ್ನಿ ಸಂಪ್ರೋಕ್ಷ್ಯ ಭಸ್ಮನಾ ।
ಮುಖಂ ತತ್ಪುರುಷೇಣೈವ ಹೃದಯಂ ತದಘೋರತಃ ॥೨೭॥

ಪೂರಕಂ ವಾಮದೇವೇನ ಸದ್ಯೋಜಾತೇನ ಪಾದಕೌ ।
ಓಂಕಾರೇಣಾಂಗಮಖಿಲಮೇವಂ ಸ್ನಾತೋ ಭವೇದ್ಗೃಹೀ ॥೨೮॥

ಪಾದಮಾರಭ್ಯ ಮೂರ್ಧಾಂತಂ ಸದ್ಯೋಜಾತಾದಿಭಿಃ ಕ್ರಮಃ ।
ಯತೀನಾಂ ತು ಮುಮುಕ್ಷೂಣಾಂ ಪಂಚಬ್ರಹ್ಮಭಿರುಚ್ಯತೇ ॥೨೯॥

ವಸಿತಾಥ ಪರಂ ವಸ್ತ್ರಂ ದ್ವಿರಾಚಾಮೇದ್ವಿಧಾನತಃ ।
ನ ಯತೀನಾಂ ಕಾಲನಿಷ್ಠಾ ಸದೇತಿ ಶಿವಶಾಸನಂ ॥೩೦॥

ಅಭಾಷ್ಯಭಾಷಣೇ ಚೈವಮನಿರೀಕ್ಷ್ಯ ನಿರೀಕ್ಷಣೇ ।
ಅಶ್ರಾವ್ಯಶ್ರವಣಾಸ್ಪರ್ಶಸ್ಪರ್ಶಜೃಂಭಾಕ್ಷುತೇಷು ಚ ॥೩೧॥

ದುಸ್ಸ್ವಪ್ನೇಷು ಚ ಮೂಲೇನ ಸರ್ವಾಂಗೇ ಭಸಿತೋಕ್ಷಣಂ ।
ಮೂರ್ಧಾದಿಪಾದಪರ್ಯಂತಂ ಸರ್ವಾಂಗಂ ಪ್ರಣವಂ ವದನ್ ॥೩೨॥

---

‘ಈಶಾನಸ್ಸರ್ವವಿದ್ಯಾನಾಂ’ ಎಂಬ ಮಂತ್ರದಿಂದ ತಲೆಯಮೇಲೆಯೂ ‘ತತ್ಪುರುಷಾಯ’ ಎಂಬ ಮಂತ್ರದಿಂದ ಹಣೆಗೂ, ‘ಅಘೋರೇಭ್ಯಃ’ ಎಂಬ ಮಂತ್ರದಿಂದ ಹೃದಯಕ್ಕೂ, ‘ವಾಮದೇವಾಯ ನಮಃ’ ಎಂಬ ಮಂತ್ರದಿಂದ (ಪೂರಕ) ಕಿವಿಗಳಿಗೂ, ‘ಸದ್ಯೋಜಾತಂ ಪ್ರಪದ್ಯಾಮಿ’ ಎಂಬ ಮಂತ್ರದಿಂದ ಕಾಲುಗಳಿಗೂ, ಓಂಕಾರದಿಂದ ಸರ್ವಾಂಗಕ್ಕೂ ಬಳಿದುಕೊಳ್ಳಬೇಕು. ॥೨೭-೨೮॥

ಮೋಕ್ಷಾರ್ಥಿಗಳಾದ ಯತಿಗಳು ಸದ್ಯೋಜಾತಾದಿ ಪಂಚಮಂತ್ರಗಳನ್ನುಚ್ಚರಿಸುತ್ತಾ ಕಾಲಿನಿಂದ ಹಿಡಿದು ತಲೆಯವರೆಗೂ ಭಸ್ಮವನ್ನು ಲೇಪಿಸಿಕೊಳ್ಳಬೇಕು. ಭಸ್ಮಸ್ನಾನಾನಂತರ ವಸ್ತ್ರಧಾರಣೆಮಾಡಿಕೊಂಡು, ಎರಡುಸಾರಿ ಆಚಮನ ಮಾಡಬೇಕು. ಆದರೆ ಯತಿಗಳಿಗೆ ಭಸ್ಮಸ್ನಾನಕ್ಕೆ ಕಾಲನಿಯಮವಿಲ್ಲ. ಯಾವಾಗಲೂ ಭಸ್ಮಸ್ನಾನ ಮಾಡಬಹುದು. ಆ ರೀತಿ ಶಂಕರನಪ್ಪಣೆಯಿದೆ. ॥೨೯-೩೦॥

ಇನ್ನು ಭಸ್ಮೋದ್ಧೂಲನವೆಂದರೆ ಕಾಲಿನಿಂದ ಹಿಡಿದು ತಲೆಯವರೆಗೂ ಭಸ್ಮವನ್ನು ಲೇಪಿಸಿಕೊಳ್ಳುವುದು ಎಂದರ್ಥ. ಈ ಭಸ್ಮೋದ್ಧೂಲನಕ್ಕೆ ಮುಖ್ಯ ಮಂತ್ರ ಪ್ರಣವವೇ. ಮಾತನಾಡದವರ ಕೈಯ್ಯಲ್ಲಿ ಮಾತನಾಡಿದಾಗ, ಆಡಬಾರ

ಭಸ್ಮನೋದ್ಧೂಲಯೇದೇತದುದ್ಧೂಲನಮುದೀರ್ಯತೇ ।
ಭಸ್ಮನೋ ಧಾರಣಂ ವಕ್ಷ್ಯೇ ಪ್ರಣವೇನ ಪ್ರಗೃಹ್ಯತಾಂ ॥೩೩॥

ಕೃತ್ವಾ ರಕ್ಷಾಂ ಪೂರ್ವವತ್ತಲ್ಲೋಲಯೇದ್ವಿಶದಾಂಭಸಾ ।
ತ್ರಿಮೂರ್ತಿರೂಪಂ ಮೂಲೇನ ತ್ರಿಪುಂಡ್ರಂ ಧಾರಯೇತ್ಸುಧೀಃ ॥೩೪॥

ಗುಣಾಗ್ನಿಶಕ್ತಿತ್ರಿತಯಂ ಪ್ರಣವಂ ಭಸ್ಮಧಾರಣಂ ।
ತ್ರಿಪುಂಡ್ರದರ್ಶನಾಚ್ಛುದ್ಧಿಃ ಕಿಂ ಪುನಸ್ತಸ್ಯ ಧಾರಣಾತ್ ॥೩೫॥

ಶಿವಶಕ್ತಿಮನುಸ್ತುಷ್ಟ್ಯೈ ತತ್ಫಾಲಗ್ರೀವಯೋರ್ಧೃತಂ ।
ಕಾಂತೇ ಸ್ಥಾನದ್ವಯೇ ಚಾಸ್ಮಿನ್ ಧಾರಯೇಚ್ಚ ತ್ರಿಪುಂಡ್ರಕಂ ॥೩೬॥

ಭೂತೇಶೋ ವಚಸಾಮೀಶಃ ಪರಮಾತ್ಮಾ ಚ ತುಷ್ಯತಿ ।
ಬ್ರಹ್ಮವಿಷ್ಣುಹರಪ್ರೀತ್ಯೈ ತತ್ಫಾಲಗಲಯೋರ್ಧೃತಂ ॥೩೭॥

---

ದ್ದನ್ನು ಆಡಿ, ನೋಡಬಾರದ್ದನ್ನು ನೋಡಿ, ಕೇಳಬಾರದ್ದನ್ನು ಕೇಳಿ, ಸ್ಪರ್ಶ ಮಾಡಬಾರದ್ದನ್ನು ಸ್ಪರ್ಶಮಾಡಿ, ಪಾಪವನ್ನು ಗಳಿಸಿದಾಗಲೂ, ಆಕಳಿಕೆ, ಸೀನು, ದುಸ್ಸ್ವಪ್ನ ಇವುಂಟಾದಾಗಲೂ ಭಸ್ಮೋದ್ಧೂಲನಮಾಡಿಕೊಳ್ಳಬೇಕು. ಇದರಿಂದ ದೇಹವು ಶುದ್ಧಿಹೊಂದುವುದು. ಇನ್ನು ಭಸ್ಮಧಾರಣೆಯ ವಿಷಯವನ್ನು ತಿಳಿಸುವೆನು ಕೇಳು. ॥೩೧-೩೨-೩೩॥

ಹಿಂದೆ ಹೇಳಿದಂತೆ ಭಸ್ಮಸಿದ್ಧಿಮಾಡಿಕೊಂಡು, ಶುಭ್ರವಾದ ಭಸ್ಮವು ತ್ರಿಮೂರ್ತಿರೂಪವೆಂದರಿತು, ಶುದ್ಧಜಲದಿಂದ ಕಲಸಿ ತ್ರಿಪುಂಡ್ರಾಕಾರದಲ್ಲಿ ಧರಿಸಬೇಕು. ಲೋಕದಲ್ಲಿ ಸತ್ತ್ವರಜಸ್ತಮೋಗುಣಗಳೆಂದು ಗುಣಗಳು ಮೂರು. ಆಹವನೀಯ, ಗಾರ್ಹಪತ್ಯ, ದಕ್ಷಿಣಾಗ್ನಿಗಳೆಂದು ಅಗ್ನಿಗಳು ಮೂರು. ಪ್ರಭು, ಮಂತ್ರ, ಉತ್ಸಾಹಗಳೆಂದು ಶಕ್ತಿಗಳೂ ಮೂರು. ಹೀಗೆ ಪರಿಶುದ್ಧವಾದ ವಸ್ತುಗಳು ಮೂರು ಸಂಖ್ಯೆಯಲ್ಲಿರುವಂತೆ ತ್ರಿಪುಂಡ್ರವೂ ಮೂರು ಗೆರೆಯಾಗಿ ಪರಿಣತವಾಗಿದೆ. ದರ್ಶನ ಮಾತ್ರದಿಂದಲೇ ಈ ತ್ರಿಪುಂಡ್ರವು ಶುದ್ಧಿಯನ್ನುಂಟುಮಾಡುವಾಗ ಧಾರಣೆಯಿಂದ ಇನ್ನು ಹೇಳತಕ್ಕದ್ದೇನು ? ॥೩೪-೩೫॥

ಹಣೆ, ಕಂಠ, ಇವುಗಳಲ್ಲಿ ಭಸ್ಮತ್ರಿಪುಂಡ್ರವನ್ನು ಧರಿಸುವುದರಿಂದ ಶಿವಶಕ್ತಿ ಮಂತ್ರವು ತೃಪ್ತಿಗೊಳ್ಳುವುದು. ಆದ್ದರಿಂದ ಸರ್ವರು ತಪ್ಪದೆ ಈ ಎರಡು ಸ್ಥಳಗಳಲ್ಲಿ

ತ್ರಿಮೂರ್ತಿಸ್ಕಂದತುಷ್ಟ್ಯೈ ತನ್ನಾಭೌ ಚಾಸ್ಮಿಂಸ್ತ್ರಯೋರ್ಧೃತಂ (?)
ಶಿವವಿಷ್ಣ್ವೀಶ ರುದ್ರಾಂಶಂತೇಷು ಬಾಹ್ವೋರ್ಧೃತಂ ಚ ತತ್ ॥೩೮॥

ಕರ್ಣಯೋಸ್ತೇಷು ಚ ಧೃತಂ ಶಿವಭಕ್ತ್ಯೈ ಪ್ರಿಯಂ ಭವೇತ್ ।
ತತ್ತ್ರೇಷು ಮೂರ್ಧ್ನಿ ಚ ಧೃತಂ ಪರಬ್ರಹ್ಮಪ್ರಿಯಂ ಭವೇತ್ ॥೩೯॥

ಲಲಾಟಫಲಹೃನ್ನಾಭಿಬಾಹುಕರ್ಣದ್ವಯೇಷು ಚ ।
ಪೃಷ್ಠೇ ಚ ಭಸ್ಮಧರಣಾದ್ಬ್ರಹ್ಮವಿಷ್ಣುಶಿವಾಹಿತೇ ॥೪೦॥

ಪಿತೃಶಕ್ರಾಗ್ನಿ ವಿಘ್ನೇಶಸ್ಕಂದಾಸ್ತುಷ್ಯಂತಿ ತೇ ಕ್ರಮಾತ್ ।
ಬಾಹ್ವೋರಂಸದ್ವಯೇ ಜಾನುಪದೇಷು ಶ್ರವಸೋರಪಿ ॥೪೧॥

ಮೂರ್ಧ್ನಿ ವಾಸ್ಯೈ ಪ್ರತುಷ್ಯಂತಿ ಸ್ಕಂದಾದ್ಯಾ ಭಸ್ಮಧಾರಣೇ ।
ಸ್ಕಂದವಿಘ್ನೇಶ್ವರೇಶಾನ ಪ್ರಜಾಪತಿಜನಾರ್ದನಾಃ ॥೪೨॥

---

ತ್ರಿಪುಂಡ್ರವನ್ನು ಧರಿಸಲೇಬೇಕು. ಅಷ್ಟೇ ಅಲ್ಲದೆ, ಸಮಸ್ತಪ್ರಾಣಿಗಳಲ್ಲಿ ಅಡಗಿರುವವನೂ, ಪರಮಾತ್ಮಸ್ವರೂಪನೂ ಆದ ಶಂಕರನೂ, ಬ್ರಹ್ಮವಿಷ್ಣ್ವಾದಿತ್ರಿಮೂರ್ತಿಗಳೂ ಇದರಿಂದ ತೃಪ್ತರಾಗುವರು. ॥೩೬-೩೭॥

ನಾಭಿಯಮೇಲೆ ತ್ರಿಪುಂಡ್ರಧಾರಣೆಮಾಡುವುದರಿಂದ ತ್ರಿಮೂರ್ತಿಗಳೂ, ಕುಮಾರಸ್ವಾಮಿಯೂ ತೃಪ್ತಿಹೊಂದುವರು. ಶಿವ, ವಿಷ್ಣು, ರುದ್ರಗಣಗಳು ಇವರು ತೋಳುಗಳ ಮೇಲೆ ತ್ರಿಪುಂಡ್ರವನ್ನು ಧರಿಸುವುದರಿಂದ ತೃಪ್ತರಾಗುವರು. ಎರಡು ಕಿವಿಗಳಲ್ಲಿಯೂ ತ್ರಿಪುಂಡ್ರವಿಡುವುದರಿಂದ ಶಿವಭಕ್ತಿಯು ಪೂರ್ಣವಾಗುವುದು. ಶಿರೋಭಾಗದಲ್ಲಿ ತ್ರಿಪುಂಡ್ರಧಾರಣೆಯು ಪರಬ್ರಹ್ಮನಿಗೂ, ಹುಬ್ಬು, ಹಣೆ, ಹೃದಯ, ನಾಭಿ, ಭುಜ, ಕಿವಿ, ಬೆನ್ನು ಇವುಗಳಲ್ಲಿ ಭಸ್ಮವನ್ನು ಧರಿಸುವುದರಿಂದ ತ್ರಿಮೂರ್ತಿಗಳೂ ತೃಪ್ತರಾಗುವರು. ॥೩೮-೩೯-೪೦॥

ಎರಡು ಭುಜಗಳು ಮತ್ತು ತೋಳುಗಳು, ಮಂಡಿಗಳು ಇವುಗಳಲ್ಲಿ ಭಸ್ಮಧಾರಣೆಮಾಡಿಕೊಂಡರೆ ಪಿತೃದೇವತೆಗಳೂ, ಇಂದ್ರ, ಅಗ್ನಿ, ಗಣಪತಿ, ಕುಮಾರಸ್ವಾಮಿ ಇವರೂ ತೃಪ್ತರಾಗುವರು. ಹಾಗೆಯೇ ಶಿರೋಭಾಗದ ಭಸ್ಮಧಾರಣೆಯಿಂದ, ಸ್ಕಂದ, ವಿಘ್ನೇಶ್ವರ, ಈಶಾನ, ಬ್ರಹ್ಮ, ವಿಷ್ಣು ಇವರು ಸಂತುಷ್ಟರಾಗುವರು. ॥೪೧-೪೨॥

ನಾರಾಯಣಾಶ್ವಿಭೂಮ್ಯಗ್ನಿ ಬ್ರಹ್ಮಾಣಶ್ಶಿವಮೂರ್ತಯಃ ।
ಲಲಾಟಕರ್ಣಹೃದಯನಾಭಿದಕ್ಷಿಣಬಾಹುಷು ॥೪೩॥

ತದನ್ಯದಕ್ಷಿಣಶ್ರೋತ್ರ ವಾಮಶ್ರೋತ್ರೇಷು ಚ ಕ್ರಮಾತ್ ।
ಪೃಷ್ಠೇ ಚ ಕಕುದೇ ಮೂರ್ಧ್ನಿ ತುಷ್ಟಾಸ್ಸ್ಯುಃ ಭಸ್ಮಧಾರಿಣಃ ॥೪೪॥

ಮಹೇಶ್ವರಃ ಪಶುಪತಿಃ ಶಂಭುಃ ಶಂಕರ ಈಶ್ವರಃ ।
ವಾಮದೇವೋ ಮಹಾರುದ್ರಃ ಶ್ರೀಕಂಠೋ ವೃಷಭಧ್ವಜಃ ॥೪೫॥

ಪರಮಾತ್ಮಾ ಶಿವಶ್ಚೇತಿ ರುದ್ರಾ ಏಕಾದಶ ಸ್ಮೃತಾಃ ।
ಫಾಲಹೃನ್ನಾಭಿಕಂಠೇಷು ಬಾಹ್ವೋಸ್ತನ್ಮಧ್ಯಯೋರಪಿ ॥೪೬॥

ತತ್ಪ್ರಕೋಷ್ಠದ್ವಯೇ ಪೃಷ್ಠೇ ಮೂರ್ಧ್ನಿ ಯೋ ಭಸ್ಮಧಾರಯೇತ್ ।
ಬ್ರಹ್ಮಾ ಹುತವಹಃ ಸ್ಕಂದಃ ಪುರುಷೋ ರುದ್ರಭಾಸ್ಕರೌ ॥೪೭॥

ಶಶಿಪ್ರಭಾ ವಾಮನಶ್ಚ ನಭಸ್ವಾನ್ ವಸವೋ ಹರಃ ।
ವಾಮದೇವಶ್ಚ ತೇ ಸರ್ವೇ ತಸ್ಯ ಪ್ರೀತಾ ಭವಂತಿ ಹಿ ॥೪೮॥

---

ಹಣೆ, ಕಿವಿ, ಎದೆ, ಹೊಕ್ಕಳು, ಬಲಭುಜ, ಎಡಭುಜ, ಬಲ ಮತ್ತು ಎಡ ಗಿವಿಗಳು, ಬೆನ್ನು, ಹೆಗಲು, ತಲೆ ಇವುಗಳಲ್ಲಿ ಭಸ್ಮವನ್ನು ಧರಿಸುವವರು, ಸಾಕ್ಷಾತ್ತಾಗಿ, ವಿಷ್ಣು, ಅಶ್ವಿನೀದೇವತೆಗಳು, ಅಗ್ನಿ, ಭೂಮಿ, ಬ್ರಹ್ಮ, ಶಿವ ಏತತ್ಸ್ವರೂಪರೆನಿಸುವರು. ॥೪೩-೪೪॥

ಮಹಾದೇವನು, ಮಹೇಶ್ವರ, ಪಶುಪತಿ, ಶಂಭು, ಶಂಕರ, ಈಶ್ವರ, ವಾಮದೇವ, ಮಹಾರುದ್ರ, ಶ್ರೀಕಂಠ, ವೃಷಭಧ್ವಜ, ಪರಮಾತ್ಮಾ, ಶಿವ ಎಂಬುದಾಗಿ ಹನ್ನೊಂದು ಹೆಸರಿನಿಂದ ಪ್ರಸಿದ್ಧನಾಗಿರುವನು. ಹಣೆ, ಹೃದಯ, ಹೊಕ್ಕಳು, ಕತ್ತು, ತೋಳು, ಮುಂಗೈ, ಬೆನ್ನು, ಶಿರಸ್ಸು ಇವುಗಳಲ್ಲಿ ಭಸ್ಮವನ್ನು ಧರಿಸುವವನು, ಬ್ರಹ್ಮ, ಅಗ್ನಿ, ಸ್ಕಂದ, ಪುರುಷ, ರುದ್ರ, ಭಾಸ್ಕರ, ಚಂದ್ರ, ವಾಮನ, ವಾಯು, ವಸುಗಳು, ಹರ, ವಾಮದೇವ ಮೊದಲಾದ ಈ ದೇವತೆಗಳನ್ನು ತೃಪ್ತಿಪಡಿಸುವನು. ॥೪೫-೪೬-೪೭॥

ಹೊಟ್ಟೆಯಮೇಲೆ ವಿಭೂತಿಯನ್ನಿಡುವವನಲ್ಲಿ ಈಶ್ವರನು ಬಹುಪ್ರೀತಿಯನ್ನಿಡುವನು. ಹಾಗೆಯೇ, ಹಣೆ, ಕತ್ತು, ಹೃದಯ, ಹೊಟ್ಟೆ, ಹೊಕ್ಕಳು, ಎರಡು

ಯೇಷು ಕುಕ್ಷೌ ಚ ಯೋ ಭಸ್ಮಧಾರಯೇತ್ಸ ಶಿವಪ್ರಿಯಃ ।
ಫಾಲಗ್ರೀವಾಹೃದುದರ ನಾಭಿಬಾಹುದ್ವಯೇಷ್ವಪಿ ॥೪೯॥

ಪ್ರಕೋಷ್ಠಮಣಿಬಂಧಂ ಸ ಪಾದಯುಗ್ಮೇಷು ಪೃಷ್ಠತಃ ।
ವಿಭೂತಿಂ ಬಿಭೃತಸ್ತಸ್ಯ ಶಿವಾದಿಬ್ರಹ್ಮಪಂಚಕಂ ॥೫೦॥

ವಾಮಾ ಜ್ಯೇಷ್ಠಾ ತಥಾ ರೌದ್ರೀ ಕಾಲೀ ಕಲವಿಕಾರಿಣೀ ।
ಬಲವಿಕರಣೀ ಚೈವ ತಥಾ ಬಲಪ್ರಮಾಥಿನೀ ॥೫೧॥

ಸರ್ವಭೂತಪ್ರದಮನೀ ತಥಾ ಚಾನ್ಯಾ ಮನೋನ್ಮನೀ ।
ಅಶ್ವಿನ್ಯೌ ಚ ಕ್ರಮಾತ್ಸಿದ್ಧಿಂ ಯಚ್ಛಂತಿ ಸ್ಥಾನದೇವತಾಃ ॥೫೨॥

ಲಲಾಟಕರ್ಣಯೋರ್ನೇತ್ರದ್ವಯೇ ನಾಸಾದ್ವಯಾಸ್ಯಯೋಃ ।
ಗ್ರೀವಾಯಾಮಂಸಯೋರ್ಬಾಹ್ವೋಃ ಕೂರ್ಪರಯೋರ್ಮಣಿಬಂಧಯೋಃ॥

ಹೃನ್ನಾಭಿಗುಹ್ಯದೇಶೋರುದ್ವಯಜಾನುದ್ವಯೇಷು ಚ ।
ಸ್ಫಿಗ್ದ್ವಯೇ ಜಂಘಯೋರ್ದ್ವೋರ್ಗ್ರದ್ವಯಂ ಪೃಷ್ಟ ಸಮೀವಿನಃ ॥೫೪॥

---

ಭುಜಗಳು, ಮುಂಗೈ, ಎರಡುಕಾಲುಗಳು, ಬೆನ್ನು ಈ ಪ್ರದೇಶಗಳಲ್ಲಿ ವಿಭೂತಿಯನ್ನಿಡುವವನು, ಶಿವಾದಿಬ್ರಹ್ಮಪಂಚಕವನ್ನೂ ತೃಪ್ತಿಗೊಳಿಸುವನು. ॥೪೮-೪೯-೫೦॥

ಪರಶಿವನ ಮೂರ್ತಿಗಳಲ್ಲಿ ಸ್ಥಾನದೇವತೆಗಳೆಂದು ಹೆಸರುಪಡೆದಿರುವ, ವಾಮದೇವ, ಜ್ಯೇಷ್ಠ, ರುದ್ರ, ಕಾಲ, ಕಲವಿಕರಣ, ಬಲವಿಕರಣ, ಬಲ, ಬಲ ಪ್ರಮಥನ, ಸರ್ವಭೂತದಮನ, ಮನೋನ್ಮನ, ಅಶ್ವಿನೀದೇವತೆಗಳು ಈ ಶೈವಮೂರ್ತಿಗಳು ವಿಭೂತಿಧಾರಕನ ಧಾರಣಸ್ಥಾನಗಳನ್ನು ರಕ್ಷಿಸುತ್ತಾ ಫಲವನ್ನು ಕೊಡುವುವು. ॥೫೧-೫೨॥

ಮೇಲೆ ಹೇಳಿದ ಸ್ಥಾನದೇವತೆಗಳು ಹಣೆ, ಎರಡುಕಿವಿ, ಎರಡುಕಣ್ಣು, ಮೂಗು, ಬಾಯಿ, ಕಂಠ, ಎರಡುಹೆಗಲು, ಭುಜದ್ವಯ, ಎರಡುಮುಂಗೈ, ಎರಡು ಮೇಗೈ, ಹೃದಯ, ನಾಭಿ, ಗುಹ್ಯ, ಎರಡುತೊಡೆ, ಎರಡುಮಂಡಿ, ಎರಡು ಮುಂಗಾಲು, ಪಾದದ್ವಯ, ಬೆನ್ನು ಈ ಸ್ಥಾನಗಳಲ್ಲಿ ವಿಭೂತಿಯಿರುವುದನ್ನು ನೋಡಿ ಅವನನ್ನು ರಕ್ಷಿಸುವುವು. ॥೫೩-೫೪॥

ಯೋ ಭಸ್ಮಧಾರಯೇದ್ಭಕ್ತ್ಯಾ ಕ್ರಮಾತ್ತಸ್ಯಾಷ್ಟಮೂರ್ತಯಃ ।
ವಿದ್ಯೇಶ್ವರೀ ದಿಗಂತೇಶಾ ವಸವೋಽಷ್ಟೌ ಚ ಸಿದ್ಧಿದಾಃ ॥೫೫॥

ಅಂಗುಷ್ಠಾನಾಮಿಕಾಭ್ಯಾಂ ತು ಲಲಾಟೇ ಭಸ್ಮಧಾರಣೇ ।
ಸರ್ವದಾ ತರ್ಜನೀ ತತ್ರ ವರ್ಜ್ಯೇತ್ಯಾಗಮಶಾಸನಂ ॥೫೬॥

ಮಧ್ಯಮಾನಾಮಿಕಾಭ್ಯಾಂ ತದ್ಧಾರಯೇದಂಗಮೂರ್ಧನಿ ।
ಅಂಗುಷ್ಠಾನಾಮಿಕಾಭ್ಯಾಂ ತು ಕರ್ಣಯೋಸ್ತಸ್ಯ ಧಾರಣಂ ॥೫೭॥

ಸಾಂಗುಲೀಭಿಶ್ಚ ಉಕ್ತೇಷು ಸ್ಥಾನೇಷ್ವಂಗೇಷು ಧಾರಯೇತ್ ।
ಇತ್ಥಂ ವಿಧಾಯ ವಿಧಿವದ್ಭಕ್ತ್ಯಾಶ್ರೀ ಭಸ್ಮಧಾರಣಂ ॥೫೮॥

ಶಿಷ್ಟಂ ಮೂಲೇನ ತಜ್ಜಿಘ್ರೇದಂತಃಕರಣಶುಷ್ಟಯೇ ।
ಜ್ಞಾನಾರ್ಥೀ ಚಂದನೋನ್ಮಿಲಂ ಶ್ರೀಕಾಮಃ ಕುಂಕುಮಾನ್ವಿತಂ ॥೫೯॥

ವಶ್ಯಾರ್ಥೀ ವಶ್ಯಚೂರ್ಣೇನ ಜಯಾರ್ಥೀ ರಕ್ತಚಂದನಾತ್ ।
ನಾರೀಣಾಂ ತಿಲಕಂ ಯದ್ವಾ ಪಟಾಕೃತ್ಯರ್ಧಚಂದ್ರಕೇ ॥೬೦॥

---

ಭಸ್ಮಧಾರಿಯಾದವನನ್ನು ಈಶ್ವರನ ಅಷ್ಟಮೂರ್ತಿಗಳೂ, ವಿದ್ಯೇಶ್ವರಿಯೂ, ದಿಕ್ಪಾಲಕರೂ, ಅಷ್ಟವಸುಗಳೂ ಸರ್ವದಾ ರಕ್ಷಿಸುತ್ತಾ ಅವರಿಗೆ ಸಕಲಸಿದ್ಧಿಗಳನ್ನೂ ಕೊಡುವುವು. ಹಣೆಯಲ್ಲಿ ಅಂಗುಷ್ಠ ಮತ್ತು ಅನಾಮಿಕದ ಬೆರಳುಗಳಿಂದ ಭಸ್ಮವನ್ನು ಧರಿಸಬೇಕು. ಭಸ್ಮಧಾರಣೆಗೆ ತರ್ಜನೀಬೆರಳು ಶ್ರೇಷ್ಠವಾದದ್ದಲ್ಲವೆಂದು ಆಗಮಗಳು ಹೇಳುತ್ತಿವೆ. ॥೫೫-೫೬॥

ಮಧ್ಯಮ ಮತ್ತು ಅನಾಮಿಕ ಬೆರಳುಗಳಿಂದ ತಲೆಯಲ್ಲಿಯೂ, ಅಂಗುಷ್ಠ ಮತ್ತು ಅನಾಮಿಕ (ನಾಲ್ಕನೆಯಬೆರಳು) ದಿಂದ ಎರಡುಕಿವಿಗಳಲ್ಲಿಯೂ, ಉಳಿದ ಸ್ಥಾನಗಳಲ್ಲಿ ಐದುಬೆರಳುಗಳಿಂದಲೂ ಭಸ್ಮವನ್ನು ಧರಿಸಬೇಕು. ಹೀಗೆ ಭಸ್ಮಧಾರಣೆಯನ್ನು ಒಂದು ವಿಧಿಯಂತೆ ಅನುಷ್ಠಿಸಬೇಕು. ॥೫೭-೫೮॥

ಉಳಿದ ವಿಭೂತಿಯನ್ನು ಪ್ರಣವಮಂತ್ರದಿಂದ ಮೂಸಿನೋಡಿದರೆ ಅಂತಃಕರಣವು ಶುದ್ಧಿಹೊಂದುವುದು. ಸುಜ್ಞಾನವನ್ನು ಅಪೇಕ್ಷಿಸುವವನು ಈ ಭಸ್ಮವನ್ನು ಚಂದನಸಹಿತವಾಗಿಯೂ, ಶ್ರೀಕಾಮಿಯು ಕುಂಕುಮದೊಡನೆಯೂ, ವಸ್ತುವಶೀಕರಣದಲ್ಲಿ ಮನಸ್ಸುಳ್ಳವನು ವಶ್ಯಚೂರ್ಣದೊಡನೆಯೂ, ಜಯಾಪೇಕ್ಷಿಯು ರಕ್ತ

ನಪುಂಸಕಾನಾಂ ತತ್ಪ್ರೋಕ್ತಂ ದೀಪಶಾಖಾಶಿಖೋಪಮಂ ।
ಯತ್ತ್ರಿಪುರದಾಹಾರ್ಥಂ ಭಸ್ಮ ದಿವ್ಯಾಖ್ಯಮುಚ್ಯತೇ ॥೬೧॥

ವಿಭೂತಿ ಶ್ರೀಕೃತೈಶ್ವರ್ಯಂ ಭೂತಿರ್ಭಸಿತಮಿತ್ಯಪಿ ।
ಶಿವಂ ಭಸ್ಮ ಪವಿತ್ರಂ ಚ ಕ್ಷಾರಮಾಗ್ನೇಯಮಿತ್ಯಪಿ ॥೬೨॥

ರಕ್ಷೇತಿ ಚಾಸ್ಯ ನಾಮಾನಿ ಪ್ರಾಹುರೇಕಾದಶಾಸ್ತಿಕಾಃ ।
ನಾಮತ್ರಯಂ ವಿಭೂತ್ಯಾದಿ ಸದ್ಯೋಜಂ ಸಂಪದಾವಹಂ ॥೬೩॥

ಭೂತಾದಿ ನಾಮದ್ವಿತಯಂ ವಾಮಾರ್ಥಾಭಾಸನಾರ್ಥಿಯಃ ।
ಯಚ್ಛಿವಾದಿದ್ವಯಂ ನಾಮ್ನೋಸ್ತತ್ತತ್ಪುರುಷಸಂಭವಂ ॥೬೪॥

ನಾಮದ್ವಯಂ ಪವಿತ್ರಾದಿ ತದೀಶಾನಮುಖೋದ್ಗತಂ ।
ಸಂಪತ್ಕರವಿಧಿಂ ನಾಮ ಆಪದುದ್ಧಾರಣಂ ಚ ತತ್ ॥೬೫॥

ಆಗ್ನೇಯಾದಿ ಚ ಯನ್ನಾಮದ್ವಯಮೇತದಘೋರಜಂ ।
ಅಪಸ್ಮಾರಭಯೋನ್ಮಾದಭೂತಾದೀನಾಂ ನಿವಾರಣಂ ॥೬೬॥

---

ಚಂದನಮಿಶ್ರಿತವಾಗಿಯೂ ಧರಿಸಬೇಕು. ಸ್ತ್ರೀಯರು ಅರ್ಧಚಂದ್ರಾಕಾರದಲ್ಲಿಯೋ, ತಿಲಕದಂತೆಯೋ ಭಸ್ಮವನ್ನು ಧರಿಸಬಹುದು. ॥೫೯-೬೦॥

ಶಕ್ತಿಯಿಲ್ಲದ ನಪುಂಸಕರಿಗೆ ಇದು ಬೆಂಕಿಯ ಕುಡಿಯಂತೆ ವೀರ್ಯವನ್ನು ಹೆಚ್ಚಿಸಬಲ್ಲುದು. ತ್ರಿಪುರಗಳನ್ನು ದಹಿಸುವ ಕಾಲದಲ್ಲಿ ಇದು ಪವಿತ್ರವೂ, ಅಗ್ನಿ ಸಂಬಂಧವೂ ಎನಿಸಿ ಪ್ರಕಾಶಿಸಿತು. ಈ ವಿಭೂತಿಗೆ ವಿಭೂತಿ, ಶ್ರೀಕೃತ, ಐಶ್ವರ್ಯ, ಭೂತಿ, ಭಸಿತ, ಶಿವ, ಭಸ್ಮ, ಪವಿತ್ರ, ಕ್ಷಾರ, ಆಗ್ನೇಯ, ರಕ್ಷಾ ಎಂಬುದಾಗಿ ಹನ್ನೊಂದು ಹೆಸರುಗಳಿವೆ. ಅದರಲ್ಲಿ ಮೊದಲಿನ ಮೂರು ಹೆಸರುಗಳು ಸದ್ಯೋಜಾತ ಮುಖದಿಂದ ಬಂದವುಗಳು ; ಅವು ಐಶ್ವರ್ಯಪ್ರದವಾದುವುಗಳು. ॥೬೧-೬೨-೬೩॥

ಭೂತಿ, ಭಸಿತ ಎಂಬ ಈ ಎರಡು ಹೆಸರುಗಳು ವಾಮದೇವಮುಖದಿಂದಲೂ, ಶಿವ, ಭಸ್ಮ ಎಂಬಿವೆರಡು ತತ್ಪುರುಷಮುಖದಿಂದಲೂ, ಪವಿತ್ರ, ಕ್ಷಾರ, ಈ ನಾಮದ್ವಯಗಳು ಈಶಾನಮುಖದಿಂದಲೂ, ಆಗ್ನೇಯ, ರಕ್ಷಾ ಎಂಬ ಈ ನಾಮಗಳು ಅಘೋರಾಸ್ಯದಿಂದಲೂ ಉತ್ಪನ್ನವಾಗಿ ಹೊರಹೊರಟವೆ. ಈ ಪವಿತ್ರ, ಕ್ಷಾರನಾಮಕವಾದ ಭಸ್ಮವು ಸಂಪತ್ತನ್ನು ಕೊಟ್ಟು ವಿಪತ್ತನ್ನು ದೂರಮಾಡುವುವು. ಅಘೋರ

ಸ್ಮರಣಾದಾರ್ತಿಶಮನಂ ದರ್ಶನಾದ್ಭಯನಾಶನಂ ।
ಸ್ಪರ್ಶನಾತ್ಸಿದ್ಧಿಕರಣಂ ಧಾರಣಾತ್ಸರ್ವಕಾಮದಂ ॥೩೭॥

ಸರ್ವಮಂತ್ರಮಯಂ ಸಾಕ್ಷಾಜ್ಜ್ವರಶಾಂತಿಮಹೌಷಧಂ ।
ಸರ್ವಾಘಭಂಜನಂ ಸರ್ವಶತ್ರುವರ್ಗನಿವಾರಣಂ ॥೩೮॥

ಜ್ಞಾನಪ್ರದಂ ಸ್ಮೃತಿಕರಂ ಆಯುಷ್ಕರಮಭೀಷ್ಟದಂ ।
ವಿಪ್ರಾಣಾಂ ಜ್ಞಾನತತ್ವಾನಾಂ ಭಸ್ಮತ್ರೇತಾಗ್ನಿಜಂ ಭವೇತ್ ॥೩೯॥

ವ್ಯಾಘ್ರಚರ್ಮಾಂಬರಂ ದೇವಂ ಸ್ತುವಂತಂ ತ್ರಿಮಲಚ್ಛಿದಃ ।
ಭಸ್ಮೋದ್ಧೂಲಿತಸರ್ವಾಂಗಾಃ ಪ್ರಭವಂತಿ ಶಿವಾರ್ಚಕಾಃ ॥೪೦॥

ಇತ್ಯುಕ್ತಸಂಸ್ಕಾರವಿಲಿಪ್ತ ಭೂತಿ
ಶಿವಾರ್ಚಕಾ ಯೇ ಶಿವಸಕ್ತಭಾವಾಃ ।
ತೇ ಸ್ವಾಭಿಲಾಷಾಮೃತಭಾಷಮೋಕ್ಷಾ
ನಂಪಂತಿ ಲೋಕೇ ಶಿವಸಾಧನೇನ ॥೪೧॥

---

ಜನ್ಯವಾದ ರಕ್ಷೆ ಎಂಬ ಭಸ್ಮವು ಅಪಸ್ಮಾರ, ಪಿಶಾಚಿಬಾಧೆ ಮುಂತಾದವುಗಳನ್ನು ತಪ್ಪಿಸಬಲ್ಲುದು. ॥೩೪-೩೫-೩೬॥

ಈ ಭಸ್ಮನಾಮಸ್ಮರಣೆಯಿಂದ ಪೀಡಾಪರಿಹಾರವಾಗುವುದು. ದರ್ಶನದಿಂದ ಭಯನಿವಾರಣೆಯೂ, ಸ್ಪರ್ಶನದಿಂದ ಸರ್ವಸಿದ್ಧಿಯೂ, ಧಾರಣೆಯಿಂದ ಸರ್ವ ಇಷ್ಟಾರ್ಥಗಳೂ, ಲಭಿಸುವುವು. ಈ ಭಸ್ಮವು ಮಂತ್ರಮಯವೆನಿಸಿ, ಜ್ವರಾದಿ ಮಹಾರೋಗಗಳಿಗೆ ಮಹೌಷಧಿಯಂತಿರುವುದು. ಪಾಪವನ್ನೂ ಶತ್ರುವರ್ಗವನ್ನೂ ನಾಶಗೊಳಿಸಿ, ಜ್ಞಾನ, ಜನ್ಮಾಂತರಸ್ಮರಣೆ ಇವುಗಳನ್ನುಂಟುಮಾಡಿ, ಆಯುರ್ವೃದ್ಧಿ ಯಿಂದ ಸಕಲೇಷ್ಟಾರ್ಥಗಳನ್ನೂ ಸಲ್ಲಿಸುವುದು. ವಿಪ್ರರಿಗೆ ಅಗ್ನಿತ್ರಯಗಳಿಂದ ಹುಟ್ಟಿದ ಭಸ್ಮವು ಜ್ಞಾನವೃದ್ಧಿಯನ್ನುಂಟುಮಾಡುವುದು. ॥೩೭-೩೮-೩೯॥

ವ್ಯಾಘ್ರಚರ್ಮವನ್ನು ಧರಿಸಿಕೊಂಡಿರುವ ಪರಶಿವನನ್ನು ಯಾರು ಭಸ್ಮೋದ್ಧೂಲಿತಗಾತ್ರರಾಗಿ ಕಾಯಿಕವಾದ, ಮತ್ತು ಮಾನಸಿಕವಾದ, ವಾಚಿಕವಾದ ಮಲಗಳನ್ನು ದೂರಮಾಡಿ ಭಕ್ತಿಯಿಂದ ಅರ್ಚಿಸುವರೋ ಅವರೇ ಧನ್ಯರು. ಮತ್ತು ಹಿಂದೆ ಹೇಳಿದಂತೆ ಯಾರು ಸಂಸ್ಕೃತವಾದ ಪವಿತ್ರ ಭಸ್ಮವನ್ನು ಶರೀರಕ್ಕೆ

ಯೇ ಜಾತಿಸಂಸ್ಕಾರವಿಭೂತಿಭಾಜಾಂ
ಶಿವಾರ್ಚಕಾನಾಂ ಪದಭಕ್ತಿಭಾಜಃ ।
ತದರ್ಚಕಾಸ್ತೇ ಧರಣೀತಲೇಽಸ್ಮಿನ್
ಭಜಂತಿ ಭೋಗಾಂತ್ಸಹಪುತ್ರಪೌತ್ರೈಃ ॥೭೨॥

ಇತಿ ಶ್ರೀಶಿವರಹಸ್ಯೇ ಈಶ್ವರಾಖ್ಯೇ ದಶಮಾಂಶೇ
ಭಸ್ಮಮಹಿಮಾವರ್ಣನಂ ನಾಮ ದ್ವಿತೀಯೋಽಧ್ಯಾಯಃ

---

ಧರಿಸಿ ಈಶ್ವರನಲ್ಲಿಯೇ ಸ್ಥಿರಮನಸ್ಸಿಟ್ಟು ಸದಾ ಶಿವಾರಾಧನೆಯಲ್ಲಿ ತೊಡಗಿರುವರೋ ಅವರು ತಮ್ಮ ಸಕಲೇಷ್ಟಾರ್ಥಗಳನ್ನೂ ಪಡೆದವರಾಗಿ ಸಕಲ ಸನ್ಮಂಗಳಗಳನ್ನೂ ಹೊಂದಿ ಶಿವಲೋಕದಲ್ಲಿ ಸದಾ ನೆಲಸುವರು. ॥೭೦-೭೧॥

ಸುಸಂಸ್ಕೃತವಾಗಿರುವ ವಿಭೂತಿಯನ್ನು ಧರಿಸಿ ಶಿವಾರ್ಚನೆಮಾಡಿ ಪರಮ ಪೂಜ್ಯರೆನಿಸಿರುವ ಪರಶಿವಭಕ್ತರ ಪಾದವನ್ನು ಸೇವಿಸುವವರೂ, ಪೂಜಿಸುವವರೂ, ಈ ಲೋಕದಲ್ಲಿ ಸಮಸ್ತ ಪುತ್ರಪೌತ್ರರೊಡಗೂಡಿ ಸಕಲ ಭೋಗಭಾಗ್ಯಗಳನ್ನೂ ಹೊಂದುವರೆಂಬುದರಲ್ಲಿ ಸಂಶಯವಿಲ್ಲ. ॥೭೨॥

ಇಲ್ಲಿಗೆ ಶ್ರೀಶಿವರಹಸ್ಯದಲ್ಲಿ ದಶಮಾಂಶದಲ್ಲಿ ಎರಡನೆಯ ಅಧ್ಯಾಯವು ಮುಗಿದುದು.



|| ಶ್ರೀಃ ||

|| ಶ್ರೀ ಶಿವಾಯನಮಃ ||

# ಅಥ ಶ್ರೀಶಿವರಹಸ್ಯೇ

## ಈಶಾನಾಖ್ಯೇ

## ದಶಮಾಂಶಪೂರ್ವಾರ್ಧೇ

## ತೃತೀಯೋಽಧ್ಯಾಯಃ

|| ಶ್ರೀಸ್ಕಂದ ಉವಾಚ ||

ಭಸ್ಮೋತ್ಪತ್ತಿಂ ಪ್ರವಕ್ಷ್ಯಾಮಿ ಬೃಹಜ್ಜಾಬಾಲದರ್ಶಿತಾಂ ।
ಆದರ್ಶ ಇವ ದೇವೇನ ದೇವ್ಯಾ ಪ್ರೋಕ್ತಾಂ ತ್ವಯಿ ಬ್ರುವೇ ||೧||

ದರ್ಶೇಷು ಧಾರಯನ್ ಭಸ್ಮ ಕೃತ್ವಾ ಹೋಮಂ ಯಥಾವಿಧಿ ।
ಸ್ವಸೂತ್ರೋಕ್ತವಿಧಾನೇನ ಸ್ವಯಂ ವಹ್ನಿವಿಧಾನತಃ ||೨||

ಬೈಲ್ವಖಾದಿರಸಂಭೂತಸಮಿದ್ಭಿಶ್ಚರುಣಾ ತಥಾ ।
ಆಜ್ಯೇನ ಮಧುಮಿಶ್ರೇಣ ಜುಹುಯಾದ್ರುದ್ರಸೂಕ್ತಕೈಃ ||೩||

---

## ಮೂರನೆಯ ಅಧ್ಯಾಯ

ಷಣ್ಮುಖನು ಜೈಗೀಷವ್ಯಾದಿಗಳಿಗೆ ಭಸ್ಮೋತ್ಪತ್ತಿಕ್ರಮವನ್ನು ಹೀಗೆ ವಿವರಿಸಿದನು. " ಜೈಗೀಷವ್ಯನೇ, ಕೇಳು ; ಈಗ ನಿನಗೆ ಬೃಹಜ್ಜಾಬಾಲೋಪನಿಷತ್ತಿನಲ್ಲಿ ಸೂಚಿತವಾಗಿರುವ ಭಸ್ಮೋತ್ಪತ್ತಿ ಕ್ರಮವನ್ನು ತಿಳಿಸಲು ಇಚ್ಛಿಸುವೆನು. ಈ ಕ್ರಮವು ಈಶ್ವರನ ಆಜ್ಞಾರೂಪದಲ್ಲಿದೆ. ಮತ್ತು ಇದನ್ನು ಸ್ವಯಂ ಶಂಕರನೇ ಪಾರ್ವತಿಗೆ ತಿಳಿಯಪಡಿಸಿರುವನು. ಅಮಾವಾಸ್ಯೆಯ ದಿನದಲ್ಲಿ ಯಜಮಾನನು ತನ್ನ ಶಾಖಾನುಸಾರವಾಗಿ ಅಗ್ನಿಮುಖವಿಧಿಯಂತೆ ಅಗ್ನಿಪ್ರತಿಷ್ಠಾಪನೆ ಮಾಡಿಕೊಳ್ಳಬೇಕು. ||೧-೨||

ಬಿಲ್ವ ಅಥವಾ ಕಗ್ಗಲಿ ಸಮಿತ್ತು, ಅನ್ನ, ಜೇನುತುಪ್ಪಮಿಶ್ರಿತವಾದ ತುಪ್ಪ ಇವುಗಳಿಂದ ರುದ್ರಸೂಕ್ತಪಠನಪೂರ್ವಕವಾಗಿ ಹೋಮಮಾಡಬೇಕು. ಆ

ಬ್ರಹ್ಮಾಣಂ ಬ್ರಾಹ್ಮಣಂ ತತ್ರ ಕಲ್ಪಯೇದ್ಭಸ್ಮಭೂಷಿತಂ ।
ಸ್ವಯಂ ವಾಚಾರ್ಯಮುಖ್ಯೋವಾ ಜುಹುಯಾಜ್ಜಾತವೇದಸಿ ॥೪॥

ಅನ್ವಾಧಾನಾದಿಪೂರ್ವಾರ್ಥಂ ಕೃತ್ವಾ ಇಧ್ಮಾದಿಪಾತನಂ ।
ಆಘಾರಾವಥವಾಘಾರ್ಯ ಚಕ್ಷುಷೀ ಜುಹುಯಾತ್ತತಃ ॥೫॥

ಪ್ರಣೀತಾಂ ತತ್ರ ನಿಕ್ಷಿಪ್ಯ ಪುಷ್ಪಾಲಂಕೃತಿಮಾಚರೇತ್ ।
ಬರ್ಹಿರಾಚ್ಛಾದ್ಯ ಪಶ್ಚಾತ್ತು ಕೃತನಿತ್ಯಕ್ರಿಯಸ್ಸ್ವಯಂ ॥೬॥

ಅಜರೇ ವಾಸಸೀ ತತ್ರ ವಸಾನಃ ಶಿವವಾಸನಃ ।
ಪುಣ್ಯಾಹಂ ವಾಚಯಿತ್ವಾಥ ನಾಂದೀಶ್ರಾದ್ಧಂ ವಿಧಾಯಚ ॥೭॥

---

ಹೋಮಕ್ಕೆ ಭಸ್ಮಧಾರಿಯಾಗಿ ಕರ್ಮನಿಷ್ಠನಾದ ಬ್ರಾಹ್ಮಣನನ್ನು ಬ್ರಹ್ಮನನ್ನಾಗಿ ಮಾಡಬೇಕು. ತಾನೇ, ಅಥವಾ ಸಾಧ್ಯವಿಲ್ಲದಿದ್ದರೆ ಮತ್ತೊಬ್ಬ ಆಚಾರ್ಯನ ಮೂಲಕ ವಾದರೂ ಹೋಮವನ್ನು ನಡೆಸಬೇಕು. ॥೩-೪॥

ಪ್ರದಾನಹೋಮಕ್ಕೆ ಮುಂಚೆ, ಅನ್ವಾಧಾನಮಾಡಿಕೊಂಡು ಇಧ್ಮಪ್ರಕ್ಷೇಪಣೆ ಮಾಡಿ ಆಘಾರದೇವತೆಗಳಿಗೂ, ಚಕ್ಷುರ್ದೇವತೆಗಳಿಗೂ ಹೋಮಮಾಡಿ, ಪ್ರಣೀತಾ ಪಾತ್ರಾಸಾದನೆಯಾದನಂತರ ಅಗ್ನ್ಯಲಂಕರಣವನ್ನು ನೆರವೇರಿಸಿ, ಅನಂತರ ತಾನು ಕೃತನಿತ್ಯಕ್ರಿಯನಾಗಿ ಸಿದ್ಧನಾಗಿ ಪ್ರಧಾನಹೋಮಕ್ಕೆ ಕುಳಿತುಕೊಳ್ಳಬೇಕು.(ಋಗ್ವೇದ ಸ್ಮಾರ್ತಪ್ರಯೋಗದಲ್ಲಿ ಅನ್ವಾಧಾನವೆಂದರೆ ಮುಂದೆ ಮಾಡುವ ಪ್ರಧಾನಹೋಮದ ದೇವತೆಗಳನ್ನೂ, ಹೋಮಸಂಖ್ಯೆಯನ್ನೂ, ಪೌರ್ವಾಪರ್ಯವನ್ನೂ ತಿಳಿಸುವ ಒಂದು ಸಂಕಲ್ಪ ಎಂದು ತಿಳಿಯಬೇಕು. ಇಧ್ಮವೆಂದರೆ ಹದಿನೈದು ಸಂಖ್ಯೆಯ ಮುತ್ತುಗದ ಕಡ್ಡಿಯ ಕಂತೆ. ಆಘಾರಹೋಮವೆಂದರೆ ಧಾರಾಪೂರ್ವಕವಾಗಿ ವಿದಿಕ್ಕುಗಳ ಪರ್ಯಂತ ವಾಗಿ ಮಾಡುವ ಪ್ರಜಾಪತಿ ದೇವತಾಕವಾದ ಹೋಮ. ಚಕ್ಷುಷೀಹೋಮವೆಂದರೆ ಉತ್ತರದಕ್ಷಿಣಭಾಗಗಳಲ್ಲಿ ಚಕ್ಷುಸ್ಸ್ಥಾನದಲ್ಲಿ ಮಾಡುವ ಅಗ್ನಿ, ಸೋಮದೇವತಾಕ ವಾದ ಎರಡು ಹೋಮಗಳು. ಪ್ರಾದೇಶಮಾತ್ರದ ತುಂಡುದರ್ಭೆಯ ಕಂತೆಗೆ ಬರ್ಹಿಸ್ಸೆಂದು ಹೆಸರು.) ॥೫-೬॥

ಜೀರ್ಣವಾಗಿಲ್ಲದ ಶುಭ್ರವಾದ ಎರಡು ಬಟ್ಟೆಗಳನ್ನು ಉಟ್ಟು ಮತ್ತು ಹೊದ್ದು ಕೊಂಡು, ಮೊದಲು ಪುಣ್ಯಾಹ, ನಾಂದೀಶ್ರಾದ್ಧ ಇವುಗಳನ್ನು ವಿಧಿವತ್ತಾಗಿ ನಡೆಸ ಬೇಕು. ಅಗ್ನಿಮುಖದಲ್ಲಿ ಆಜ್ಯಸಂಸ್ಕಾರಾನಂತರ ಚರುಸಂಸ್ಕಾರಮಾಡಿ ಚರುವನ್ನು

ವಿಲಪ್ಯಾಜ್ಯಂ ಪ್ರಯತ್ನೇನ ಹವಿರುತ್ತಾರ್ಯ ಚೋತ್ತರೇ ।
ಬೈಲ್ವಖಾದಿರಪಾಲಾಶೈಃ ಸ್ರುಕ್ಸ್ರುವೌ ಪರಿಕಲ್ಪ್ಯ ಚ ॥೮॥

ಪೂರ್ವಾಪರಾರ್ಧವಾಜ್ಯೇನ ಹವಿಃ ಪ್ರತ್ಯಭಿಘಾರಯೇತ್ ।
ದೇವಾನಾವಾಹ್ಯ ವಹ್ನೌ ಚ ಶಿವಹೋಮಂ ಸಮಾಚರೇತ್ ॥೯॥

ಶಾಂತಿಂ ಪೂರ್ವೋತ್ತರಾಂ ಚೈವ ಜಪಿತ್ವಾಚಮ್ಯ ವಾಗ್ಯತಃ ।
ಶಂಚಮೇತ್ಯಾದಿ ಜುಹ್ವೈವ ಶತರುದ್ರೇಣ ವೈ ತದಾ ॥೧೦॥

ನಮಸ್ತೇತ್ಯಾದಿ ಮನ್ವಂತಂ ಚತುರ್ಥ್ಯಂತೈಶ್ಚ ಹೋಮಯೇತ್ ।
ಶತರುದ್ರಾಹುತೀಸ್ತತ್ರ ಶತಾಷ್ಟೋತ್ತರಮೇವ ಚ ॥೧೧॥

ಜುಹುಯಾದನಲೇ ಮಂತ್ರೈಶ್ಚತುರ್ಥ್ಯಂತೈಃ ಪೃಥಕ್ಪೃಥಕ್ ।
ಪುನರಾಜ್ಯೈರ್ವಸೋರ್ಧಾರಾಂ ಹುತ್ವಾ ರುದ್ರೇಣಮಂತ್ರವಿತ್ ॥೧೨॥

---

ಉತ್ತರದಿಂದ ಎತ್ತಿ ಬಲಭಾಗಕ್ಕಿಟ್ಟುಕೊಂಡು ಅಭಿಘಾರಮಾಡಬೇಕು. ಸ್ರುಕ್, ಸ್ರುವಗಳೆಂಬ ಹೋಮಮಾಡುವ ಮರದ ಸೌಟುಗಳನ್ನು ಬಿಲ್ವ, ಕಗ್ಗಲಿ, ಮುತ್ತುಗ ಈ ಮರಗಳಿಂದ ನಿರ್ಮಾಣಮಾಡಿಸಿರಬೇಕು. ॥೭-೮॥

ಹವಿಸ್ಸನ್ನು ಭಾಗದ್ವಯಮಾಡಿ, ಎರಡು ಭಾಗವನ್ನೂ ತುಪ್ಪದಿಂದ ಅಭಿಘಾರ ಮಾಡಬೇಕು. ಸಕಲ ದೇವತೆಗಳನ್ನೂ ಅಗ್ನಿಯಲ್ಲಿ ಅವಾಹನೆಮಾಡಿ, ಪ್ರಧಾನ ಹೋಮಾನಂತರ ಶಾಂತಿಮಂತ್ರಗಳನ್ನು ಚ್ಚರಿಸಿ ಆಚಮನಮಾಡಬೇಕು. ಪ್ರಧಾನ ಹೋಮಕ್ಕೆ 'ಶಂಚಮೇ ಮಯಶ್ಚಮೇ' ಎಂಬ ಅನುವಾಕದಿಂದ ಆರಂಭವಾದ ಶತರುದ್ರ ಮಂತ್ರಗಳನ್ನು ಬಳಸಬೇಕು. ॥೯-೧೦॥

'ನಮಸ್ತೇರುದ್ರಮನ್ಯವ'. ಎಂಬ ರುದ್ರಾಧ್ಯಾಯದಲ್ಲಿ ಬರುವ ಪ್ರತಿ ಶಿವನಾಮಗಳನ್ನೂ ಚತುರ್ಥೀವಿಭಕ್ತಿಯಲ್ಲಿ ಉಚ್ಚರಿಸುತ್ತಾ ಸ್ವಾಹಾಕಾರಾಂತವಾಗಿ ಭಕ್ತಿಯಿಂದ ನೂರೆಂಟು ಆಹುತಿಗಳನ್ನು ಕೊಡಬೇಕು. ಪ್ರತಿ ಮಂತ್ರದಿಂದಲೂ ಪ್ರತ್ಯೇಕವಾಗಿ ಚತುರ್ಥ್ಯಂತದಿಂದ ಹೋಮಮಾಡಿ ಮತ್ತೆ ಕೇವಲ ತುಪ್ಪದಿಂದ ರುದ್ರಾಧ್ಯಾಯವನ್ನು ಚ್ಚರಿಸುತ್ತಾ ವಸೋರ್ಧಾರೆಯನ್ನು ನೆರವೇರಿಸಬೇಕು. ॥೧೧-೧೨॥

ರುದ್ರಂ ಚ ವಿಧಿವತ್ಪೂಜ್ಯ ಕಲಶೇ ಮಂತ್ರವಿತ್ತಮಃ ।
ಅವ್ರಣೇ ಮೃನ್ಮಯೇ ವಾಪಿ ತಾಮ್ರರೌಪ್ಯಸ್ವರ್ಣವಿನಿರ್ಮಿತೇ ॥೧೩॥

ರಾಜತೇ ವಾ ತಥಾ ರಾಜಾ ಸರೋಜಾಚ್ಛಾದನೈರ್ಯುತೇ ।
ಪಂಚಾಮ್ರಪಲ್ಲವೈರ್ಯುಕ್ತೇ ಧೂಪದೀಪನಿವೇದನೈಃ ॥೧೪॥

ತತಸ್ಸ್ವಿಷ್ಟಕೃತಂ ಹುತ್ವಾ ರೌದ್ರಂ ಬಲಿಮುಪಾಹರೇತ್ ।
ದಿಕ್ಷ್ವಷ್ಟಸು ವಿಶೇಷೇಣ ಚರ್ವಾಜ್ಯೇನ ದ್ವಿಜೋತ್ತಮಾಃ ॥೧೫॥

ಧೂಪದೀಪೈಸ್ತಥಾ ಗಂಧೈರ್ವಾಸೋಭಿಃ ಪೂಜಯೇದ್ಬಲಿಂ ।
ಏವಂ ತ್ರಿರಾತ್ರಂ ಕೃತ್ವೈವ ಹೋಮಂ ತತ್ರೈವ ಪಾವಕೇ ॥೧೬॥

ಪಾವಕೋದನವರ್ತೀ ಸ್ಯಾದ್ಬ್ರಹ್ಮಾಚಾರ್ಯಶ್ಚ ವಾಗ್ಯತಃ ।
ನಕ್ತಭುಕ್ತೇನ ವರ್ತೀ ಸ್ಯಾದ್ಭೂಶಯ್ಯಾದಿರತೋವ್ರತೀ ॥೧೭॥

ರುದ್ರತ್ರಿಷವಣಂ ಕುರ್ಯುಃ ಸ್ನಾನಮೌನೇನ ತೇ ತದಾ ।
ಶತಂ ದಶಾವರಾನ್ವಾಪಿ ದ್ವಿಜಾನ್ ಸಂಭೋಜಯೇತ್ಕ್ರಮಾತ್ ॥೧೮॥

---

ಚಿನ್ನದ ಅಥವಾ ತಾಮ್ರದ ಅಥವಾ ಬೆಳ್ಳಿಯ ಅಥವಾ ಮಣ್ಣಿನ ಒಡಕಿಲ್ಲದ ಕಲಶದಲ್ಲಿ ರುದ್ರನನ್ನು ಆವಾಹನೆಮಾಡಿ ಅರಳಿದ ತಾವರೆ ಹೂಗಳಿಂದಲೂ, ಪಂಚ ಪಲ್ಲವ, ಪಂಚತ್ವಕ್ಕುಗಳಿಂದಲೂ, ಧೂಪದೀಪನಿವೇದನಾದಿಗಳನ್ನು ಅರ್ಪಿಸಿ ಪೂಜಿಸ ಬೇಕು. ಅನಂತರ ಕೊನೆಯಲ್ಲಿ ಸ್ವಿಷ್ಟಕೃತ್ತು, ಪ್ರಾಯಶ್ಚಿತ್ತಹೋಮ ಇವುಗಳನ್ನು ನಡೆಸಿ ಅದೇ ಅನ್ನ ಮತ್ತು ತುಪ್ಪದಿಂದ ಎಂಟು ದಿಕ್ಕುಗಳಲ್ಲಿಯೂ ರುದ್ರಬಲಿ ಯನ್ನು ಹಾಕಬೇಕು. ॥೧೩-೧೪-೧೫॥

ಹೀಗೆ ಮೂರುದಿನಗಳು ಹೋಮ, ಪೂಜೆ, ಬಲಿ ಇವುಗಳನ್ನು ಒಂದೇ ಅಗ್ನಿಯಲ್ಲಿ ನಡೆಸುತ್ತಿರಬೇಕು. ಈ ಮೂರು ದಿನಗಳಲ್ಲೂ ಬ್ರಹ್ಮ ಮತ್ತು ಆಚಾರ್ಯನು ಹಗಲು ಹವಿಶ್ಶೇಷವನ್ನು ತಿಂದು ರಾತ್ರಿ ಭೋಜನಮಾಡುತ್ತಾ ನೆಲದಮೇಲೆ ಮಲಗಿ ವ್ರತವನ್ನು ಮುಗಿಸಬೇಕು. ॥೧೬-೧೭॥

ರುದ್ರಪಾರಾಯಣಾದಿಗಳಿಂದಲೇ ಸ್ನಾನಮಾಡುತ್ತಾ ಇತರ ವ್ಯವಹಾರ ಗಳನ್ನು ಬಿಟ್ಟು ಪ್ರತಿದಿನವೂ ಹತ್ತುಜನಕ್ಕೆ ಕಮ್ಮಿಯಿಲ್ಲದಂತೆ ನೂರಾರು ಜನ ದ್ವಿಜರಿಗೆ ಭೋಜನಕ್ಕೆ ಏರ್ಪಡಿಸಬೇಕು. ಅನೇಕ ಭಕ್ಷ್ಯಗಳು, ಭೋಜ್ಯಗಳು,

ಭಕ್ಷ್ಯಭೋಜ್ಯೈಸ್ಸನಿಹಿತೈಸ್ತಾಂಬೂಲೈರ್ಗಂಧಪುಷ್ಪಕೈಃ ।
ದುಕೂಲೈರ್ದಕ್ಷಿಣಾದಾನೈಃ ರಾತ್ರಾವಭ್ಯರ್ಚ್ಯ ಶಂಕರಂ ॥೧೯॥

ಗ್ರಾಮಾದ್ಬಹಿರ್ಗೃಹೇ ವಾಪಿ ಶಾಲಾಯಾಂ ವಾ ನದೀತಟೇ ।
ವಟೋರುವಿಟಪಸ್ಯಾಧೋ ಬಿಲ್ವಾಶ್ವತ್ಥಾದಿಮೂಲಕೇ ॥೨೦॥

ಶುಭಮಾಸೇ ವಸಂತಾದೌ ಶುಭರ್ಕ್ಷೇ ಚೋತ್ತರಾಯಣೇ ।
ಯಥಾವಿಭವಸಾರೇಣ ಬ್ರಹ್ಮಾಣಂ ಪೂಜಯೇತ್ಕ್ರಮಾತ್ ॥೨೧॥

ಆಚಾರ್ಯಂ ವಾ ಯಥಾಶಕ್ತ್ಯಾ ಪ್ರಾದಕ್ಷಿಣ್ಯಕ್ರಮೇಣ ಹಿ ।
ಪ್ರದಕ್ಷಿಣವಿಧಿಂ ಕೃತ್ವಾ ಸಂರಕ್ಷ್ಯಾಥ ಪ್ರಯತ್ನತಃ ॥೨೨॥

ತುಷ್ಯೈಃ ಕರೀಷ್ಯೈಶ್ಚ ಪೃಥಕ್ಸಪ್ತರಾತ್ರಂ ಶಿವಾಲಯಂ ।
ಬ್ರಾಹ್ಮಣಾನ್ ಸಾಂಗತಾಸಿದ್ಧ್ಯೈ ಭೋಜಯೇಚ್ಛಾಂಭವಾನ್ಯತೀನ್ ॥೨೩॥

---

ತಾಂಬೂಲಾದಿಗಳು, ಗಂಧ, ಪುಷ್ಪ, ಪಟ್ಟೆಮಡಿ, ದಕ್ಷಿಣೆ, ದಾನ ಇವುಗಳನ್ನಿತ್ತು ಅವರನ್ನು ತೃಪ್ತಿಗೊಳಿಸಬೇಕು. ರಾತ್ರಿಯಲ್ಲಿ ಶಂಕರನನ್ನು ನಾನಾವಿಧವಾದ ಉಪಚಾರಗಳಿಂದ ಅರ್ಚಿಸುತ್ತಿರಬೇಕು. ಊರಿನ ಹೊರಗಾಗಲಿ, ಮನೆಯಲ್ಲಾಗಲಿ, ವಿದ್ಯಾಸಂಸ್ಥೆಗಳು, ನದೀತಟ, ಆಲದಮರದ ಅಧೋಭಾಗ, ಬಿಲ್ವ, ಅರಳಿ ಈ ಮರಗಳ ಬುಡ, ಇಂತಹ ಪವಿತ್ರ ಸ್ಥಳಗಳಲ್ಲಿ ಅಗ್ನಿಪ್ರತಿಷ್ಠೆಗೆ ಸ್ಥಳವನ್ನು ಆರಿಸಬೇಕು. ||೧೮-೧೯-೨೦||

ವಸಂತಋತುವಿನಲ್ಲಿ ಅಥವಾ ಉತ್ತರಾಯಣದಲ್ಲಿ ಅಥವಾ ಶುಭಮಾಸದಲ್ಲಿ ತಿಥಿ ನಕ್ಷತ್ರವಾರಗಳ ಶುದ್ಧಿಯನ್ನು ಹೊಂದಿರುವ ಶುಭದಿನದಲ್ಲಿ ವೈಭವದಿಂದ ಈ ಕರ್ಮವನ್ನು ಆರಂಭಿಸಿ ಬ್ರಹ್ಮ ಮತ್ತು ಆಚಾರ್ಯರನ್ನು ಆಹ್ವಾನಿಸಬೇಕು. ಹಾಗೆಯೇ ಆಚಾರ್ಯನಿಗೆ ಪ್ರದಕ್ಷಿಣವಿಧಿಯಿಂದ ನಮಸ್ಕರಿಸಿ, ಅವನಿಂದ ಅಗ್ನಿರಕ್ಷಣೆಮಾಡಿಸುತ್ತಾ, ಬತ್ತದ ಹೊಟ್ಟು ಬೆರಣಿ ಮೊದಲಾದುವುಗಳಿಂದ ಆ ಅಗ್ನಿಯನ್ನು ಏಳುದಿನಗಳು ಪೂರ್ತಿ ಕಾಪಾಡಬೇಕು. ಹಾಗೆಯೇ ಈ ವ್ರತಸಾಂಗತೆಗಾಗಿ, ಅಷ್ಟು ದಿನಗಳೂ ಶಿವಾಲಯದಲ್ಲಿ ಶಾಂಭವರಿಗೂ ಯತಿಗಳಿಗೂ ಭೋಜನವನ್ನು ಏರ್ಪಡಿಸಬೇಕು. ||೨೧-೨೨-೨೩||

ಶಿವಯೋಗೀ ತಥೇಶಾನಂ ಲಿಂಗೇ ಸಂಪೂಜಯೇದ್ದ್ವಿಜಃ ।
ಬ್ರಾಹ್ಮಣಃ ಕ್ಷತ್ರಿಯೋ ವೈಶ್ಯೋ ರಾಜಾವಾಪಿ ಯಥಾವಿಧಿ ॥೨೪॥

ಯಥಾ ಶಕ್ತ್ಯನುಸಾರೇಣ ಶಿವಭಕ್ತ್ಯಾ ಪ್ರಯತ್ನತಃ ।
ಸಾಧಯೇದ್ಭಸಿತಪ್ರಾಪ್ತ್ಯೈ ಗೋಮಯಂ ತದ್ವಿಧಿಂ ಶೃಣು ॥೨೫॥

ಏವಂ ಶಿವಾನಲಪ್ರೋಕ್ತಂ ಭಸ್ಮಧಾರಣಹೇತವೇ ।
ಮಹಾಶಾಂಭವವೀರಾಣಾಮೇಷ ಏವ ವಿಧಿಃ ಸ್ಮೃತಃ ॥೨೬॥

ವಿರಜಾನಲಜಂ ಭಸ್ಮ ಧಾರಯೇತ್ಸಮಿದುದ್ಭವಂ ।
ಅಗ್ನಿರಿತ್ಯಾದಿಭಿರ್ಮಂತ್ರೈರ್ದಗ್ಧಪಾಪಸ್ತ್ರಿಪುಂಡ್ರಧೃಕ್ ॥೨೭॥

ವರ್ಣೀ ಪರ್ಣಮಯಂ ದಂಡಂ ಧಾರಯನ್ ಸ್ವರ್ಣವರ್ಜಿತಃ ।
ವೇದಮೇಕಂ ತ್ರಯಂ ವಾಪಿ ಅಭ್ಯಸೇಚ್ಛಿವಭಾವನಃ ॥೨೮॥

---

ಹೀಗೆ ಶಿವಯೋಗಿಯೆನಿಸಿದವನು ಇಂತಹ ಭಸ್ಮಧಾರಣೆ ಮಾಡಿಕೊಂಡು, ಶಿವಲಿಂಗದಲ್ಲಿ ಈಶ್ವರನನ್ನು ಪೂಜಿಸಬೇಕು. ಈ ಭಸ್ಮವಿಧಿಗೆ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ರಾಜ ಇವರಲ್ಲಿ ಯಾರಾದರೂ ಸರಿಯೇ, ಅವರು ತಮ್ಮ ಶಕ್ತ್ಯನುಸಾರವಾಗಿ ಗೋಮಯವನ್ನು ಸಂಪಾದಿಸಿ ವಿಭೂತಿಗ್ರಹಣಕ್ಕಾಗಿ ಮೇಲೆ ಹೇಳಿದ ಕ್ರಮದಿಂದ ವರ್ತಿಸಬಹುದು. ಜೈಗೀಷವ್ಯಮಹರ್ಷಿಯೇ, ಇದೇ ಭಸ್ಮವಿಧಿ, ಇದನ್ನು ಆದರದಿಂದ ಕೇಳು. ॥೨೪-೨೫॥

ಮೇಲೆ ಹೇಳಿದ ವಿಧಿಯಂತೆ ನಿರ್ಮಿತವಾದ ಅಗ್ನಿಯೇ ಶಿವಾನಲ. ಭಸ್ಮ ಸಂಗ್ರಹಣ ಮಾಡುವ ಶಾಂಭವ ಶ್ರೇಷ್ಠರಿಗೆ ಇದೇ ಅಗ್ನಿಯೇ ವಿಹಿತವಾದುದು. ಈ ಅಗ್ನಿಯಲ್ಲಿ ಸಮಿತ್ತಿನಿಂದ ಹುಟ್ಟಿದ ಧೂಳಿಲ್ಲದ ಭಸ್ಮವನ್ನು ಧಾರಣೆಗಾಗಿ ಸ್ವೀಕರಿಸಬೇಕು. ಇದನ್ನು ತ್ರಿಪುಂಡ್ರವಿಧಾನದಂತೆ ಧರಿಸಿದವನು ಪಾಪರಹಿತನಾಗುವನು. ಬ್ರಹ್ಮಚಾರಿಯು ಅಗ್ನಿರಿತ್ಯಾದಿ ಮಂತ್ರಗಳಿಂದ ವಿಭೂತಿಯನ್ನು ತ್ರಿಪುಂಡ್ರಾಕಾರದಲ್ಲಿ ಬಳಿದುಕೊಂಡು, ಎಲೆಯಿಂದ ಸಹಿತವಾದ ದಂಡವನ್ನು ಹಿಡಿದು, ಸುವರ್ಣಪಾತ್ರೆಯನ್ನು ಮುಟ್ಟದೆ ಒಂದೋ, ಎರಡೋ, ಮೂರೋ ವೇದಗಳನ್ನು ತನ್ನ ಶಕ್ತಿಯಿದ್ದಂತೆ ಅಭ್ಯಾಸಮಾಡಬೇಕು. ಮತ್ತು ಸದಾ ಶಿವನನ್ನೇ ಧ್ಯಾನಿಸುತ್ತಿರಬೇಕು. ॥೨೬-೨೮॥

ಗೃಹಸ್ಥಧರ್ಮದಲ್ಲಿರುವವನು ತಾನು ಔಪಾಸನಮಾಡಿದ ಅಗ್ನಿಯಲ್ಲಿನ

ಗೃಹಸ್ಥೋಽಪಿ ಸದಾ ವಿದ್ವಾನ್ ಸ್ವಕೀಯೋಪಾಸನೋದ್ಭವಂ ।
ಧಾರಯೇದೇಕ ಏಕೈಕಂ ನಯನ್ ಭಸ್ಮ ಯಥೋತ್ತಮಂ ॥೨೯॥

ಸರ್ವೇಷಾಂ ಸರ್ವದಾ ಧಾರ್ಯಂ ತ್ರಿಪುಂಡ್ರೋದ್ಧೂಲನಾತ್ಮನಾ ।
ವನಸ್ಥೋ ದಾವಜಂ ಭಸ್ಮ ಧಾರಯನ್ ಧೂಲನಾತ್ಮನಾ ॥೩೦॥

ತ್ರಿಯಾಯುಷ್ಯೈಸ್ತ್ರಿಪುಂಡ್ರಾಂಕೋ ಗ್ರಾಮ್ಯಾಹಾರಾದಿವರ್ಜಿತಃ ।
ಸಂನ್ಯಾಸೀ ಪ್ರಣವೇನೈವ ಧಾರಯೇದ್ಧೂಲಿತಾತ್ಮನಾ ॥೩೧॥

ತ್ರಿಪುಂಡ್ರವರ್ತ್ಮನಾ ಭಸ್ಮ ಸಿತಂ ವಾಥ ಯಥಾರುಚಿಃ ।
ವೈಪ್ರಾನಲಭವಂ ವಾಪಿ ಧಾರಯನ್ ಮುಕ್ತಿಭುಕ್ತಿಭಾಕ್ ॥೩೨॥

ಶಿವಾನಲೋತ್ಥಭಸಿತಂ ಶಾಂಭವೈಶ್ಶಿವಯೋಗಿಭಿಃ ।
ಧಾರ್ಯಮುತ್ಯಾಶ್ರಮೀಣಾಂ ತು ಶ್ಮಶಾನಾಗ್ನಿಸಮುದ್ಭವಂ ॥೩೩॥

ಸ್ತ್ರೀಭಿಶ್ಶಿವಾಲಯೋತ್ಥಂ ತು ಧಾರ್ಯಂ ಸರ್ವಜನೈರಪಿ ।
ಬ್ರಹ್ಮಕ್ಷತ್ರವಿಶಾಂ ಈಶಪ್ರೋದಿತೋ ಹ್ಯೇಷ ವೈ ವಿಧಿಃ ॥೩೪॥

---

ಭಸ್ಮವನ್ನೇ ಧಾರಣೆಮಾಡಬೇಕು. ಪ್ರತಿಯೊಬ್ಬನೂ ಅವನಿಗೆ ವಿಹಿತವಾದ ಭಸ್ಮವನ್ನೇ ಬಳಿದುಕೊಳ್ಳಬೇಕು. ಅಂತೂ ಎಲ್ಲರೂ ಯಾವ ಭಸ್ಮದಿಂದಲಾದರೂ ಭಸ್ಮೋದ್ಧೂಲನ ಮಾಡಿಕೊಳ್ಳಬೇಕು. ವಾನಪ್ರಸ್ಥಾಶ್ರಮಿಯಾದವನು ಕಾಡುಕಿಚ್ಚಿನಿಂದ ಹುಟ್ಟಿದ ಧೂಳುಸಹಿತವಾದ ಭಸ್ಮವನ್ನೇ ಧರಿಸಬಹುದು. ॥೨೯-೩೦॥

ಸಂನ್ಯಾಸಿಯು 'ತ್ರ್ಯಾಯುಷಂ ಜಮದಗ್ನೇಃ' ಎಂಬ ಮಂತ್ರಗಳಿಂದ ಸರ್ವದಾ ಭಸ್ಮ ತ್ರಿಪುಂಡ್ರವನ್ನು ಧರಿಸುತ್ತಾ ಊರಿನ ಆಹಾರವಿಹಾರಗಳನ್ನು ತೊರೆದು, ಪ್ರಣವಮಂತ್ರದಿಂದ ಭಸ್ಮೋದ್ಧೂಲನಮಾಡಿಕೊಳ್ಳಬೇಕು. ತ್ರಿಪುಂಡ್ರ ವಿಧಿಯಂತೆ ಯಾವ ಬಿಳಿಯ ಭಸ್ಮವನ್ನಾಗಲಿ ಧರಿಸಿದವನು ಮುಕ್ತಿಭುಕ್ತಿಯನ್ನು ಹೊಂದುವನು. ॥೩೧-೩೨॥

ಶಿವಯೋಗಿಗಳೂ, ಶಿವಾರಾಧಕರೂ ಶಿವಾನಲಜನ್ಯವಾಗಿರುವ ಭಸ್ಮವನ್ನೇ ಧರಿಸಬೇಕು. ಯಾವ ಆಶ್ರಮದಲ್ಲಿಯೂ ಇರದವರು ಅಂದರೆ ವೈರಾಗ್ಯಶಾಲಿಗಳು ಶ್ಮಶಾನಾಗ್ನಿಯಿಂದ ಹುಟ್ಟಿದಭಸ್ಮವನ್ನು ಲೇಪಿಸಿಕೊಳ್ಳಬಹುದು. ಸ್ತ್ರೀಯರು ಮತ್ತು ಸರ್ವಸಾಮಾನ್ಯರು, ಬ್ರಹ್ಮ ಕ್ಷತ್ರಿಯ ವೈಶ್ಯಾದಿಗಳು ಸಹ ಶಿವಾಲಯದಲ್ಲಿರುವ ಭಸ್ಮವನ್ನು ಧರಿಸಬಹುದು. ಈ ಕ್ರಮವೇ ಭಸ್ಮಧಾರಣೆಗೆಂದು ಶಂಕರನಿಂದ ಆಜ್ಞಾಪಿಸಲ್ಪಟ್ಟಿದೆ. ॥೩೩-೩೪॥

॥ ಶ್ರೀಸ್ಕಂದ ಉವಾಚ ॥

ಶಿವಾನಲಸಮುದ್ಭವಂ ಭಸಿತಮೇವ ಕಲ್ಪೋದ್ಗತಂ
ಲಭೇತ ಯದಿ ಭಾಗ್ಯತೋ ಮೃಡ ಪೃಥಾರ್ಚನಾಸೂದ್ಯತಃ ।
ತದನ್ಯದಪಿ ಕಥ್ಯತೇ ಶಿವಮುಹೇಶಸಚ್ಛಾಸನಂ
ತ್ರಿಪುಂಡ್ರಪರಿಧಾರಣಂ ಭವತಿ ಶರ್ವತೋಷಪ್ರದಂ ॥೩೫॥

ಯೇ ನಿಂದಂತಿ ಮಹೇಶ್ವರಂ ತ್ರಿಜಗತಾಮಾಧಾರಭೂತಂ ಹರಂ
ತೇ ನಿಂದಂತಿ ತ್ರಿಪುಂಡ್ರಧಾರಣವಿಧಿಂ ದ್ವಿಷ್ಯಂತು ತದ್ದರ್ಶನೇ ।
ತೇ ವೈ ಸೂಕರ ಸೂಕರೀ ಖರ ಖರೀ ಯೋನ್ಯುತ್ಥಕೀಟೋಪಮಾ
ಜಾರಾ ಏವ ಭವಂತಿ ಪಾಪಪರಮಾ ತೇ ನಾರಕಾಃ ಕೇವಲಂ ॥೩೬॥

ತಾನ್ ದೃಷ್ಟ್ವಾ ಶಶಿಭಾಸ್ಕರೌ ನಿಶಿ ದಿವಾ ಸ್ವಪ್ನೇಽಪಿ ವಾ ಕೇವಲಂ
ಪಶ್ಯಂತು ಶ್ರುತಿರುದ್ರಸೂಕ್ತಜಪತೋ ಮುಚ್ಯೇತ ತೇನಾಘಕೇಃ ।
ತತ್ಸಂಭಾಷಣತೋ ಭವೇತ ನರಕಂ ನಿಸ್ತಾರವಾತೋಜ್ಝಿತಂ
ಯೇ ಭಸ್ಮಾದಿವಿಧಾರಿಣಾಂ ತನುರುಮೇ ನಿಂದಂತಿ ಮಂದಾ ಹಿ ತೇ ॥೩೭॥

---

ಪರಶಿವನ ಪಾದಕಮಲಗಳ ಅರ್ಚನೆಯಲ್ಲಿ ನಿರತನಾದವನಿಗೆ ಶಿವಾನಲದಿಂದ ಹುಟ್ಟಿದ ಭಸ್ಮವು ದೊರಕಬೇಕಾದರೆ ಅವನ ಭಾಗ್ಯವು ಅಪರಿಮಿತವಾಗಿರಬೇಕು. ವಿಧಿವತ್ತಾಗಿ ನಿರ್ಮಿತವಾದ ಆ ವಿಭೂತಿಯ ಭಾಗ್ಯಕ್ಕಿಂತಲೂ ಅತಿಶಯವಾದುದು ಲೋಕದಲ್ಲಿ ಯಾವುದೂ ಇರುವುದಿಲ್ಲ. ಅಲ್ಲದೆ ತ್ರಿಪುಂಡ್ರಪರಿಧಾರಣೆಯೆಂಬುದು ಪರಶಿವನಿಗೆ ಸಂತೋಷವನ್ನುಂಟುಮಾಡತಕ್ಕದ್ದಲ್ಲವೆ! ॥೩೫॥

ತ್ರಿಜಗತ್ತುಗಳನ್ನೂ ಧರಿಸಿ ರಕ್ಷಿಸಬಲ್ಲ ಮಹಾದೇವನನ್ನು ಯಾರು ನಿಂದಿಸುವರೋ, ತ್ರಿಪುಂಡ್ರಧಾರಣವಿಧಿಯಲ್ಲಿ ಯಾರು ದ್ವೇಷವಿಡುವರೋ, ಅವರು ಸಂಕರಜಾತಿಯವರೆಂದು ಹೇಳಬಹುದು. ಹಂದಿ, ಕತ್ತೆ, ಮುಂತಾದ ಪ್ರಾಣಿಯೋನಿಗಳಲ್ಲಿ ಕೀಟರೂಪವಾಗಿ ನಿಂತು, ಹಾಗೆಯೇ ಕೇವಲ ವ್ಯಭಿಚಾರಜನಿತರಾಗಿ ನರಕವನ್ನು ಹೊಂದುವ ಪಾಪಿಗಳೆನಿಸಿ ಬಾಳುವರು. ॥೩೬॥

ಶಿವದೂಷಕರನ್ನು ಹಗಲುರಾತ್ರಿಗಳಲ್ಲಿ ಸೂರ್ಯಚಂದ್ರರು ನೋಡಿ ಅವರ ದರ್ಶನದಿಂದ ಲಭಿಸಿದ ಪಾಪರಾಶಿಯನ್ನು ಶ್ರೀರುದ್ರಮಂತ್ರಗಳನ್ನು ಜಪಿಸುವುದರಿಂದ ಕಳೆದುಕೊಳ್ಳುವರು. ಅಂತಹವರೊಡನೆ ಮಾತನಾಡುವುದೇ ಪಾಪಕರವು. ಅವರ

ಶ್ವಾನಾಶ್ವಾಸನ ಹೀನಮೈಥುನಭವಾಸ್ತೇ ರಾಸಭಾಭಾನನಾಃ
ದೀನಾ ಏವ ವನಾವನೀಷು ನಿತರಾಂ ಕೀಟೋಪಮಾಶಾರತಾಃ ।
ಕೀನಾಶಸ್ಯ ವಶಂ ಪ್ರಯಾಂತಿ ಕುನರಾ ಜಾರೋಪಜಾರೋದ್ಭವಾ
ಯೇ ನಿಂದಂತ್ಯಪಿ ಭಸ್ಮಧಾರಣರತಂ ಮಂದಾಹಿ ಕರ್ಮಂದಿನಃ ॥೩೮॥

ಅಸಾರಾಚಾರಾದ್ಯೈರ್ದೃಢತರವಿಮೂಢಾತ್ಮಮತಿಭಿ
ರ್ವಿಶತ್ಯೈಕಂ ಶಾಸ್ತ್ರಂ ಖಲು ಕುಲಜಮಾರ್ಗೈಕಶರಣಾಃ ।
ಕುಲಾಲೋತ್ಪನ್ನಾಸ್ತೇ ಶ್ರುತಿಗದಿತಭಸ್ಮೋಜ್ಝಿತ ಮುಖಂ
ಲುಲಾಯಪ್ರಾಯಾಸ್ತೇ ಯಮಗತಿಗತಾ ನಾರಕವರಾಃ ॥೩೯॥

ಇತಿ ಶ್ರೀ ಶಿವರಹಸ್ಯೇ ಈಶ್ವರಾಖ್ಯೇ ದಶಮಾಂಶೇ
ಭಸ್ಮೋತ್ಪತ್ತಿವಿಧಿ ನಿರೂಪಣಂ ನಾಮ ತೃತೀಯೋಽಧ್ಯಾಯಃ

---

ದೇಹದಮೇಲೆ ಬೀಸುವ ವಾಯುವಿನ ಸ್ಪರ್ಶದಿಂದಲೇ ಅನೇಕ ದುಃಖಗಳುಂಟಾಗುವುವು. ಎಲೌ ದೇವಿಯೇ; ಅಂತಹವರು ನಿಜವಾಗಿಯೂ ಮೂಢರೇ ಸರಿ. ॥೩೭॥

ಯಾರು ಭಸ್ಮಧಾರಣನಿರತರಾದವರನ್ನು ದೂಷಿಸುವರೋ, ಯಾರು ಇತರ ಶಾಂಭವರನ್ನು ನಿಂದಿಸುತ್ತಾ ಭಿಕ್ಷಾದಿಗಳಿಂದ ಜೀವಿಸುವರೋ, ಅವರು ಶ್ವಾನ ಮೈಥುನದಿಂದ ಜನಿಸಿದವರು, ಮತ್ತು ಅವರು ಕತ್ತೆಯಾಗಿ ಹುಟ್ಟುವರು, ಜಾರಜರಾಗಿ ತಾವೂ ಜಾರವೃತ್ತಿಯಲ್ಲಿ ಜನ್ಮವನ್ನುಕಳೆದು ಕೊನೆಗೆ ನರಕಭಾಗಿಗಳೆನಿಸಿ ಯಮನ ಅಧೀನಕ್ಕೆ ಸಿಕ್ಕಿಬೀಳುವರು. ॥೩೮॥

ವೇದಪ್ರತಿಪಾದ್ಯಮಾನವಾದ ಭಸ್ಮಧಾರಣೆಯಲ್ಲಿ ವಿಮುಖರಾದ ಪಾಪಿಗಳು ಸಾರವಿಲ್ಲದ ಅನೇಕ ಆಚಾರಗಳನ್ನು ಕಟ್ಟಿಕೊಂಡು ಮೂಢಮಾರ್ಗದಲ್ಲಿ ಸಂಚರಿಸಿ ತಾವು ಸತ್ಕುಲಪ್ರಸೂತರೆಂಬ ಹೆಮ್ಮೆಯೊಂದರಿಂದಲೇ ಜೀವಿಸುವರು. ಶಾಸ್ತ್ರಪರಿಣತರಾದರೂ ಅವರು ಕೋಣಗಳಿಗೆ ಸಮನಾಗಿ ಕುಂಬಾರನೇ ಮೊದಲಾದವರ ವಂಶೀಯರಾಗಿದ್ದು, ಕೊನೆಗೆ ನರಕವನ್ನು ಹೊಂದಿ ಯಮನ ಕೈಗೆ ಸಿಕ್ಕುವರು. ಆದ್ದರಿಂದ ಯಾರೂ ಯಾವಾಗಲೂ ಭಸ್ಮವನ್ನಾಗಲಿ, ಭಸ್ಮಧಾರಿಯಾದ ಶಾಂಭವನನ್ನಾಗಲಿ ದೂಷಿಸಬಾರದು. ॥೩೯॥

ಇಲ್ಲಿಗೆ ಶ್ರೀಶಿವರಹಸ್ಯದಲ್ಲಿ ಹತ್ತನೆಯ ಅಂಶದಲ್ಲಿ ಮೂರನೆಯ ಅಧ್ಯಾಯವು ಮುಗಿದುದು,

॥ ಶ್ರೀಃ ॥

॥ ಶ್ರೀ ಶಿವಾಯನಮಃ ॥

# ಅಥ ಶ್ರೀ ಶಿವರಹಸ್ಯೇ

## ಈಶಾನಾಖ್ಯೇ

## ದಶಮಾಂಶೇ ಪೂರ್ವಾರ್ಧೇ

## ಚತುರ್ಥೋಽಧ್ಯಾಯಃ

॥ ಶ್ರೀಸ್ಕಂದ ಉವಾಚ ॥

ಧೇನುಂ ಲಕ್ಷಣಸಂಪನ್ನಾಂ ಪರೀಕ್ಷ್ಯೇತ ವಿಚಕ್ಷಣಃ ।
ಸರ್ವಾವಯವಸಂಪನ್ನಾಂ ಹೃಷ್ಟಾಂ ದೋಷಾದಿವರ್ಜಿತಾಂ ॥೧॥

ಬಹುಕ್ಷೀರದುಹಾಂ ಶಸ್ತಾಂ ಸ ವತ್ಸಾಮೂಢಸೋ ವರಾಂ ।
ಶ್ವೇತಾಂ ರಕ್ತಾಂ ತಥಾ ಕೃಷ್ಣಾಂ ಕಪಿಲಾಂ ವಾ ವಿಶೇಷತಃ ॥೨॥

ಶಬಲಾಂ ವಾಥ ಪಿಂಗಾಕ್ಷೀಮರೋಗಾಮುಪಲಾಯಿನೀಂ ।
ಹುಂಬಾರವಕೃತೋತ್ಸಾಹಾಂ ದರ್ಶನೀಯಾಂ ಚ ಶೃಂಗಿಣೀಂ ॥೩॥

---

## ನಾಲ್ಕನೆಯ ಅಧ್ಯಾಯ

ಗೋಪರೀಕ್ಷೆಯಲ್ಲಿ ನಿಪುಣನಾದವನು ಈ ಲಕ್ಷಣಗಳಿಂದ ಕೂಡಿದ ಹಸುವನ್ನು ಶ್ರೇಷ್ಠವಾದದ್ದೆಂದೂ ಲಕ್ಷಣವಿಶಿಷ್ಟವಾದದ್ದೆಂದೂ ಭಾವಿಸಬೇಕು. ಹಸುವು ಎಲ್ಲ ಅವಯವಗಳಿಂದಲೂ ತುಂಬಿಕೊಂಡಿರಬೇಕು. ಅದು ಯಾವಾಗಲೂ ಪ್ರಸನ್ನಮುಖದಿಂದಿರಬೇಕು. ಹೆಚ್ಚು ಹಾಲು, ದಪ್ಪ ಕೆಚ್ಚಲು, ಎಳೆಸಾದ ಕರು ಇವುಗಳನ್ನು ಹೊಂದಿರಬೇಕು. ಬಿಳುಪು, ಕೆಂಪು, ಕಪ್ಪು, ಶ್ಯಾಮಲವರ್ಣ, ಚಿತ್ರವರ್ಣ, ಪಿಂಗಳವಾದ ಕಣ್ಣು ಇವುಗಳಿಂದ ಕೂಡಿರಬೇಕು. ರೋಗಾದಿಗಳು ಹಸುವಿನಲ್ಲಿ ತೋರಬಾರದು. ಓಡಿಹೋಗುವ ಸ್ವಭಾವವಿರಕೂಡದು. 'ಹುಂಬಾ' ಎಂದು ಇಂಪಾದ ಧ್ವನಿಮಾಡುತ್ತಾ ನೋಡುವುದಕ್ಕೆ ಲಕ್ಷಣವಾಗಿ, ಲಕ್ಷಣವಾದ ಕೋಡುಗಳಿಂದ ಕೂಡಿರಬೇಕು. ॥೧-೨-೩॥

ಹ್ರಸ್ವಾಂಗಾಂ ವಿಕಟಾಂ ಚೈವಮನುನ್ಮತ್ತಾಂ ಪಲಾಯಿನೀಂ ।
ಚಾರೇತ್ರವಾಂ ತಥಾ ರುಷ್ಟಾಂ ದೀರ್ಘಶೃಂಗಾಮಶೃಂಗಕಾಂ ॥೪॥

ರೋಗಿಣೀಂ ನವಸೂತಾಂ ಚ ದಗ್ಧಾಂಗಾಂ ಚಕ್ರಚಿಹ್ನಿತಾಂ ।
ಮಲಪಂಕವಸಾಮಾಂಸಕೇಶಶ್ಚೈವಲಭಕ್ಷಿಣೀಂ ॥೫॥

ವತ್ಸಾಪವತ್ಸಲಾಂ ಪೃಶ್ನೀಮಲ್ಪಕ್ಷೀರಾಲ್ಪಮೂತ್ರಿಣೀಂ ।
ಗಾನದೋಗ್ಧ್ರೀಂ ಮಂದಗಮಾಂ ಅಂಗಹೀನಾಂ ಕೃಶಾಂ ತಥಾ ॥೬॥

ಅತಿಸ್ಥೂಲಾಂ ಚ ಮುಂಡಾಂ ಚ ಏಕಗರ್ಭಾಮಗರ್ಭಿಣೀಂ ।
ದಾಹಗರ್ಭಾಂ ಚ ವಹನೀಂ ಗರ್ಭಿಣೀಂ ಸ್ರಸ್ತಗರ್ಭಿಣೀಂ ॥೭॥

ಮೃತವತ್ಸಾಮನುತ್ಸಾಂ ಚ ವರ್ಜಯಿತ್ವಾ ಪ್ರಯತ್ನತಃ ।
ಕಾಕಸ್ವರಾಂ ಕೋಕರವಾಂ ಘಂಟಾಭೀತಾಂ ಕ್ಷುಧಾತುರಾಂ ॥೮॥

---

ಕುಳ್ಳಾದ ಹಸು, ವಿರೂಪವಾದದ್ದು, ಹುಚ್ಚುಹುಚ್ಚಾಗಿ ಕುಣಿದಾಡುವುದು ಓಡಿಹೋಗುವುದು, ಸದಾ ಕಿವಿಯನ್ನು ಅಲ್ಲಾಡಿಸುವುದು, ಸದಾ ಕೋಪವನ್ನು ತೋರಿಸುವುದು. ದೀರ್ಘವಾದ ಕೊಂಬುಳ್ಳದ್ದು, ಕೊಂಬೇ ಇಲ್ಲದುದು, ರೋಗದಿಂದ ನರಳುವುದು, ಆಗತಾನೇ ಈದ ಹಸು, ಸುಟ್ಟ ಅವಯವವುಳ್ಳದ್ದು, ಚಕ್ರಾಂಕನವುಳ್ಳದ್ದು, ಅಮೇಧ್ಯ, ಕೆಸರು, ಮಾಂಸ, ರಕ್ತ, ಕೂದಲು, ಪಾಚಿ ಇವುಗಳನ್ನು ತಿನ್ನುವುದು, ಕರುವಿನಲ್ಲಿ ಪ್ರೀತಿಯನ್ನಿಡದ ಹಸು, ಅಲ್ಪದೇಹವುಳ್ಳದ್ದು, ಸ್ವಲ್ಪ ಹಾಲು ಕೊಡುವುದು, ಸ್ವಲ್ಪ ಗಂಜಲ ಹುಯ್ಯುವುದು, ರಾಗವಾಗಿ ಹಾಲನ್ನು ಸುರಿಸುವುದು, ಬಹಳ ನಿಧಾನವಾಗಿ ನಡೆಯುವುದು, ಅಂಗಹೀನವಾದದ್ದು, ಕೃಶಾಂಗವುಳ್ಳದ್ದು, ಅತಿ ಸ್ಥೂಲದೇಹವುಳ್ಳದ್ದು, ಕೂದಲಿಲ್ಲದ್ದು, ಒಂದೇ ಕರುವುಳ್ಳದ್ದು, ಗೊಡ್ಡು, ಗರ್ಭಸ್ರಾವವುಳ್ಳದ್ದು, ಗರ್ಭಸಹಿತವಾದದ್ದು, ಕಂದುಕರುಗಳನ್ನು ಹೊತ್ತಿರುವುದು, ಸತ್ತಕರುವುಳ್ಳದ್ದು, ಕರುವೇ ಇಲ್ಲದ್ದು, ಕಾಗೆ, ಚಕ್ರವಾಕ ಇವುಗಳಂತೆ ಕಠೋರವಾಗಿ ಕೂಗತಕ್ಕದ್ದು, ಘಂಟಾಧ್ವನಿಗೆ ಹೆದರತಕ್ಕದ್ದು, ಸದಾ ಹಸಿವಿನಿಂದ ಪೀಡಿತವಾದದ್ದು, ಈ ಲಕ್ಷಣಗಳ ಹಸುಗಳು ಶ್ರೇಷ್ಠವಾದವುಗಳಲ್ಲ. ॥೪-೫-೬-೭-೮॥

ಬಹ್ವಾದನೀಮಲ್ಪಭಕ್ಷಾಂ ಸ್ವೋಧಸಃ ಕ್ಷೀರಪಾಯಿನೀಂ ।
ಸ್ರವನ್ನೇತ್ರಾಂ ಕೃಮಿಯುತಾಂ ಲಾಲಾಜಾಲಮುಖಾಂ ತಥಾ ॥೯॥

ಸರ್ವವರ್ಣಾಮಕಕುದಾಂ ವಿರೂಪಾಮಾಮಗರ್ಭಿಣೀಂ ।
ವೃಷಾಹಾಸಾಂ ಚ ಭೀತಾಂ ಚ ವರ್ಜಯೇದ್ಗೋಮಯಾಹೃತೌ ॥೧೦॥

ಪೂರ್ವಲಕ್ಷಣಸಂಪನ್ನಾಮಲಕ್ಷಣವಿವರ್ಜಿತಾಂ ।
ನೈಚಿಕೀಮುಚಿತಾಂ ತಾಂ ಗಾಂ ಸರ್ವಾಂಗೇ ಲಕ್ಷಣೈರ್ಯುತಾಂ ॥೧೧॥

ಪರೀಕ್ಷ್ಯ ತ್ರ್ಯಕ್ಷಹೃದಯೋ ವಿಷಮಾಕ್ಷಾದಿದೇವತಾಂ ।
ಗವಾಮಂಗೇಷು ತಿಷ್ಠಂತಿ ಭುವನಾನಿ ಚತುರ್ದಶ ॥೧೨॥

ತಸ್ಮಾದ್ಗಾವಃ ಸದಾ ಪೂಜ್ಯಾಃ ಸದಾ ಶಿವಮಯಾಸ್ಸದಾ ।
ಆಗ್ರಿಯಾನಾಂ ಪತಿಶ್ಶಂಭುಸ್ತಾಸು ತಿಷ್ಠತಿ ಸರ್ವದಾ ॥೧೩॥

---

ಹೆಚ್ಚಾಗಿ ಆಹಾರವನ್ನು ತಿನ್ನುವುದು, ಅಥವಾ ಸ್ವಲ್ಪ ತಿನ್ನುವುದು, ತನ್ನ ಕೆಚ್ಚಲಹಾಲನ್ನೇ ತಾನು ಕುಡಿಯುವುದು, ಕಣ್ಣಿನಲ್ಲಿ ಸದಾ ನೀರು ಸುರಿಸುವುದು, ಹುಳುವುಳ್ಳದ್ದು, ಸದಾ ಜೊಲ್ಲು ಸುರಿಸುತ್ತಿರುವುದು, ನಾನಾ ಬಣ್ಣವುಳ್ಳದ್ದು, ಬೆನ್ನಮೇಲೆ ಹಿಣಿಲು ಇಲ್ಲದುದು, ವಿರೂಪವಾಗಿರುವುದು, ಮಾಂಸದುಂಡೆಯಿಂದ ದಪ್ಪವಾದ ಹೊಟ್ಟೆಯುಳ್ಳದ್ದು, ಸದಾ ಎತ್ತಿನ ಜೊತೆಯಲ್ಲಿಯೇ ಇರುವುದು, ಸದಾ ಹೆದರುವ ಸ್ವಭಾವವುಳ್ಳದ್ದು, ಇಂತಹ ಹಸುಗಳ ಗೋಮಯವು ಭಸ್ಮಕ್ಕೆ ಶ್ರೇಷ್ಠವಲ್ಲ. ॥೯-೧೦॥

ಈ ರೀತಿ ಅವಲಕ್ಷಣಗಳಿಲ್ಲದೆ, ಸುಲಕ್ಷಣವಾಗಿ, ಉಚಿತವಾದ ನಡತೆಯುಳ್ಳ ಹಸುವನ್ನು ಪರೀಕ್ಷಿಸಿ, ಅದರಲ್ಲಿ ಪರಶಿವನೇ ಮೊದಲಾದ ಸಕಲ ದೇವತೆಗಳೂ ನೆಲಸಿರುವರೆಂಬ ಭಾವನೆಯಿಂದ ಅದರ ಗೋಮಯವನ್ನು ಭಸ್ಮಕ್ಕಾಗಿ ಶೇಖರಿಸಿ ಕೊಳ್ಳಬೇಕು. ಹದಿನಾಲ್ಕು ಲೋಕಗಳೂ ಗೋವಿನ ದೇಹದಲ್ಲಿ ಅಡಗಿವೆ. ಆದ್ದರಿಂದ ಗೋವು ಪರಮಪೂಜ್ಯವಾದದ್ದು. ಸದಾಶಿವಸ್ವರೂಪವೆನಿಸಿದುದು. ಜಗದುತ್ಪತ್ತಿ ಗಿಂತಲೂ ಮೊದಲು ಇದ್ದ ವಸ್ತುಗಳಿಗೂ ಮೂಲಕಾರಣನಾದ ಪರಶಿವನು ಹಸುವಿನಲ್ಲಿ ಸದಾ ಪ್ರೀತಿಯಿಂದ ನೆಲಸಿರುವನು. ॥೧೧-೧೨-೧೩॥

ಗಾವೋ ಯಸ್ಯ ಗೃಹೇ ತುಷ್ಟಾ ತಸ್ಯ ತುಷ್ಯಂತಿ ದೇವತಾಃ ।
ಘಾಸದಾನೇನ ಪಿತರಸ್ತೃಪ್ತಾಸ್ಸ್ಯುಃ ಪ್ರಪಿತಾಮಹಾಃ ॥೧೪॥

ಅಲಕ್ಷ್ಮೀಪರಿಹಾರಾಯ ಗಾವಃ ಪೂಜ್ಯಾಃ ಪ್ರಯತ್ನತಃ ।
ಕುಲಮೇಕಂ ದ್ವಿಧಾ ಭಿನ್ನಂ ಬ್ರಾಹ್ಮಣಾನಾಂ ಗವಾಂ ತಥಾ ॥೧೫॥

ಏಕತ್ರ ವೇದಾಸ್ತಿಷ್ಠಂತಿ ಹವಿರನ್ಯತ್ರ ತಿಷ್ಠತಿ ।
ಘೃತಯೋನ್ಯೋ ಕ್ಷೀರಭಾರಾ ಗಾವಃ ಪೂಜ್ಯಾಸ್ಸದೈವ ಹಿ ।
ಗವಾಂ ಪೂಜ್ಯಾ ಪ್ರಭಾವೇನ ಪ್ರೀತಃ ಪಶುಪತಿಸ್ಸದಾ ।
ಗಾವೋ ಹಿ ಧಾತ್ರ್ಯೋ ಭೂತಾನಾಂ ಮಾತರೋ ಲೋಕಪಾವನಾಃ ॥೧೭॥

ಆಗಾವ ಇತಿ ಮಂತ್ರೇಣ ಉಪಸ್ಥೇಯಾಃ ಸದೈವ ಹಿ ।
ಗಾವೋ ಯಜ್ಞಸ್ಯ ಸದನಂ ಮದನಾಂತಕರಪ್ರಿಯಾಃ ॥೧೮॥

ಗೋಭಿಶ್ಚಾಮೃತನಿಷ್ಪತ್ತಿಃ ಪಂಚಾಮೃತವಹಾಸ್ಸದಾ ।
ಗವಾಂ ಕ್ಷೀರಾದ್ದಧಿ ಭವೇದ್ದಧ್ನಾ ಚ ನವನೀತಕಂ ॥೧೯॥

---

ಯಾರ ಮನೆಯಲ್ಲಿ ಹಸುಗಳು ಹುಲ್ಲುನೀರುಗಳಿಂದ ತೃಪ್ತಿಹೊಂದುತ್ತವೆಯೋ, ಆ ಮನೆಯಲ್ಲಿ ಸಕಲ ದೇವತೆಗಳೂ ವಾಸಮಾಡುವರು. ಮತ್ತು ಪಿತೃದೇವತೆಗಳು ಆನಂದದಿಂದ ಅಲ್ಲಿ ನೆಲಸುವರು. ಅಮಂಗಳಪರಿಹಾರಕ್ಕಾಗಿ ಮಾನವರು ಹಸುಗಳನ್ನು ಪೂಜಿಸಲೇಬೇಕು. ಒಂದೇ ಒಂದು ಪವಿತ್ರ ಕುಲವು, ಬ್ರಾಹ್ಮಣ ಮತ್ತು ಹಸು ಈ ಆಕಾರಗಳಿಂದ ಎರಡು ವಿಧವಾಗಿ ಹಬ್ಬಿರುವುದು. ॥೧೪-೧೫॥

ಯಜ್ಞಕ್ಕೆ ಸಾಧಕವಾದ ವೇದವು ಬ್ರಾಹ್ಮಣರಲ್ಲಿಯೂ, ಹವಿಸ್ಸು ಗೋವಿನಲ್ಲಿಯೂ ಇರುವುದು. ಹಾಗೆ ಕ್ಷೀರವನ್ನು ಕೊಡುವಂತಹ ಹಸುಗಳು ಆದರಿಂದಲೇ ಪೂಜ್ಯಗಳೆನಿಸಿವೆ. ಗೋವುಗಳ ವಿಷಯದಲ್ಲಿ ಪಶುಪತಿಯು ವಿಶೇಷವಾದ ಅಭಿಮಾನವನ್ನಿಟ್ಟಿರುವನು. ಲೋಕಕ್ಕೆ ಗೋವುಗಳೇ ತಾಯಿಯಂತೆ. ಜನರಿಗೆ ಪವಿತ್ರವಾದ ತಾಯಿಯೆಂದರೆ ಗೋವೇ. ॥೧೭॥

'ಆಗಾವೋ' ಎಂಬ ಮಂತ್ರದಿಂದ ಸದಾ ಗೋವುಗಳನ್ನು ಪೂಜಿಸಬೇಕು. ಯಜ್ಞಕರ್ಮಕ್ಕೆ ಬೇಕಾದ ಘೃತವು ಗೋವಿನಿಂದಲೇ ಉದಯಿಸುವುದು. ಪಂಚಾಮೃತಗಳೆಂದು ಹೆಸರುಗೊಂಡ, ಹಾಲು, ಮೊಸರು, ಬೆಣ್ಣೆ, ತುಪ್ಪ ಮೊದಲಾದ

ತಸ್ಮಾದ್ಘೃತಸ್ಯ ಚೋತ್ಪತ್ತಿಸ್ತೇನಾಜ್ಯೇನ ದಿವೌಕಸಃ ।
ಹೂಯಂತಿ ಕಿಲ ವೈತಾನೇ ಸತ್ಯಮಾಜ್ಯಮಿತಿ ಶ್ರುತಿಃ ॥೨೦॥

ಋತಂ ಸತ್ಯಂ ಪರಂಬ್ರಹ್ಮಮಹೇಶಂ ಕೃಷ್ಣಪಿಂಗಲಂ ।
ಶಿವೋಽಭಿಷಿಚ್ಯತೇ ಯೇನ ಶಿವಲಿಂಗೇ ಸನಾತನಃ ॥೨೧॥

ಕ್ಷೀರೇಣಾಜ್ಯೇನ ದಧ್ನಾ ಚ ತಾಸಾಂ ತಾಸ್ಸರ್ವಪಾವನಾಃ ।
ತದ್ಗೋಮಯಂ ಮಂಗಲಸ್ಸ್ಯಾತ್ಸದಾಲೇಪನಕರ್ಮಣಿ ॥೨೨॥

ಪ್ರಾತಃ ಪ್ರಾತಃ ಸದಾ ಶುದ್ಧಂ ಪ್ರೋಕ್ಷಿತಂ ಗೋಮಯಾಂಭಸಾ ।
ಗೃಹಂ ಪವಿತ್ರತಾಂ ಯಾತಿ ಯಾಸಾಮಂಗೋದ್ಭವಂ ಹಿತಂ ॥೨೩॥

ಪಾವನಂ ಗೋಮಯಂ ಪ್ರೋಕ್ತಂ ಯಸ್ಮಾದ್ಭಸ್ಮ ಪ್ರಜಾಯತೇ ।
ತಾಃ ಪೂಜ್ಯಾಸ್ಸರ್ವಯತ್ನೇನ ಶಿವಃ ಪ್ರೀತೋಽಭವಿಷ್ಯತಿ ॥೨೪॥

---

ವಸ್ತುಗಳಿಗೆಲ್ಲಾ ಹಸುವೇ ಮೂಲಸ್ಥಾನವು. ಘೃತದಿಂದಲೇ ಯಾಗದಲ್ಲಿ ದೇವತೆಗಳು ತೃಪ್ತಿಹೊಂದುವರು. ಆದ್ದರಿಂದಲೇ ಯಾಗದಲ್ಲಿ ಘೃತವನ್ನು ಸತ್ಯವಸ್ತುವೆಂದು ಶ್ರುತಿಯು ಹೊಗಳುವುದು. ॥೧೮-೧೯-೨೦॥

ಆಜ್ಯವೇ ಮಾನಸಿಕವಾದ ಮತ್ತು ವಾಚಿಕವಾದ ಸತ್ಯವೆಂದೂ, ಅದೇ ಪರಬ್ರಹ್ಮವಸ್ತುವೆಂದೂ, ಕೃಷ್ಣಪಿಂಗಳ ವರ್ಣದ ಮಹೇಶ್ವರಾತ್ಮಕವೆಂದೂ ಪ್ರತಿಪಾದಿಸಲ್ಪಟ್ಟಿದೆ. ಯಾವ ಹಾಲು, ಮೊಸರು, ತುಪ್ಪ ಇವುಗಳಿಂದ ಶಿವಲಿಂಗಕ್ಕೆ ಅಭಿಷೇಕವಾಗುವುದೋ, ಆ ಹಾಲು, ಮೊಸರು, ತುಪ್ಪಗಳು ಪಾವನವಾದವುಗಳು. ಗೋಮಯವೆಂಬುದು ಮಂಗಳಪ್ರದವಾಗಿ, ಶುದ್ಧಿಕರ್ಮದಲ್ಲಿ ಅದು ಅತ್ಯಂತ ಪವಿತ್ರತಮವೆನಿಸಿದುವುಗಳು. ॥೨೧-೨೨॥

ಪ್ರತಿದಿನವೂ ಪ್ರಾತಃಕಾಲ ಹಸುವಿನ ಸಗಣಿನೀರಿನಿಂದ ಮನೆಯನ್ನು ಪ್ರೋಕ್ಷಿಸುತ್ತಿದ್ದರೆ ಆ ಮನೆಯು ಅತಿ ಪವಿತ್ರವೆನಿಸುವುದು. ಗೋವಿನ ದೇಹದಿಂದ ಬಂದು, ಪವಿತ್ರಭಸ್ಮಕ್ಕೆ ಅದು ಸಾಧನವಾದುದರಿಂದ ಅದು ಅತ್ಯಂತ ಪವಿತ್ರವಾದುದೇ ಸರಿ. ಅದು ಪೂಜ್ಯವಸ್ತು. ಆದ್ದರಿಂದಲೇ ಗೋವುಗಳ ತೃಪ್ತಿಯಿಂದ ಪರಶಿವನು ತೃಪ್ತನಾಗುವನು. ॥೨೩-೨೪॥

ಪಶೂನಾಮಧಿಪೋ ಯಸ್ಮಾನ್ಮಹಾದೇವೋ ಮಹೇಶ್ವರಃ ।
ಶೃಂಗಾಂತರೇ ಸದಾ ಭಾತಿ ಲಿಂಗರೂಪೇಣ ಶಂಕರಃ ॥೨೫॥

ಶೃಂಗಾಭ್ಯಾಮಶ್ವಿನೌದೇವೌ ಚಕ್ಷುಷೀ ಚಂದ್ರಭಾಸ್ಕರೌ ।
ಘ್ರಾಣೇ ಚ ನಿಋತಿಶ್ಚೈವ ಮುಖೇ ವೈ ಸರ್ವದೇವತಾಃ ॥೨೬॥

ಕರ್ಣಯೋರ್ವಸವಶ್ಚಾಷ್ಟೌ ಗಲೇ ಸಾಸ್ನಾಸು ಭಾಸ್ಕರಾಃ ।
ಬ್ರಹ್ಮಾ ತತ್ಕಕುದಿಸ್ಥೋಽಪಿ ಪೃಷ್ಠವಂಶೇ ಪುರಂದರಃ ॥೨೭॥

ಪೂರ್ವಪಾದೇ ವಿಶ್ವದೇವಾಃ ವರುಣಃ ಪಾದಸಂಧಿಷು ।
ವಾಯುರಗ್ನಿಶ್ಚ ಜಠರೇ ಮೃತ್ಯುರ್ನಾಭೌ ಚ ಸಂಸ್ಥಿತಃ ॥೨೮॥

ಖುರೇಷು ರುದ್ರಾಸ್ತಿಷ್ಠಂತಿ ಹೃದಯೇ ಚ ಜನಾರ್ದನಃ ।
ಕಮಲಾ ವಿಮಲಾ ನಿತ್ಯಂ ಗೋಪುಚ್ಛೇ ಸಂಸ್ಥಿತಾಮುನೇ ॥೨೯॥

ಗೋಪುಚ್ಛೈರ್ಮಾರ್ಜನಂ ಕುರ್ಯಾದಲಕ್ಷ್ಮೀನಾಶನಾಯ ಹಿ ।
ರೋಮಕೂಪೇಷು ಮುನಯೋ ಮನವೋಽಥ ಚತುರ್ದಶ ॥೩೦॥

---

ಮಹೇಶ್ವರನು ಪಶುಪತಿಯು. ಆದ್ದರಿಂದಲೇ ಅವನು ಲಿಂಗರೂಪದಲ್ಲಿ ಯಾವಾಗಲು ಹಸುವಿನ ಎರಡು ಕೋಡುಗಳ ಮಧ್ಯೆ ಇರುವನು. ಎರಡು ಕೋಡುಗಳಲ್ಲಿ ಅಶ್ವಿನೀದೇವತೆಗಳೂ, ಕಣ್ಣುಗಳಲ್ಲಿ ಚಂದ್ರಸೂರ್ಯರೂ, ಮೂಗಿನಲ್ಲಿ ನಿಋತಿಯೂ, ಬಾಯಿಯಲ್ಲಿ ಅನೇಕ ದೇವತೆಗಳೂ, ಕಿವಿಗಳಲ್ಲಿ ಅಷ್ಟವಸುಗಳೂ, ಕತ್ತಿನಲ್ಲಿ (ಗಂಗೆದೊಗಲು) ದ್ವಾದಶಾದಿತ್ಯರೂ, ಹಿಳಲಿನಲ್ಲಿ ಬ್ರಹ್ಮನೂ, ಬೆನ್ನಿನಲ್ಲಿ ಇಂದ್ರನೂ, ಮುಂಗಾಲುಗಳಲ್ಲಿ ವಿಶ್ವೇದೇವರೂ, ಪಾದಸಂಧಿಯಲ್ಲಿ ವರುಣನೂ, ಜಠರದಲ್ಲಿ ವಾಯು ಅಗ್ನಿಗಳೂ, ನಾಭಿಯಲ್ಲಿ ಮೃತ್ಯುದೇವತೆಯೂ, ಗೊರಸುಗಳಲ್ಲಿ ಏಕಾದಶರುದ್ರರೂ, ಹೃದಯದಲ್ಲಿ ಮಹಾವಿಷ್ಣುವೂ, ಬಾಲದಲ್ಲಿ ಲಕ್ಷ್ಮಿಯೂ ನೆಲಸಿರುವರು. ಆದ್ದರಿಂದಲೇ ಅಮಂಗಳಪರಿಹಾರಕ್ಕಾಗಿ ಗೋಪುಚ್ಛದ ನೀರಿನಿಂದ ಮಾರ್ಜನೆ ಮಾಡಿಕೊಳ್ಳಬೇಕು. ಗೋವುಗಳ ಪ್ರತಿಯೊಂದು ರೋಮಕೂಪದಲ್ಲಿಯೂ, ಮಹಾಮುನಿಗಳೂ, ಚತುರ್ದಶಮನುಗಳೂ, ಸಮಸ್ತ ನಕ್ಷತ್ರಗಳೂ, ಭೂಮ್ಯಂತರಿಕ್ಷಗಳೂ, ದಿಕ್ಕುವಿದಿಕ್ಕುಗಳೂ, ಸಮಸ್ತ ಪಿತೃದೇವತೆಗಳೂ, ಗಂಧರ್ವರೂ ಮತ್ತು ಅಪ್ಸರಸ್ಸುಗಳೂ ತುಂಬಿರುವರು. ॥೨೫-೨೬-೨೭-೨೮-೨೯-೩೦॥

ನಕ್ಷತ್ರಾಣಿ ಚ ಸರ್ವಾಣಿ ಪೃಥಿವೀದ್ಯೌರ್ದಿಶಸ್ತಥಾ ।
ಮಾತರಃ ಪಿತರಶ್ಚೈವ ಗಂಧರ್ವಾಶ್ಚಾಪ್ಸರೋಗಣಾಃ ॥೩೧॥

ಉರಗಾ ಗರುಡಾಃ ಸಿದ್ಧಾಸ್ಸಾಧ್ಯಾಃ ಕಿಂಪುರುಷಾಸ್ತಥಾ ।
ಯಕ್ಷರಕ್ಷಾಂಸಿ ಭೂತಾನಿ ಗವಾಮಂಗೇಷು ಸಂಸ್ಥಿತಾಃ ॥೩೨॥

ತಾಸಾಂ ಗವಾಮಧಿಪತಿರ್ಮಹಾದೇವ ಉಮಾಸಖಃ ।
ತತ್ಪೂಜಯಾ ಪೂಜಿತಸ್ಸ್ಯಾದಧ್ರಿಯಾನಾಂ ಪತಿಃ ಪ್ರಭುಃ ॥೩೩॥

ನಂದಾ ಸುನಂದಾ ಸುರಭಿಃ ಕಾಮಧೇನುಶ್ಚ ಭದ್ರಿಕಾ ।
ಪಂಚೈವ ಗೋಗಣಾಃ ಪೂರ್ವಂ ಸೃಷ್ಟಾ ವೈ ಬ್ರಹ್ಮಣಾ ಪುರಾ ॥೩೪॥

ಶಿವವಿಷ್ಣುಪ್ರಸಾದಾರ್ಥಂ ತತ್ಸುತೋ ವಾಹಿನೀಕೃತಃ ।
ದೇವದೇವೇನ ಧರ್ಮೋಽಪಿ ಯುಗಪಾದೋ ಮಹಾಬಲಃ ॥೩೫॥

ಸರ್ವತೀರ್ಥಕ್ಷೇತ್ರಮಯೋ ಸರ್ವಧರ್ಮಮಯೋ ಮಹಾನ್ ।
ತಪಸಾ ವಾಹನತ್ವಂ ಸ ಸಂಪ್ರಾಪ್ತೋ ದೇವಸ್ಯ ಶೂಲಿನಃ ॥೩೬॥

---

ನಾಗದೇವತೆಗಳು, ಗರುಡರು, ಸಿದ್ಧರು, ಸಾಧ್ಯರು, ಕಿಂಪುರುಷರು, ಯಕ್ಷರು, ರಾಕ್ಷಸರು, ಪಂಚಭೂತಗಳು ಇವರೆಲ್ಲರೂ ಗೋವುಗಳ ಶರೀರದಲ್ಲಿರುವರು. ॥೩೧-೩೨॥

ಸಕಲ ಚರಾಚರವಸ್ತುಗಳಿಗೆ ಒಡೆಯನಾದ ಮತ್ತು ಪಾರ್ವತೀಪತಿಯಾದ ಶಂಕರನು ಸಕಲಗೋವುಗಳಿಗೂ ಅಧಿಪತಿಯು. ಗೋಪೂಜೆಯಿಂದ ಶಂಕರನು ಪೂಜಿತನೆನಿಸುವನು. ಮೊದಲು ಬ್ರಹ್ಮನು ನಂದ, ಸುನಂದ, ಸುರಭಿ, ಕಾಮಧೇನು, ಭದ್ರ ಎಂಬ ಐದು ಹೆಸರಿನ ಗೋವುಗಳನ್ನು ಸೃಷ್ಟಿಮಾಡಿದನು. ಪರಶಿವನ ಪ್ರಸಾದಾಕಾಂಕ್ಷೆಯಿಂದ ಬ್ರಹ್ಮನು, ಗೋಪುತ್ರನಾದ ಧರ್ಮ (ವೃಷಭ)ವನ್ನು ನಾಲ್ಕುಪಾದಗಳುಳ್ಳದ್ದನ್ನಾಗಿಯೂ, ಮಹಾಬಲಿಷ್ಠವಾದದ್ದನ್ನಾಗಿಯೂ ನಿರ್ಮಾಣಮಾಡಿ, ಪರಶಿವನಿಗೆ ವಾಹನವನ್ನಾಗಿ ಸೃಷ್ಟಿಮಾಡಿದನು. ॥೩೩-೩೪-೩೫॥

ಆ ವೃಷಭದಲ್ಲಿ ಸರ್ವತೀರ್ಥ ಮತ್ತು ಸಕಲ ಕ್ಷೇತ್ರಗಳೂ ನೆಲಸಿವೆ. ಸಕಲ ಧರ್ಮವೂ ಅದರಲ್ಲಿದೆ. ಆ ವೃಷಭವು ಬಹುಕಾಲ ತಪಸ್ಸುಮಾಡಿ ಶಿವನಿಗೆ ವಾಹನ

ಕದಾಚಿನ್ಮೇರುನಿಲಯೇ ಸುಖಾಸೀನಂ ಮಹೇಶ್ವರಂ ।
ಮಹಾದೇವ್ಯಾ ಸಮಾಸೀನಂ ಮಾನಸಾಖ್ಯಸರಸ್ತಟೇ ॥೩೭॥

ಊರ್ಧ್ವಗಂ ಚರಂತ್ಯಸ್ತಾ ಗಾವೋ ಪಂಚೈವಾಸನ್ಮದೋದ್ಧತಾಃ ।
ವತ್ಸೈರುತ್ಸಾಹಯುಕ್ತಾ ಸ್ತಾಶ್ಚರಂತ್ಯೋ ವಿಪಿನೇ ತೃಣಂ ॥೩೮॥

ನಂದನೇ ನಂದಿತಾ ಗಾವಃ ಕಪಿಲಾಸ್ವರ್ಣಸನ್ನಿಭಾಃ ।
ಬಾಲಭಾಸ್ಕರವರ್ಣಾಭಾ ವೃತ್ತಪುಷ್ಟತನೂಭರಾಃ ॥೩೯॥

ಮೇರು ಮೂಲೇ ಸ್ಥಿತಂ ಶಂಭುಂ ಅಜಾನಂತೋ ಯಥೇಚ್ಛಯಾ ।
ರೋಮಂಥಸ್ರಾವಸಲಿಲೈರಭ್ಯಷಿಂಚುಸ್ತದಾ ಮುನೇ ॥೪೦॥

ಗವಾಂ ಮುಖೋದ್ಗತಂ ವಾರಿ ಶಂಗಸ್ಯಾಂಗೇ ನಿಪಾತಿತಂ ।
ಕಿಂಚಿತ್ಕ್ರುದ್ಧೇಕ್ಷಣೋಕ್ಷೀಷ್ಟ ಗಾವಸ್ತಾ ಲೋಕಮಾತರಃ ॥೪೧॥

ಶಿವಕ್ರೋಧಾಗ್ನಿ ನಿರ್ದಗ್ಧಾ ನಾನಾವರ್ಣಾನಿ ಭೇಜಿರೇ ।
ಬ್ರಹ್ಮಣಾ ಸಾಂತ್ವಿತಾ ಗಾವೋ ಮೇರುಮೌಲಿಂ ಸಮಾಗತಾಃ ॥೪೨॥

---

ವಾಯಿತು. ಒಂದುಸಾರಿ ಮಹಾದೇವನು ಪಾರ್ವತಿಯೊಡನೆ ಮೇರುಪರ್ವತದ ಮಾನಸಸರೋವರದ ದಡದಲ್ಲಿ ಸಂತೋಷದಿಂದ ಕುಳಿತಿದ್ದನು. ||೩೬-೩೭||

ಆಗ ಬ್ರಹ್ಮಸೃಷ್ಟವಾದ ನಂದಾದಿ ಐದು ಗೋವುಗಳೂ, ಕರುಗಳಿಂದ ಕೂಡಿ ಸಂತೋಷದಿಂದ ಅದೇ ನಂದನವನದಲ್ಲಿ ಹುಲ್ಲನ್ನು ಹುಡುಕಿ ತಿನ್ನುತ್ತಾ ಸಂಚರಿಸುತ್ತಿದ್ದುವು. ಆ ಹಸುಗಳು ಕಪಿಲವರ್ಣದವುಗಳೂ, ಸುವರ್ಣದಂತೆ ಪ್ರಕಾಶಿಸುವುಗಳೂ ಆಗಿದ್ದುವು. ಎಳೆಬಿಸಿಲಿನಂತೆ ಹೊಳೆಯುತ್ತಾ, ತುಂಬಿಕೊಂಡಿದ್ದ ಶರೀರದಿಂದ ನಲಿಯುತ್ತಾ, ಶಂಕರನು ಪಾರ್ವತಿಯೊಡನೆ ಕುಳಿತಿರುವುದನ್ನು ತಿಳಿದು, ತಮ್ಮ ಮೆಲುಕುಹಾಕುವಾಗ ಬರುವ ಬಾಯಿಜೊಲ್ಲಿನಿಂದ ಶಿವನಮೇಲೆ ಅಭಿಷೇಕಮಾಡುತ್ತಿದ್ದುವು. ||೩೮-೩೯-೪೦||

ಹೀಗೆ ಹಸುಗಳ ಬಾಯಿಂದ ಬಂದ ಜೊಲ್ಲು ತನ್ನ ಮೇಲೆ ಬೀಳುತ್ತಿರುವುದನ್ನು ಕಂಡು ಶಂಕರನು ಸ್ವಲ್ಪ ಕೋಪಹೊಂದಿ, ತನ್ನ ಉರಿಗಣ್ಣಿನಿಂದ ಆ ಹಸುಗಳನ್ನು ನೋಡಿದನು. ಆ ಕೋಪಾಗ್ನಿಯ ವೇಗದಿಂದಲೇ ಹಸುಗಳು ನಾನಾ

ಶಿವೇನ ಶಪ್ತಾ ಗಾವಸ್ತಾ ಮುಖೇ ಯೂಯಂ ಭವಿಷ್ಯಥ ।
ಅಪವಿತ್ರತರಾಸ್ಸರ್ವೇ ಜಿಘ್ರಂತ್ಯೋ ಯಚ್ಚ ಕಿಂಚನ ॥೪೩॥

ಅಪವಿತ್ರತರಂ ಭೂಯಾದಿತಿ ಶಪ್ತಾ ಗವಾಂಗಣಾಃ ।
ಸ್ವೋಧೋಭರಕ್ಷರಕ್ಷೀರಾ ಅಭ್ಯಷಿಂಚನ್ಮಹೇಶ್ವರಂ ॥೪೪॥

ಶತಂ ವರ್ಷಾಣಿ ತಾ ಗಾವೋ ರುದ್ರಸೂಕ್ತೇನ ಶಂಕರಂ ।
ಕ್ಷೀರಾಭಿಷೇಕತುಷ್ಟೋಽಸೌ ವರೇಣ ಛಂದಯಚ್ಚ ತಾಃ ॥೪೫॥

॥ ಶ್ರೀ ಈಶ್ವರ ಉವಾಚ ॥

ಹೇ ಗಾವಃ ಪರಮಾ ತುಷ್ಟಿಃ ಕ್ಷೀರವೃಷ್ಟ್ಯಾನಿಶಂ ಮಯಿ ।
ವರಯಂತು ವರಂ ತ್ವದ್ಯ ಸದ್ಯೋ ವೋ ದದ್ಮಿ ವಾಂಛಿತಂ ॥೪೬॥

ಇತ್ಯುಕ್ತಾಃ ಶಂಕರೇಣೈವ ಗಾವಸ್ಸಂತುಷ್ಟುವುರ್ಹರಂ ॥೪೭॥

---

ಬಣ್ಣಕ್ಕೆ ತಿರುಗಿಬಿಟ್ಟವು. ಆಗ ಬ್ರಹ್ಮನು ಬಂದು ಸಮಾಧಾನಮಾಡಿ ಆ ಹಸುಗಳನ್ನು ಮೇರುಶಿಖರಕ್ಕೆ ಕರೆದುಕೊಂಡು ಹೋದನು. ॥೪೧-೪೨॥

ಆದರೂ ಶಂಕರನು ಹಸುಗಳಿಗೆ, "ಎಲೈ ಗೋವುಗಳೇ, ನಿಮ್ಮ ಬಾಯಿಯು ಅಪವಿತ್ರಭಾಗವೆನಿಸಲಿ. ನೀವು ಮೂಸಿನೋಡಿದ ಪದಾರ್ಥಗಳು ದೂಷ್ಯವಾಗಲಿ" ಎಂದು ಶಾಪವಿತ್ತನು. ಅದನ್ನು ಕೇಳಿ ಹಸುಗಳು ದುಃಖಗೊಂಡು ತಮ್ಮ ಕೆಚ್ಚಲಿನಿಂದ ಬರುವ ಕ್ಷೀರದಿಂದ ನೂರುವರ್ಷಪರ್ಯಂತ ರುದ್ರಸೂಕ್ತಪಠನಪೂರ್ವಕವಾಗಿ ಶಿವಲಿಂಗಕ್ಕೆ ಅಭಿಷೇಕಮಾಡಿದುವು. ಆದರಿಂದ ತೃಪ್ತನಾದ ಶಂಕರನು ಆ ಹಸುಗಳಿಗೆ ಆನಂತರ ಹೀಗೆ ಆಶ್ವಾಸನವಿತ್ತನು. ॥೪೩-೪೪-೪೫॥

"ಹಸುಗಳೇ, ನೀವು ಮಾಡಿದ ಕ್ಷೀರಧಾರಾಭಿಷೇಕದಿಂದ ನಾನು ತೃಪ್ತನಾಗಿರುವೆನು. ನಿಮಗೆ ಬೇಕಾದ ವರವನ್ನು ಕೇಳಿಕೊಳ್ಳಿರಿ. ಈಗಲೇ ಅನುಗ್ರಹಿಸುವೆನು" ಎಂದು ಹೇಳಿದ ಪರಶಿವನನ್ನು ನೋಡಿ, ಆ ಹಸುಗಳು ಸಂತೋಷದಿಂದ ಉಬ್ಬಿ ಈ ರೀತಿ ಪರಶಿವನನ್ನು ಸ್ತುತಿಸಿದವು. ॥೪೬-೪೭॥

॥ ಗಾವ ಊಚುಃ ॥

ಶಂಭೋ ಚಾರುಶಶಾಂಕಶೇಖರಲಸದ್ಗಂಗಾತರಂಗೋಜ್ಜ್ವಲ
ನ್ಮೌಲೇ ಲಾಲಿತಶಂಬರಾರ್ಭಕಧರ ಧ್ವಸ್ತೋರುನಾಗಾಜಿನ ।
ಪಾಹೀಶಾನ ದಯಾನಿಧಾನ ಭಗವನ್ ಏನೋಮಹನ್ನಃ ಕೃತಂ
ವಾರಂ ವಾರಮುಪಾಕುರುಷ್ವ ದಯಯಾ ಶೀಘ್ರಂ ಪಶೂನಾಂ ಪತೇ ॥೪೮॥

ಹೇ ಭರ್ಗ ತ್ರಿಪುರಾಂಧಕಾಂತಕ ಮಹಾದೇವಾದ್ಯಗಂಗಾಧರ
ಭೂತೇಶಾಖಿಲಪಾವನಾಮಿತಬಲಾಲ್ಲೋಲತ್ರಿಶೂಲೀಕರ ।
ರಕ್ಷಾಸ್ಮಾಂಛರಣಾಗತಾನ್ ಕರುಣಯಾ ಗಾವೋ ವಯಂ ಗೋಪತೇ
ಸಂವೀಕ್ಷ್ಯಾದ್ಯ ದಶಾ ದಶಾಂಶಕರುಣಾಕೋಟೀ ಕಟಾಕ್ಷೇಣ ಚ ॥೪೯॥

ಪುತ್ರೋ ನೋಽಸ್ತು ಭವ ಭವೋದ್ಭವಮಹಾಧರ್ಮಾಕೃತಿರ್ವಾಹನಂ
ದೇವಸ್ತ್ವಂ ಪಶುಪೋಽಸಿ ಪಾಹಿ ಸುದೃಶಾ ಕಾರುಣ್ಯವಾರಾಂನಿಧೇ ।
ನೋದದ್ಯಾಂ ವರಮೀದೃಶಂ ತವ ದೃಶಾ ಚಾಶಾವಸಾನಪ್ರಭೋ
ಹೇರಂಬಾದಪಿ ಸುಪ್ರಿಯೋಽಸ್ತು ಭವತೇ ಧರ್ಮಃಸುತೋ ನೋದ್ಯ ಹಿ॥೫೦॥

---

ಸುಂದರವಾದ ಚಂದ್ರಕಲೆಯನ್ನೂ, ದೇವಗಂಗಾ ತರಂಗಗಳನ್ನೂ ಮೌಳಿಯಲ್ಲಿ ಧರಿಸಿರುವ ಮಹಾತ್ಮನೇ, ಹರಿಣಾಂಕನಾದ ಚಂದ್ರನನ್ನು ಶಿರದಲ್ಲಿ ಕಟ್ಟಿ, ಗಜಾಸುರನ ಚರ್ಮವನ್ನು ವಸ್ತ್ರದಂತೆ ಧರಿಸಿದೆಯಲ್ಲವೆ? ದಯಾಶಾಲಿಯೇ, ಪಶುಪತಿಯೇ, ನಮ್ಮಿಂದ ಆಚರಿಸಲ್ಪಟ್ಟ ಮಹಾಪರಾಧವನ್ನು ಕ್ಷಮಿಸಿ ನಮ್ಮನ್ನು ಸದಾ ರಕ್ಷಿಸುತ್ತಿರು. ॥೪೮॥

ಭಕ್ತರನ್ನು ರಕ್ಷಿಸುವ, ತ್ರಿಪುರಾಸುರರು, ಅಂಧಕಾಸುರ, ಯಮ ಮೊದಲಾದವರನ್ನು ಶಿಕ್ಷಿಸುವ ಮಹಾದೇವನೇ, ಗಂಗಾಧರನೇ, ಸಮಸ್ತಭೂತಗಳಿಗೂ, ಪವಿತ್ರತಮವಸ್ತುಗಳಿಗೂ ಸ್ವಾಮಿಯೆನಿಸಿದವನೇ, ತ್ರಿಶೂಲಧಾರಿಯೇ, ಕೇವಲ ಅಜ್ಞಾನಿಗಳಾಗಿ ಪಶುಗಳೆಂದು ಹೆಸರು ಪಡೆದಿರುವ ನಮ್ಮನ್ನು ದಯೆಯಿಂದ ಕಾಪಾಡು. ನಮ್ಮ ಕಷ್ಟಸ್ಥಿತಿಯನ್ನು ನೋಡಿ, ನಿನ್ನ ಕೃಪಾಕಟಾಕ್ಷಲೇಶದಿಂದ ನಮ್ಮನ್ನು ಈ ರೀತಿ ಉದ್ಧರಿಸಿದೆಯಲ್ಲವೆ! ॥೪೯॥

ಮಹಾದೇವನೇ, ನಮ್ಮ ಪುತ್ರನು ಧರ್ಮಸ್ವರೂಪನಾಗಿ ಜನಿಸಿ ಅವನೇ ನಿನಗೆ ಯಾವಾಗಲೂ ವಾಹನವಾಗಿರುವಂತೆ ಅನುಗ್ರಹಿಸು. ಸ್ವಾಮಿಯೇ, ನೀನು

॥ ಶ್ರೀ ಸ್ಕಂದ ಉವಾಚ ॥

ಗಾವಸ್ತಾಃ ಪ್ರತಿನಂದ್ಯ ನಂದಿತದೃಶಾ ವೃಂದಾರವೃಂದೈರ್ನತಃ
ಸಾನಂದಂ ಶಶಿಕುಂದಸುಂದರಜಟಾಭಾರಾಂಕಮೌಲಿಃ ಶಿವಃ ।
ಧರ್ಮಂ ಚಾಪಿ ಸ ವಾಹನೇ ಚ ಕಲಯನ್ನೇವಂ ಚ ಗಾವೋಽಪಿ ತಾಃ
ಪ್ರೀತೇಶೇನ ತದಾ ಮುದಾ ತ್ವಭಿನುತಾ ವತ್ಸಾ ಗಮಿಷ್ಯಂತ್ವಿತಿ ॥೫೧॥

ಯೂಯಂ ಯಾತ ನಿಜಾಲಯಂ ಪ್ರತಿ ಸದಾ ನೈವಾದ್ಯ ನುಂತು ಹೃದಿ ।
ವಃ ಕ್ಷೀರೋತ್ತಮಸೇಚನೇನ ಸುಹೃದಾ ನೋದಾಮಿ ತುಷ್ಯಾಮಿ ಚ ॥೫೨॥

ಸ ಮಾಂ ಸಮೀನಸ್ತುತಿತೋಷಿತೋ ಹರ
ಸ್ತದಾ ಸಮೀಚೀನದೃಶಾ ವಿಲೋಕ್ಯ ।
ತ್ರಿಲೋಚನಃ ಪ್ರೀತಿಯುತೋ ಬಭೂವ
ಸ್ಮೇರಾನನಃ ಪುಂಗವರಾಜವಾಹನಃ ॥೫೩॥

---

ನಮ್ಮಂತಹ ಪಶುಗಳನ್ನು ಸಂರಕ್ಷಿಸುವನಲ್ಲವೆ? ಇಂತಹ ವರವನ್ನು ಕೊಡುವುದೂ ಅಲ್ಲದೆ ನಮ್ಮ ಪುತ್ರನಾದ ವೃಷಭನನ್ನು ನೀನು ನಿನ್ನ ಪುತ್ರನಾದ ಗಣಪತಿಗಿಂತಲೂ ಹೆಚ್ಚಾಗಿ ಪ್ರೀತಿಸುತ್ತಿರಬೇಕು. ಇದೇ ನಾವು ನಿನ್ನಿಂದ ಪ್ರಾರ್ಥಿಸುವ ವರ." ॥೫೦॥

ಹೀಗೆ ಪ್ರಾರ್ಥಿಸಿದ ಗೋಗಣವನ್ನು ನೋಡಿ ಮಹೇಶ್ವರನು ದಯಾಕಟಾಕ್ಷವನ್ನು ಬೀರುತ್ತಾ, ಚಂದ್ರಪ್ರಭೆಯಿಂದ ಕೋಲು ಮಲ್ಲಿಗೆಯಂತೆ ಶುಭ್ರವಾಗಿ ಹೊಳೆಯುತ್ತಿರುವ ಜಟಾಭಾರದಿಂದ ರಂಜಿಸುತ್ತಾ, ಸ್ವಯಂ ಆನಂದಮಯನಾಗಿ, ಆ ಗೋವುಗಳ ಪ್ರಾರ್ಥನೆಯಂತೆ ಧರ್ಮರೂಪಿಯಾದ ವೃಷಭವನ್ನು ವಾಹನವನ್ನಾಗಿ ಒಪ್ಪಿಕೊಂಡು ಪ್ರೀತಿಯಿಂದ ಇನ್ನು ನೀವು ಹೋಗಿಬನ್ನಿರಿ ಎಂದು ಆಶ್ವಾಸನವಿತ್ತು ಬೀಳ್ಕೊಟ್ಟನು. ॥೫೧॥

ಗೋವುಗಳೇ, ನೀವು ಯಾವ ಸಂಶಯವನ್ನೂ ಹೊಂದದೆ ನಿಮ್ಮ ನಿವಾಸಕ್ಕೆ ಹೋಗಿರಿ. ನಿಮ್ಮ ಕ್ಷೀರಾಭಿಷೇಕದಿಂದಲೂ, ಪ್ರೀತಿಯುಕ್ತವಾದ ಮನೋಭಾವದಿಂದಲೂ ನಾನು ತೃಪ್ತನಾಗಿರುವೆನು. ಎಂದು ಗೋಸ್ತುತಿಗೆ ಪದೇ ಪದೇ ಸಂತೋಷವನ್ನು ಸೂಚಿಸುತ್ತಾ, ತ್ರಿಲೋಚನನೆನಿಸಿದ ಚಂದ್ರಶೇಖರನು ನಗುಮುಖದಿಂದ ಅವುಗಳನ್ನು ಕಳುಹಿಸಿಕೊಟ್ಟನು. ॥೫೨-೫೩॥

॥ ಶ್ರೀ ಈಶ್ವರ ಉವಾಚ ॥

ಯಃ ಕ್ಷೀರೋತ್ತಮಸೇಚನಂ ಪ್ರತಿದಿನಂ ಕುರ್ಯಾದ್ಧಿ ಲಿಂಗೋತ್ತಮೇ
ತಸ್ಯಾಹಂ ವಿತರಾಮಿ ಭಾಗ್ಯಮನಿಶಂ ಕೈವಲ್ಯವಲ್ಲೀಮಪಿ ।
ತಸ್ಯಾಪಾರಮಹಾಪರಾಧಶತಕಂ ಸೇಹೇಹಮೇವಾದರಾ
ದ್ಯೂಯಂ ಗಚ್ಛತ ನಂದನೋತ್ತಮವನೇ ತುಷ್ಟ್ಯಾಶ್ಚರಂತು ದ್ರುತಂ ॥೩೪॥

ಇತ್ಯುಕ್ತಾತ್ಶಶಿಶೇಖರೇಣ ಪಶುಪೇನಾಮಂತ್ರಿತಾಯಂತ್ರಿತಾಃ
ನತ್ವಾ ಶಂಭುಪದಾಂಬುಜಂ ಪ್ರತಿ ಯಯುರ್ಗಾವೋಹಿ ಹೃಷ್ಟಾ ಮುನೇ ।
ತಸ್ಮಾದ್ಗೋಪತಿರೇವ ಶಂಕರ ಇತಿ ಶ್ರುತ್ಯಾ ಪರಂ ಗೀಯತೇ
ತಂ ನತ್ವಾ ಶರಣಾಯ ಮುಕ್ತಿಪರಮಾನಂದೈಕಧಾಮ್ನಿ ಸ್ಥಿತಃ ॥೩೫॥

ಇತಿ ಶ್ರೀ ಶಿವರಹಸ್ಯೇ ಈಶ್ವರಾಖ್ಯೇ ದಶಮಾಂಶೇ ಗೋಮಹಿಮಾ
ಗೋಶಾಪಗೋವರಪ್ರದಾನ ವರ್ಣನಂ ನಾಮ ಚತುರ್ಥೋಽಧ್ಯಾಯಃ

---

ಕೊನೆಯದಾಗಿ ಶಂಕರನು ಹೀಗೆ ಅಭಿಪ್ರಾಯ ಸೂಚಿಸಿದನು. ಲೋಕದಲ್ಲಿ ಯಾರು ನಿತ್ಯವೂ ಹಸುವಿನ ಕ್ಷೀರಾಭಿಷೇಕದಿಂದ ಶಿವಲಿಂಗವನ್ನು ಪೂಜಿಸುವರೋ ಅವರಿಗೆ ಸಕಲ ಭಾಗ್ಯಗಳನ್ನೂ ಕೊಟ್ಟು ಕೊನೆಗೆ ಶಾಶ್ವತವಾದ ಮೋಕ್ಷವನ್ನೂ ಕರುಣಿಸುವೆನು. ಅದೂ ಅಲ್ಲದೆ ಅವರು ಮಾಡಿದ ಮಹಾಶತಾಪರಾಧಗಳನ್ನೂ ಕ್ಷಮಿಸುವೆನು. ಎಲೈ ಗೋವುಗಳೇ, ನೀವು ಈಗ ನಿರ್ಭಯವಾಗಿ ನಂದನವನ ಗಳಿಗೆ ಹೋಗಿ ಸಂತೋಷದಿಂದ ಸಂಚರಿಸಿರಿ. ॥೩೪॥

ಹೀಗೆ ಶಂಕರನಿಂದ ವರ ಪಡೆದು ಉಪಚರಿಸಲ್ಪಟ್ಟ ಗೋವುಗಳು ಸಂತೋಷ ದಿಂದ ಶಂಕರನ ಪಾದಪದ್ಮಗಳನ್ನೇ ಭಜಿಸುತ್ತಾ ಸ್ವಸ್ಥಳಗಳಿಗೆ ಹಿಂದಿರುಗಿದುವು. ಆದರಿಂದಲೇ ಶ್ರುತಿಯು ಪರಶಿವನನ್ನು ಗೋಪತಿಯೆಂದು ಸಾರುತ್ತಿರುವುದು. ಜೈಗೀಷವ್ಯಾದಿಗಳೇ, ಇಂತಹ ಮಹಾದೇವನನ್ನು ಶರಣುಹೊಕ್ಕು ಪರಮಾನಂದ ರೂಪವಾದ ಮುಕ್ತಿಸ್ಥಾನದಲ್ಲಿ ನಿಲ್ಲಿರಿ, ಎಂದು ಕುಮಾರಸ್ವಾಮಿಯು ಜೈಗೀಷವ್ಯಾದಿ ಗಳಿಗೆ ತಿಳಿಸಿದನು. ॥೩೫॥

ಇಲ್ಲಿಗೆ ಶ್ರೀ ಶಿವರಹಸ್ಯದ ದಶಮಾಂಶದಲ್ಲಿ ಗೋಮಹಿಮಾ, ಗೋಶಾಪ, ಗೋವರ ಇವುಗಳನ್ನು ತಿಳಿಸುವ ನಾಲ್ಕನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

॥ ಶ್ರೀ ಶಿವಾಯನಮಃ ॥

# ಅಥ ಶ್ರೀಶಿವರಹಸ್ಯೇ

## ಈಶಾನಾಖ್ಯೇ

## ದಶಮಾಂಶಪೂರ್ವಾರ್ಧೇ

## ಪಂಚಮೋಽಧ್ಯಾಯಃ

॥ ಶ್ರೀ ಸ್ಕಂದ ಉವಾಚ ॥

ಶ್ರೀಫಾಲಲೋಚನೇನೈವ ಬೃಹಜ್ಜಾಬಾಲಸಂಭವಂ ।
ಭಸ್ಮ ಚೋಕ್ತಂ ವಿಮುಕ್ತ್ಯೈರ್ಹಿ ಜನಾನ್ ಜನ್ಮವತೋಮುನೇ ॥೧॥

ಶೃಣುಷ್ವ ಸಾವಧಾನೇನ ತ್ವಮೇಕಾಗ್ರೇಣ ಚೇತಸಾ ।
ಸದ್ಯೋಜಾತೋದ್ಭವಾದ್ವಕ್ತ್ರಾತ್ಪೃಥಿವೀ ಸಮಜಾಯತ ॥೨॥

ಮಹೇಶಸ್ಯಾದಿಸೃಷ್ಟೌ ಹಿ ಜಾಬಾಲಶ್ರುತಿಚೋದಿತಾ ।
ಪೃಥಿವೀ ರೂಪಿಣೀ ಯಾ ಸಾ ಗೌರ್ಜಜ್ಞೇ ಕಪಿಲಾಖ್ಯಯಾ ॥೩॥

---

## ಐದನೆಯ ಅಧ್ಯಾಯ.

ಜೈಗೀಷವ್ಯನೇ, ಈಗ ಬೃಹಜ್ಜಾಬಾಲೋಪನಿಷತ್ತಿನಲ್ಲಿ ಹೇಳಿರುವ ಭಸ್ಮೋತ್ಪತ್ತಿಕ್ರಮವನ್ನು ನಿನಗೆ ವಿವರಿಸಿ ಹೇಳುವೆನು ಕೇಳು. ಭಸ್ಮವು ಜನನಮರಣಾದಿಗಳಲ್ಲಿ ಸಿಕ್ಕಿ ಕೊಳಲುವ ಜನರಿಗೆ ಮುಕ್ತಿಯನ್ನುಂಟುಮಾಡುವುದಕ್ಕಾಗಿಯೇ ಪರಶಿವನಿಂದ ಸೃಷ್ಟವಾಗಿದೆ. ॥೧-೨॥

ಮಹರ್ಷಿಯೇ, ಈಗ ನಾನು ಹೇಳಲಿರುವ ವಿಷಯವನ್ನು ಏಕಾಗ್ರಚಿತ್ತದಿಂದ ಕೇಳು. ಮಹೇಶ್ವರನ ಮೊದಲನೆಯ ಮುಖವಾದ ಸದ್ಯೋಜಾತದಿಂದ ಪೃಥಿವಿಯು ಉತ್ಪನ್ನವಾಯಿತು. ಆದೇ ಪೃಥಿವಿಯು ಕಪಿಲವರ್ಣದ ನಂದಾ

ನಂದಾ ಸಾ ನಾಮತೋ ವಿಪ್ರ ತಸ್ಯಾಂ ಭೂತಿರ್ಬಭೂವ ಹ ।
ವಾಮದೇವಮುಖಾಚ್ಛಂಭೋರ್ವಾರ್ಯಗ್ರೇ ಸಮಜಾಯತ ॥೪॥

ಕೃಷ್ಣವರ್ಣಾ ತತೋ ಭದ್ರಾ ತಸ್ಯಾಂ ವೈ ಭಸಿತಂ ಸಿತಂ ।
ಅಖ್ಯಾತಂ ಮುನಿಶಾರ್ದೂಲ ಶೂಲಪಾಣಿಪ್ರಸಾದಕೃತ್ ॥೫॥

ಅಘೋರವಕ್ತ್ರಾದಭವಲ್ಲೇಲಿಹಾನೋಜ್ಜ್ವಲತ್ಪ್ರಭಃ ।
ವಹ್ನಿರಹ್ನಾಯ ಜಗತಾಂ ಮಧ್ಯಾಹ್ನಾರ್ಕಶತೋಪಮಃ ॥೬॥

ರಕ್ತಾ ಚ ರಕ್ತವರ್ಣಾ ಚ ಸುರಭಿಸ್ಸಮಜಾಯತ ।
ತಸ್ಯಾಂ ಹಿ ಭಸ್ಮ ಸಂಜಾತಂ ಭಾಸನಂ ಪಾವನಂ ಪರಂ ॥೭॥

ತತ್ಪುರುಷಮುಖಾದ್ವಾಯುಃ ಸರ್ವಾಯುಃಕಾರಣೋ ಮಹಾನ್ ।
ತಸ್ಮಾಚ್ಛ್ವೇತಾಭವದ್ವರ್ಣಾ ಸುಶೀಲಾ ಗೌಃ ಪಯಸ್ವಿನೀ ॥೮॥

ತಸ್ಮಾತ್ಕ್ಷಾರಂ ಸಮುತ್ಪನ್ನಂ ಕ್ಷರತ್ಪಾಪಕುಲಂ ಮುನೇ ।
ಈಶಾನವಕ್ತ್ರಾದಾಕಾಶೋ ವ್ಯೋಮಕೇಶಾದ್ಬಭೂವ ಹ ॥೯॥

---

ನಾಮಕವಾದ ಗೋರೂಪದಿಂದ ಉದ್ಭವಿಸಿತು. ಆದರಿಂದಲೇ ಐಶ್ವರ್ಯಪ್ರದವಾದ ವಿಭೂತಿಯುಂಟಾಯಿತು. ಎರಡನೆಯದಾದ ವಾಮದೇವಮುಖದಿಂದ ಜಲವುದ್ಭವಿಸಿತು. ||೩-೪||

ಆದರಿಂದ ಕಪ್ಪುಬಣ್ಣದ ಭದ್ರಾನಾಮಕವಾದ ಗೋವು ಜನಿಸಿತು. ಬಿಳಿಯದಾದ ಭಸ್ಮವು ಆ ಹಸುವಿನಿಂದ ಸಂಜನಿಸಿತು. ಅದೂ ಶಿವಾನುಗ್ರಹವನ್ನುಂಟುಮಾಡತಕ್ಕುದೇ. ಮೂರನೆಯದಾದ ಅಘೋರವಕ್ತ್ರದಿಂದ ಜ್ವಲಿಸುವ ಮತ್ತು ವಿಶೇಷಪ್ರಭೆಯುಳ್ಳ ಅಗ್ನಿಯು, ನೂರು ಸೂರ್ಯತೇಜಸ್ಸಿಗೆ ಸಮನಾಗಿ ಉದಯಿಸಿತು. ಅಲ್ಲಿಂದಲೇ ರಕ್ತವರ್ಣದ ರಕ್ತಾನಾಮಕವಾದ ಸುರಭಿಯು ಪ್ರಕಾಶಿಸಿತು. ಆದರಿಂದಲೂ ಪವಿತ್ರತಮವೂ ಮುಕ್ತಿಪ್ರದವೂ ಆದ ಭಸ್ಮವು ಗೋಚರಿಸಿತು. ||೫-೬-೭||

ಲೋಕದಲ್ಲಿರುವ ಸಮಸ್ತ ಪ್ರಾಣಿಗಳಿಗೂ ಜೀವನಾಧಾರವೆನಿಸಿದ ವಾಯುವು ತತ್ಪುರುಷಮುಖದಿಂದ ಉದ್ಭವಿಸಿತು. ಆದರಿಂದ ಬಿಳಿಯ ಬಣ್ಣದ ಸುಶೀಲಾ ನಾಮಕವಾದ ಗೋವು ಹುಟ್ಟಿತು. ಆ ಹಸುವಿನ ಗೋಮಯದಿಂದ, ಸಮಸ್ತ ಪಾಪವನ್ನೂ ನಾಶಗೊಳಿಸುವ ಕ್ಷಾರನಾಮಕವಾದ ಭಸ್ಮವು ಉಂಟಾಯಿತು. ಈಶಾನ

ತಸ್ಮಾಚ್ಚ ಚಿತ್ರವರ್ಣಾಭೂತ್ಸುಮನಾ ಸಾ ಪಯಸ್ವಿನೀ ।
ತದ್ಗೋಮಯೋತ್ಥಾ ರಕ್ಷಾ ಭೂತ್ಸಾಕ್ಷಾತ್ತ್ರ್ಯಕ್ಷಪ್ರಸಾದಕೃತ್ ॥೧೦॥

ವಿದ್ಯಾಶಾಂತಿಪ್ರತಿಷ್ಠಾ ಚ ಶಾಂತ್ಯತೀತಾ ಮನೋನ್ಮನೀ ।
ಕಲಾ ಪಂಚಸಮುತ್ಪನ್ನಾ ಕ್ರಮೋಯಂ ಶಂಕರಾಜ್ಞಯಾ ॥೧೧॥

ವಿಭೂತಿರ್ಭಸಿತಂ ಭಸ್ಮಕ್ಷಾರಂ ರಕ್ಷೇತಿ ವೈ ಮುನೇ ।
ಭವಂತಿ ಪಂಚನಾಮಾನಿ ಪಂಚವಕ್ತ್ರೋದ್ಭವಾನಿ ಹಿ ॥೧೨॥

ಐಶ್ವರ್ಯಕಾರಣಾದ್ಭೂತಿರ್ಭಸ್ಮ ಸರ್ವಾಘಭಕ್ಷಣಾತ್ ।
ಭಾಸನಾದ್ಭಸಿತಂ ಪ್ರೋಕ್ತಂ ಕ್ಷಾರಣಾತ್ಕ್ಷಾರಮಾಪದಾಂ ॥೧೩॥

ಸಂಸಾರಭಯಭೀತಾನಾಂ ರಕ್ಷಾ ಸಂರಕ್ಷಣಾನ್ಮುನೇ ।
ಅಗ್ನೀಷೋಮಾತ್ಮಕಂ ಭಸ್ಮಸಂಪ್ರೋಕ್ತಂ ಮುನಿಸತ್ತಮ ॥೧೪॥

---

ನಾಮಕವಾದ ಮುಖದಿಂದ ಆಕಾಶವು ಉದಯಿಸಿತು. ಅದರಲ್ಲಿ ಚಿತ್ರವರ್ಣದ ಸುಮನಾ ಎಂಬ ಹೆಸರಿನ ಧೇನುವು ಉಂಟಾಯಿತು. ಅದರ ಗೋಮಯದಿಂದ ಶಿವಪ್ರಸಾದವನ್ನು ಕೊಡುವ ರಕ್ಷಾನಾಮಕವಾದ ವಿಭೂತಿಯುದಯಿಸಿತು. ॥೮-೯-೧೦॥

ಇದೇರೀತಿ, ವಿದ್ಯಾ, ಶಾಂತಿ, ಪ್ರತಿಷ್ಠಾ, ಶಾಂತ್ಯತೀತಾ, ಮನೋನ್ಮನೀ ಎಂಬ ಐದುಕಲೆಗಳೂ ಶಂಕರನ ಐದುಮುಖಗಳಿಂದ ಉತ್ಪನ್ನವಾದವು. ಹಾಗೆಯೇ ವಿಭೂತಿ, ಭಸಿತ, ಭಸ್ಮ, ಕ್ಷಾರ, ರಕ್ಷಾ ಎಂಬ ಐದು ಹೆಸರಿನ ಭಸ್ಮಗಳು ಶಂಕರನ ಐದುಮುಖಗಳಿಂದ ಸಂಜನಿಸಿದುವು. ॥೧೧-೧೨॥

ಐಶ್ವರ್ಯಪ್ರದವಾದ್ದರಿಂದ ಭಸ್ಮಕ್ಕೆ ಭೂತಿಯೆಂದೂ, ಪಾಪನಾಶಕವಾದ್ದರಿಂದ ಭಸ್ಮವೆಂದೂ, ಪ್ರಕಾಶಮಾನವಾದ ವಸ್ತುವಾದ್ದರಿಂದ ಭಸಿತವೆಂದೂ, ಕಷ್ಟನಿವಾರಕವಾಗಿರುವುದರಿಂದ ಕ್ಷಾರವೆಂದೂ, ಸಂಸಾರಭಯಮಗ್ನರಾಗಿರುವವರನ್ನು ರಕ್ಷಿಸುತ್ತಿರುವುದರಿಂದ ರಕ್ಷಾ ಎಂದೂ ಈ ಐದು ಭಸ್ಮನಾಮಗಳು ಅನ್ವರ್ಥಕಗಳಾಗಿವೆ. ಭಸ್ಮವು ಅಗ್ನೀಷೋಮದೇವತಾತ್ಮಕವಾದದ್ದೆಂದು ತಿಳಿಯಬೇಕು. ॥೧೩-೧೪॥

ಏಕೋ ವಹ್ನಿರ್ಯಥಾ ಯಜ್ಞೇ ಶಮಿಂಧೇತಾಧ್ವರೇ ತಥಾ ।
ಬಹುರೂಪೋ ಮುನಿಶ್ರೇಷ್ಠ ಕಥೇದಂ ಭಸ್ಮಪಾವನಂ ॥೧೫॥

ಅತನೂ ದೇವದೇವಸ್ಯ ಅಷ್ಟಮೂರ್ತೇಃ ಪಿನಾಕಿನಃ ।
ಅಗ್ನಿರಿತ್ಯುಚ್ಯತೇರೌದ್ರೀ ಘೋರಾ ಯಾ ತೈಜಸೀತನುಃ ॥೧೬॥

ಸೋಮಃ ಶಕ್ತ್ಯಾಮೃತಮಯಃ ಶಾಂತಾ ಕಾಂತತರೀ ತನುಃ ।
ಅಮೃತಂ ಯತ್ಪ್ರತಿಷ್ಠಾ ಸಾ ತೇಜೋವಿದ್ಯಾಕಲಾಃ ಸ್ವಯಂ ॥೧೭॥

ಸ್ಥೂಲಸೂಕ್ಷ್ಮೇಷು ಭೂತೇಷು ತ ಏವ ರಸತೇಜಸೀ ।
ದ್ವಿವಿಧಾ ತೇಜಸೋ ವೃತ್ತಿಃ ಸೂರ್ಯಾತ್ಮಾ ಚಾನಲಾತ್ಮಿಕಾ ॥೧೮॥

ವೈದ್ಯುತಾದಿಭಯಂ ತೇಜೋ ಮಧುರಾದಿಮಯೋ ರಸಃ ।
ತೇಜೋ ರಸವಿಭೇದೇನ ಜಗದ್ವ್ಯಾಪ್ತಂ ಚರಾಚರಂ ॥೧೯॥

---

ಅಗ್ನಿಯು ಒಂದೇ ಆದರೂ ಬೇರೆಬೇರೆ ಯಜ್ಞಗಳಲ್ಲಿ ಬೇರೆಬೇರೆ ಕಾಲಗಳಿಂದ ನಾಮಾಂತರಗಳನ್ನು ಪಡೆಯುವಂತೆ ಈ ಭಸ್ಮವು ಒಂದೇ ಆದರೂ ಬಹುರೂಪದಿಂದ ಪ್ರಕಾಶಿಸುತ್ತಿದೆ. ದೇಹವಿವರ್ಜಿತನಾದ ಪರಶಿವನಿಗೆ ಅಗ್ನಿ, ಸೋಮ ಎಂಬ ಹೆಸರಿನ ಎರಡುಶರೀರಗಳು ಲೋಕಸೃಷ್ಟಿಗಾಗಿ ಉತ್ಪನ್ನವಾಗಿವೆ, ಆದರಲ್ಲಿ ಅಗ್ನಿ ದೇಹವು ರೌದ್ರಮಯವಾಗಿ, ಘೋರವಾದ ತೇಜಸ್ಸಿಗೆ ಆಶ್ರಯವಿತ್ತಿದೆ. ॥೧೫-೧೬॥

ಎರಡನೆಯದಾದ ಸೋಮಶರೀರವು ಅಮೃತಮಯವಾದದ್ದು; ಶಕ್ತಿವಿಶಿಷ್ಟವಾದದ್ದು. ಶಾಂತಸ್ವಭಾವದಿಂದ ಸುಂದರವಾಗಿ ಕಾಣತಕ್ಕುದು. ಆದರಲ್ಲಿ ಅಮೃತ, ತೇಜಸ್ಸು, ವಿದ್ಯೆ, ಕಲೆಗಳು ಅಡಗಿವೆ. ಪ್ರಪಂಚದಲ್ಲಿ ಕಂಡುಬರುವ ಸ್ಥೂಲ ಮತ್ತು ಸೂಕ್ಷ್ಮವಾದ ಸಕಲಶರೀರಗಳೂ ಈ ಎರಡುವಿಧವಾದ ಶಿವನ, ರಸ, ಮತ್ತು ತೇಜೋರೂಪವಾದ ಶರೀರದಿಂದ ಆವೃತವಾಗಿವೆ. ಆದರಲ್ಲಿಯೂ ತೈಜಸಶರೀರವು ಸೂರ್ಯರೂಪದಲ್ಲಿಯೂ, ಅಗ್ನಿರೂಪದಲ್ಲಿಯೂ ತೋರಿಬರುತ್ತಿರುವುದು. ಶೈವತೇಜಸ್ಸು ಮಿಂಚು, ಸಿಡಿಲು ಈ ರೂಪದಲ್ಲಿ ಪ್ರಪಂಚಕ್ಕೆ ಭಯವನ್ನುಂಟುಮಾಡುವುದು. ರಸವು ಮಧುರಾದಿ ಗುಣಗಳಿಂದ ಪ್ರಪಂಚವನ್ನು ರಕ್ಷಿಸುವುದು. ಒಟ್ಟಿನಲ್ಲಿ

ಅಗ್ನೇರಮೃತನಿಷ್ಪತ್ತಿರಮೃತೇನಾಗ್ನಿರುಚ್ಯತೇ ।
ಅತ ಏವ ಹವಿಃ ಕ್ಲೃಪ್ತಂ ಮುನೇ ಸರ್ವಮಖೇಷು ಚ ॥೨೦॥

ಹವಿಷಾ ಸಸ್ಯಸಂಪತ್ತಿರ್ವೃಷ್ಟಿಃ ಸಸ್ಯಾಭಿವೃದ್ಧಯೇ ।
ಹವಿಸ್ತೃಪ್ತಾ ಸುರಾಸ್ಸರ್ವೇ ಅಗ್ನೀಷೋಮಾತ್ಮಕಂ ಜಗತ್ ॥೨೧॥

ಊರ್ಧ್ವಶಕ್ತಿಮಯಃ ಸೋಮೋ ಹ್ಯಧಶ್ಶಿವಮಯೋನಲಃ ।
ಆಭ್ಯಾಂ ಸಂಪುಟಿತಂ ಯಸ್ಮಾಚ್ಛಶ್ವದ್ವಿಶ್ವಮಿದಂ ಜಗತ್ ॥೨೨॥

ಅಗ್ನಿರೂರ್ಧ್ವಂ ಜ್ವಲತ್ಯೇಷೋ ಯಾವತ್ಸೌಮ್ಯಂ ಪರಾವೃತಂ ।
ಯಾವದಗ್ನ್ಯಾಸ್ಪದಂ ಸೌಮ್ಯಮಮೃತಂ ವಿಸೃಜತ್ಯಧಃ ॥೨೩॥

ಅತ ಏವ ಹಿ ಕಾಲಾಗ್ನಿರಧಸ್ತಾಚ್ಛಕ್ತಿರೂರ್ಧ್ವಗಾ ।
ಯಾವತಾ ದಹನಶ್ಚೋರ್ಧ್ವಮಧಶ್ಚಾಪ್ಲಾವನಂ ಭವೇತ್ ॥೨೪॥

---

ಚರಾಚರಾತ್ಮಕವಾದ ಈ ಜಗತ್ತೆಲ್ಲಾ ಈಶ್ವರನ ತೇಜಸ್ಸು ಮತ್ತು ರಸರೂಪದಿಂದ ಆವೃತವಾಗಿರುವುದು. ॥೧೭-೧೮-೧೯॥

ಅಗ್ನಿಯಿಂದ ಅಮೃತವೂ, ಅಮೃತದಿಂದ ಅಗ್ನಿಯೂ ಉತ್ಪನ್ನವಾಗಿರುವುದು. ಆದ್ದರಿಂದ ಈ ಅಗ್ನಿಷೋಮ ದೇವತೆಗಳಿಗೆ ಸರ್ವಯಜ್ಞದಲ್ಲಿಯೂ ಹವಿಃಪ್ರದಾನವಿರುವುದು. ಹವಿಸ್ಸಿನಿಂದಲೇ ಪ್ರಪಂಚಕ್ಕೆ ಸಸ್ಯಸಂಪತ್ತೂ, ವೃಷ್ಟಿಲಾಭವೂ ದೊರಕುವುದು. ದೇವತೆಗಳೂ ಹವಿಸ್ಸಿನಿಂದಲೇ ತೃಪ್ತರಾಗುವರು. ಇದರಿಂದ ಈ ಪ್ರಪಂಚವು ಅಗ್ನೀಷೋಮಾತ್ಮಕವೆಂಬುದು ಸಿದ್ಧವಾಯಿತು. ॥೨೦-೨೧॥

ಸೋಮದೇಹವು ಊರ್ಧ್ವಭಾಗಕ್ಕೆ ವ್ಯಾಪಿಸುವ ಶಕ್ತಿಯುಳ್ಳದ್ದು, ಅಗ್ನಿದೇಹವು ಅಧೋಭಾಗಕ್ಕೆ ವ್ಯಾಪಿಸಬಲ್ಲದು. ಈ ಊರ್ಧ್ವಶಕ್ತಿ ಅಧಶ್ಶಕ್ತಿರೂಪಗಳಾದ ಅಗ್ನೀಷೋಮದೇಹದಿಂದ ಈ ಜಗತ್ತೇ ವ್ಯಾಪ್ತವಾಗಿದೆ. ಅಗ್ನಿಯು ಮೇಲ್ಭಾಗದಲ್ಲಿ ಜ್ವಲಿಸುತ್ತಿರುವುದು. ಆಗಲೇ ಅಧಶ್ಶಕ್ತಿರೂಪವಾದ ಸೋಮವು ಸ್ಪರ್ಶವಾದೊಡನೆಯೇ ಅದರಲ್ಲಿ ಅಮೃತವುಂಟಾಗಿ ಲೋಕಕ್ಷೇಮವೊದಗುವುದು. ಆದ್ದರಿಂದ ಕಾಲಾಗ್ನಿಯು ಮೇಲುಲೋಕವನ್ನೆಲ್ಲಾ ದಹಿಸುವಾಗ ಸೋಮದೇವತೆಯು ಅಧೋಲೋಕಗಳನ್ನೆಲ್ಲಾ ಮುಳುಗಿಸಿಬಿಡುವುದು. ॥೨೨-೨೩-೨೪॥

ಆಧಾರಶಕ್ತ್ಯೈವಧೃತಃ ಕಾಲಾಗ್ನಿರಥ ಊರ್ಧ್ವಗಃ ।
ತಥೈವ ನಿಮ್ನಗಸ್ಸೋಮಃ ಶಿವಶ್ಶಕ್ತಿಪದಾಸ್ಪದಃ ॥೨೫॥

ಶಿವಶ್ಚೋರ್ಧ್ವಮಯಶ್ಶಕ್ತಿರೂರ್ಧ್ವಶಕ್ತಿರಥಶ್ಶಿವಃ ।
ತದಿತ್ಥಂ ಶಿವಶಕ್ತಿಭ್ಯಾಂ ನಾವ್ಯಾಪ್ತಮಿಹ ಕಿಂಚನ ॥೨೬॥

ಅಸಕೃಚ್ಚಾಗ್ನಿನಾ ದಗ್ಧಂ ಜಗತ್ತದ್ಭಸ್ಮಸಾತ್ಕೃತಂ ।
ಅಗ್ನಿರ್ವೀರ್ಯಮಿದಂ ಪ್ರಾಹುಸ್ತದ್ವೀರ್ಯಂ ಭಸ್ಮ ಯತ್ತತಃ ॥೨೭॥

ಯಶ್ಚೇತ್ಥಂ ಭಸ್ಮಸದ್ಭಾವಂ ಜ್ಞಾತ್ವಾ ಹಿ ಸ್ನಾತಿ ಭಸ್ಮನಾ ।
ಅಗ್ನಿರಿತ್ಯಾದಿಭಿರ್ಮಂತ್ರೈರ್ದಗ್ಧಪಾಶಃ ಸ ಉಚ್ಯತೇ ॥೨೮॥

ಅಗ್ನೇರ್ವೀರ್ಯಂ ತು ತದ್ಭಸ್ಮ ಸೋಮೇನಾಪ್ಲಾವಿತಂಪುನಃ ।
ಅಯೋಗಯುಕ್ತ್ಯಾ ಪ್ರಕೃತಿರಧಿಕಾರಾಯ ಕಲ್ಪತೇ ॥೨೯॥

ಯೋಗಯುಕ್ತ್ಯಾ ತು ತದ್ಭಸ್ಮ ಪ್ಲಾವ್ಯಮಾನಂ ಸಮಂತತಃ ।
ಶಾಕ್ತೇನಾಮೃತವರ್ಷೇಣ ಹ್ಯಧಿಕಾರಾನ್ನಿವರ್ತಯೇತ್ ॥೩೦॥

---

ಆಧಾರಶಕ್ತಿಯೆನಿಸಿದ ಶಿವಶಕ್ತಿಯಿಂದಲೇ ಕಾಲಾಗ್ನಿಯು ಊರ್ಧ್ವಲೋಕಗಳನ್ನು ಆವರಿಸುವುದು. ಅದೇ ಶಕ್ತಿಯಿಂದಲೇ ಸೋಮವು ಅಧೋಲೋಕಗಳನ್ನೆಲ್ಲಾ ಮುಚ್ಚುವುದು. ಅಂತೂ ಶಿವನ ಆಧಾರದಿಂದ ಶಕ್ತಿಯೂ, ಶಕ್ತ್ಯಾಧಾರದಿಂದ ಶಿವನೂ ಜಗತ್ತನ್ನೆಲ್ಲಾ ವ್ಯಾಪಿಸಿರುವನು. ಆದ್ದರಿಂದಲೇ ಈ ಶಿವ, ಶಕ್ತಿ ಈ ಎರಡರಿಂದ ಆಕ್ರಮಿಸದ ಜಗತ್ತೇ ಇಲ್ಲ. ಈ ಜಗತ್ತು ಎಷ್ಟೋ ಸಾರಿ ಅಗ್ನಿಯಿಂದ ದಗ್ಧವಾಗಿ ಹೋಗಿದೆ. ಆ ದಗ್ಧಭಸ್ಮವೇ ಅಗ್ನಿವೀರ್ಯವೆಂಬ ಹೆಸರಿನಿಂದ ಈಗ ಭಸ್ಮವೆನಿಸಿದೆ. ॥೨೫-೨೬-೨೭॥

ಯಾರು ಈ ಭಸ್ಮಮಹಿಮೆಯನ್ನು ತಿಳಿದು 'ಅಗ್ನಿರಿತಿಭಸ್ಮ' ಎಂಬ ಮಂತ್ರಪೂರ್ವಕವಾದ ಭಸ್ಮಸ್ನಾನದಿಂದ ಪರಿಶುದ್ಧನಾಗುವನೋ, ಅವನು ಸಕಲ ಪಾಶಗಳಿಂದಲೂ ಮುಕ್ತನಾಗುವನು. ಭಸ್ಮವು ಅಗ್ನಿವೀರ್ಯವು. ಆದಕ್ಕೆ ಸೋಮದಿಂದ ಶಾಂತಿ ದೊರಕದಿದ್ದರೆ ಅಮೃತಮವಾದ ಶಕ್ತಿಯನ್ನು ಕೊಡಲಾರದು. ಅಲ್ಲದೆ ಸೋಮಸಂಬಂಧವಿಲ್ಲದ ಅಗ್ನಿಯು ಶಕ್ತಿಯುತವಾಗಲಾರದು. ಇದನ್ನು ತಿಳಿದು

ಅತೋ ಮೃತ್ಯುಂಜಯಾಯೇತ್ಥಮಮೃತಪ್ಲಾವನಂ ಸತಾಂ ।
ಶಿವಶಕ್ತ್ಯಮೃತಸ್ಪರ್ಶೇ ಲಬ್ಧ ಏವ ಕುತೋ ಮೃತಿಃ ॥೩೦॥

ಯೋ ವೇದಗಹನಂ ಗುಹ್ಯಂ ಪ್ಲಾವನಂ ಚ ತಥೋದಿತಂ ।
ಅಗ್ನೀಷೋಮಪುಟಂ ಕೃತ್ವಾ ಸ ಸ ಭೂಯೋಭಿಜಾಯತೇ ॥೩೧॥

ಶಿವಾಗ್ನಿನಾ ತನುಂ ದಗ್ಧ್ವಾ ಶಕ್ತಿಸೋಮಾಮೃತೇನ ಯಃ ।
ಪ್ಲಾವಯೇದ್ಯೋಗಮಾರ್ಗೇಣ ಸೋಮೃತತ್ವಾಯ ಕಲ್ಪತೇ ॥೩೨॥

ಅಗ್ನೀಷೋಮಮಯಂ ಜಗತ್ಸ್ಥಿರಚರಂ ಸಂಭಾವಿತಂ ಶಂಕರಾತ್ ।
ಸಾರಾಸಾರವಿಚಾರಸಾಗರ ಮಹಾಪಾರೀಣಧುರ್ಯಾಮುನೇ ।
ಜಾನಂತ್ಯೇವ ಗತಾಗತೀಷು ನಿತರಾಮುತ್ಕೃಷ್ಟಭಾವಾಭವೇ ।
ಭಾವಾ ಏವ ಭವೇಪಿ ಭಾವಪರಮಾಭಸ್ಮೈಕಭಾಸಾಸ್ಸದಾ ॥೩೪॥

---

ನಾವು ಅಗ್ನಿವೀರ್ಯವೆನಿಸಿದ ಭಸ್ಮಕ್ಕೆ ಶಕ್ತಿಯನ್ನು ಸ್ಥಿರಪಡಿಸಿಕೊಳ್ಳಬೇಕು. ॥೨೮-೨೯-೩೦॥

ಈ ರೀತಿ ಭಸ್ಮಧಾರಣೆಯೇ ಪರಶಿವನಿಗೆ ಅಮೃತಪ್ಲಾವನವೆನಿಸುವುದು. ಮೃತ್ಯುಂಜಯವೆನಿಸಿದ ಪರಶಿವನ ಶಕ್ತಿಸಹಿತವಾದ ಭಸ್ಮಧಾರಣೆಯುಳ್ಳವನಿಗೆ ಮರಣವೆಲ್ಲಿಂದ ಬರಬೇಕು? ಅಗ್ನೀಷೋಮ ಸಂಪುಟಾತ್ಮಕವಾದ ಭಸ್ಮವಿಧಿಯು ವೇದಗಳಿಗೂ ತಿಳಿಯದ ವಿಷಯ. ಮತ್ತು ಅದು ಅತಿ ರಹಸ್ಯವಾದುದು. ಇದನ್ನು ಸಾಕ್ಷಾತ್ಪರಶಿವನೇ ತಿಳಿಸಿರುವನು. ಯಾವನು ಶಕ್ತಿಸೋಮಾತ್ಮಕವಾದ ಭಸ್ಮಧಾರಣೆಯಿಂದ ಶುದ್ಧನಾಗಿ ಶಿವಾಗ್ನಿಯಲ್ಲಿ ತನ್ನ ದೇಹವನ್ನು ವಿಸರ್ಜಿಸುವನೋ ಅವನು ನಾಶರಹಿತವಾದ ದೇವತ್ವವನ್ನು ಪಡೆಯುವುದರಲ್ಲಿ ಅನುಮಾನವಿಲ್ಲ ॥೩೧-೩೨-೩೩॥

ಯಾರು ಸರ್ವದಾ ಭವನಾಮಕನಾದ ಶಂಕರನಲ್ಲಿಯೇ ಸ್ಥಿರಮನಸ್ಸುಳ್ಳವರಾಗಿರುವರೋ, ಅವರು ಸಂಸಾರಸಾಗರದಲ್ಲಿ ಮುಳುಗಿದ್ದರೂ, ಪರಿಶುದ್ಧವಾದ ಭಸ್ಮಧಾರಣೆಯಿಂದ ಜ್ಞಾನಿಗಳೆನಿಸಿ ಈ ಜಗತ್ತು ಅಗ್ನೀಷೋಮಾತ್ಮಕವಾದದ್ದೆಂಬುದನ್ನು ಮನಸಾ ತಿಳಿಯುವರು. ಅಲ್ಲದೆ ಶಂಕರನಿಂದಲೇ ಈ ಸಾರಾಸಾರಾತ್ಮಕವಾದ ಜಗತ್ತು ಹುಟ್ಟಿತು. ಕೊನೆಗೆ ಅಲ್ಲಿಯೇ ಲಯಹೊಂದುವುದು ಎಂಬ ತತ್ವವನ್ನು ಕೇವಲ ವಿಚಾರಪರಂಪರೆಗಳಿಂದಲೇ ಅರಿಯುವರು. ॥೩೪॥

ಅಗ್ನೀಷೋಮಪುಟೋದ್ಭವೇನ ಭಸಿತಾಲೋಕಾವಭೂಷಾಂಗಕಾ ।
ಶಾಂಗಾ ಏವ ಭವಂತಿ ಭಾಗ್ಯಪರಮಾಪಾಪೌಘಭಂಗಾಶಯಾಃ ।
ದುಗ್ಧಾನಂಗಮಹಾಂಗಸಂಗಭುಜಗಾ ಭೋಗಾಂಗಲಿಂಗಾರ್ಚಕಾಃ ।
ಪುಣ್ಯಾಪಾರಪತಂಗಭಾನ ಭವನಾಸ್ತೇ ಪಾವನಾ ಭೂತಲೇ ॥೩೫॥

ಯೋ ವಾ ಕೋ ವಾ ವಿಭೂತ್ಯಾ ಭವತಿ ಹಿಕಲಿತೋ ದೇವಿ ದಿವ್ಯತ್ರಿಪುಂಡ್ರೈಃ
ಸರ್ವೇಷಾಮಪಿ ಪಾವನೋ ಹಿ ಸ ಭವೇತ್ಸಾಲೋಕಸಂಗೇನ ಹಿ ।
ತತ್ಸಂಗೇನ ಹಿ ಭಂಗಿತಾಘನಿಚಯೋ ಭೂಯೋಭವೇದ್ವೈಜನೋ
ಜಾನಾತಿ ಶ್ರುತಿಯುಕ್ತಿಸೂಕ್ತಿವಚನೈಃ ಸಂಭಸ್ಮನೋಂಬೇ ಪ್ರಭುಃ ॥೩೬॥

ಆರ್ಯಾವರ್ತಸ್ಥಿತಾಯಾ ಶ್ರುತಿಗದಿತಮಹಾನರ್ಘಭಸ್ಮಾದಿಭಿರ್ಯೇ ।
ಪುಂಡ್ರಂ ಫಾಲತಲೇ ನಿಧಾಯ ವಿಮಲಂ ಸರ್ವಾಘಸಂಘೋಜ್ಝಿತಾಃ ॥
ಶರ್ವಸ್ಯೈವ ಸಮರ್ಚನಪ್ರಿಯತರಾ ಗರ್ವಾದಿವರ್ಗೋಜ್ಝಿತಾ ।
ಸ್ತೇ ವೀರ್ಯೋನ್ನತಭಾಸ್ವರಂತಿ ಭುವನೇ ತೇ ಚಾರ್ಯವೃತ್ತಿಸ್ಥಿತಾಃ ॥೩೭॥

---

ಅಗ್ನಿಷೋಮಾತ್ಮಕವಾದ ಈ ಭಸ್ಮದಿಂದ ಲೇಪಿತವಾದ ಮತ್ತು ಭೂಷಿತವಾದ ಅಂಗವುಳ್ಳ ಶಾಂಭವರು, ಪುಣ್ಯವಿಶೇಷದಿಂದಲೂ ಪಾಪನಾಶದಿಂದಲೂ ಪ್ರಕಾಶಿಸುವರು. ಅಷ್ಟೇ ಅಲ್ಲದೆ ಕ್ಷೀರಸಮುದ್ರದಿಂದ ಜನಿಸಿದ ಚಂದ್ರ, ಆದಿಶೇಷ, ದೇವಗಂಗೆ ಮೊದಲಾದ ಪವಿತ್ರ ವಸ್ತುಗಳಿಂದ ಅಲಂಕೃತವಾದ ಶಿವಲಿಂಗವನ್ನು ಅರ್ಚಿಸುವವರಾಗಿ, ಅತಿಶಯವಾದ ತೇಜಸ್ಸಿನಿಂದ ಸೂರ್ಯನಂತೆ ಹೊಳೆಯುತ್ತಾ ಜಗತ್ಪಾವನರಾಗಿ ವಿರಾಜಿಸುವರು. ॥೩೫॥

ಎಲೌ ದೇವಿಯೇ, ಲೋಕದಲ್ಲಿ ಯಾರೇ ಆಗಲಿ ಪವಿತ್ರತಮವಾದ ವಿಭೂತಿಯಿಂದ ತ್ರಿಪುಂಡ್ರಧಾರಣೆ ಮಾಡಿಕೊಂಡು ಶಿವಾರ್ಚನೆ ಮಾಡಿದರೆ, ಅವರು ಸರ್ವಪಾವನರೆನಿಸುವರು. ಅವನ ಸಂಪರ್ಕದಿಂದಲೇ ಅನೇಕ ಮಾನವರು ಶುದ್ಧಿಗೊಳ್ಳುವರು. ಅಂತಹವನ ಸಹವಾಸವು ಪಾಪನಾಶಕರವಾದುದು. ಇದೇ ಅಭಿಪ್ರಾಯವನ್ನು ಶ್ರುತಿಸಮೂಹವು ಸದಾ ಸಾರುತ್ತಿರುವುದು. ಯಾವನು ನಿಜವಾದ ಜ್ಞಾನಿಯೋ ಅವನೇ ಈ ವಿಷಯವನ್ನು ತಿಳಿಯಬಲ್ಲನು. ॥೩೬॥

ವಿಂಧ್ಯಹಿಮಾಲಯಗಳ ಮಧ್ಯೆ ಇರುವ ಆರ್ಯಾವರ್ತವೆಂಬ ಪುಣ್ಯಭೂಮಿಯಲ್ಲಿ ವಾಸಮಾಡುತ್ತಾ, ಶ್ರುತಿಪ್ರತಿಪಾದಿತವಾದ ಭಸ್ಮತ್ರಿಪುಂಡ್ರವನ್ನು ಸದಾ

ಭಸ್ಮೇದಂ ಸ್ಮರಹಂತೃಫಾಲಫಲಕಾಲಂಕಾರ ಭೂತಂ ಸದಾ ।
ಪಾಪೌಘೌತುಲಘುಸ್ಮರಂ ಸ್ಮೃತಿಕೃತಂ ಬುದ್ಧ್ಯಾದಿ ಬೋಧಪ್ರದಂ ।
ಜ್ಞಾನಂ ಚಾಪಿ(?)ದಿಶೇಂದು ನೋ ವಿಧಿಧೃತಂ ತಿರ್ಯಕ್ಕಪಾಲೇಷ್ವಪಿ ।
ಸರ್ವೇಷಾಮವಿಶೇಷತೋ ದ್ವಿಜಗಣೇಷೂಕ್ತಂ ವಿಶೇಷೇಣ ಹಿ ॥೩೮॥

ಸಮಾಮ್ನಾತಾಮ್ನಾಯಪ್ರಬಲವಚನೇನಾಲಮಿತರ
ಪ್ರಮಾಣಾನಾಂ ಮಾನಂ ಶ್ರುತಿಗದಿತಸೀಮಾನುಸರಣಂ ।
ಪ್ರಮಾದೋ ನೋ ಭೂತ್ಯೈ ಭವತಿ ಸುಖಕೀರ್ತ್ಯಾದಿವಿನಶ ।
ಚ್ಛಿವೋತ್ಕರ್ಷಜ್ಞಾನೀ ಭವತಿ ಚ ವಿಮುಕ್ತಃ ಪರತರಃ ॥೩೯॥

ಇತಿ ಶ್ರೀಶಿವರಹಸ್ಯೇ ದಶಮಾಂಶೇ ಭಸ್ಮಮಹಿಮಾವರ್ಣನಂ ನಾಮ
ಪಂಚಮೋಽಧ್ಯಾಯಃ

---

ಧರಿಸುತ್ತಾ ಪಾಪರಾಶಿಯನ್ನೆಲ್ಲಾ ಕಳೆದುಕೊಂಡವರಾಗಿ, ಸದಾ ಶಂಕರನನ್ನೇ ಧ್ಯಾನಿಸಿ ಗರ್ವದಂಭಾದಿಗಳನ್ನು ದೂರಮಾಡಿ ಅತಿಶಯವಾದ ಪರಾಕ್ರಮಿಗಳೆನಿಸಿ, ಆರ್ಯವೃತ್ತಿಯಲ್ಲಿ ನಿರತರಾಗಿ ಸಂಸಾರಸಾಗರವನ್ನು ದಾಟಿ ಪರಶಿವಸಾನ್ನಿಧ್ಯವನ್ನು ಸೇರುವರು. ॥೩೭॥

ಭಸ್ಮವು ಮಾರಾರಿಯಾದ ಶಂಕರನ ಫಾಲನೇತ್ರಕ್ಕೆ ಅಲಂಕಾರಪ್ರಾಯವಾಗಿರುವುದು. ಪಾಪಶಾಶಿಯನ್ನು ನಿರ್ಮೂಲಗೊಳಿಸುವುದು. ಚಿತ್ತಶುದ್ಧಿಗೊಳಿಸಿ, ಜನ್ಮಾಂತರಗಳ ಸ್ಮರಣೆಯನ್ನು ಸಹ ಕೊಡಬಲ್ಲುದು. ಮತ್ತು ಜ್ಞಾನದಾಯಕವಾದುದು. ಬ್ರಹ್ಮನೂ ಸಹ ಈ ಭಸ್ಮವನ್ನೇ ತ್ರಿಪುಂಡ್ರರೀತಿಯಲ್ಲಿ ಒಳಿದುಕೊಂಡಿರುವನು. ಆದ್ದರಿಂದ ಜಾತಿಭೇದವಿಲ್ಲದೆ ಯಾರಾದರೂ ಈ ಭಸ್ಮವನ್ನು ಧರಿಸಿಕೊಳ್ಳಬಹುದು. ದ್ವಿಜರಂತೂ ಭಸ್ಮವನ್ನು ಧರಿಸಿಕೊಳ್ಳಲೇಬೇಕೆಂಬ ವಿಶೇಷ ನಿಯಮವಿದೆ. ॥೩೮॥

ಶ್ರುತಿಪ್ರತಿಪಾದಿತವಾದ ಭಸ್ಮದ ಪಾವಿತ್ರ್ಯವಿಷಯದಲ್ಲಿ ಇತರ ಯಾವ ಪ್ರಮಾಣಗಳೂ ವಿರುದ್ಧವಾಗಿ ದೃಢಪಡಿಸಲಾರವು. ಏಕೆಂದರೆ ಲೋಕದಲ್ಲಿ ಎಲ್ಲ ಪ್ರಮಾಣಗಳೂ ವೇದಾರ್ಥವನ್ನು ದೃಢಪಡಿಸಬೇಕೇಹೊರತು ತದ್ವಿರುದ್ಧವಾಗಿ ವಾದಿಸಲು ಯಾವುದಕ್ಕೂ ಶಕ್ತಿಯಿರುವುದಿಲ್ಲ. ಇದರಲ್ಲಿ ಪ್ರಮಾದವೇನೂ ಇಲ್ಲ. ಒಟ್ಟಿನಲ್ಲಿ ಭಸ್ಮವೆಂಬುದು ಐಹಿಕದಲ್ಲಿ ಮಾನವವರ್ಗಕ್ಕೆ ಸುಖ, ಕೀರ್ತಿ ಇವೇ ಮೊದಲಾದುವುಗಳನ್ನು ಕೊಟ್ಟು, ಶಿವೋತ್ಕರ್ಷಜ್ಞಾನವನ್ನುಂಟುಮಾಡಿ ಕೊನೆಗೆ

ಶಿವಸಾನ್ನಿಧ್ಯವನ್ನು ಒದಗಿಸಬಲ್ಲುದು ಎಂದು ಕುಮಾರಸ್ವಾಮಿಯು ಜೈಗೀಷವ್ಯ ಮಹರ್ಷಿಗೆ ಭಸ್ಮಮಹಿಮೆಯನ್ನು ಹೇಳಿದನು. ॥೩೯॥

ಇಲ್ಲಿಗೆ ಶ್ರೀಶಿವರಹಸ್ಯದ ದಶಮಾಂಶದಲ್ಲಿ ಭಸ್ಮಮಹಿಮಾಪ್ರಭಾವವರ್ಣನವೆಂಬ
ಐದನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

॥ ಶ್ರೀ ಶಿವಾಯ ನಮಃ ॥

# ಅಥ ಶ್ರೀಶಿವರಹಸ್ಯೇ

## ಈಶಾನಾಖ್ಯೇ

## ದಶಮಾಂಶಪೂರ್ವಾರ್ಧೇ

## ಷಷ್ಠೋಽಧ್ಯಾಯಃ

॥ ಶ್ರೀಸ್ಕಂದ ಉವಾಚ ॥

ಭಸ್ಮಸ್ನಾನವಿಧಿಂ ವಕ್ಷ್ಯೇ ತ್ರ್ಯಕ್ಷಸ್ಯಾಭಿಮತಂ ಮುನೇ ।
ಕೈಲಾಸಶಿಖರಾಸೀನಂ ಮಹಾದೇವಂ ಗಿರೀಂದ್ರಜಾ ॥೧॥
ಪ್ರಣಮ್ಯ ಪ್ರಣಯೇನಾಹ ಪ್ರಣತಾರ್ತಿಹರಂ ಹರಂ ॥೨॥

॥ ಶ್ರೀಪಾರ್ವತ್ಯುವಾಚ ॥

ದೇವ ತ್ರಿಶೂಲವಿಲಸತ್ಕರಪಲ್ಲವ ಶಂಕರ ।
ಪ್ರಸೀದ ಪ್ರಮಥಾಧೀಶಮನ್ಮಥಾಂತಕರಾವ್ಯಯ ॥೩॥

---

## ಆರನೆಯ ಅಧ್ಯಾಯ

ಪರಶಿವನು ಪಾರ್ವತಿಯ ಕೋರಿಕೆಯಂತೆ ವಿಶ್ವಾಸದಿಂದ ಹೇಳಿದ ಭಸ್ಮಸ್ನಾನ ವಿಧಿಯನ್ನು ಕುಮಾರಸ್ವಾಮಿಯು ಜೈಗೀಷವ್ಯನಿಗೆ ತಿಳಿಸುತ್ತಾ ಹೀಗೆಂದನು— ಹಿಂದೆ ಕೈಲಾಸಗಿರಿಯಲ್ಲಿ ಸಂತೋಷದಿಂದ ಕುಳಿತಿದ್ದ ಪರಮೇಶ್ವರನನ್ನು ಕುರಿತು ಪಾರ್ವತಿಯು, " ಸ್ವಾಮಿಯೇ, ತ್ರಿಶೂಲಾಯುಧದಿಂದ ವಿರಾಜಿಸುವ ಕರಕಮಲ ವುಳ್ಳವನೇ, ಪ್ರಮಥಾಧೀಶನೂ, ಕಾಮಾಂತಕನೂ, ನಾಶರಹಿತನೂ ಆದ ಮಹಾ ದೇವನೇ, ನನ್ನಲ್ಲಿ ಪ್ರಸನ್ನನಾಗು. ॥೧-೨-೩॥

ಶಂಭೋ ವಿಶ್ವಾಕ್ಷ ವಿಶ್ವೇಶ ವಿಶ್ವತೋಮುಖ ಶಂಕರ ।
ಭಸ್ಮಸ್ನಾನವಿಧಿಂ ಶಂಭೋ ವದೈವ ಕರುಣಾಕರ ॥೪॥

॥ ಶ್ರೀಸ್ಕಂದ ಉವಾಚ ॥

ಇತಿ ದೇವ್ಯಾ ತದಾ ಪೃಷ್ಟೋ ಈಶಾನೋ ದೇವನಾಯಕಃ ।
ವಿನಾಯಕಗುರುರ್ದೇವೋ ಬಭಾಷೇ ತಾಂ ಗಿರೀಂದ್ರಜಾಂ ॥೫॥

॥ ಶ್ರೀ ಈಶ್ವರ ಉವಾಚ ॥

ಸಾಧು ಪೃಷ್ಟಂ ತ್ವಯಾ ಭದ್ರೇ ಗುಹ್ಯಮೇವ ತ್ವಯಾಂಬಿಕೇ ।
ಭಸ್ಮಸ್ನಾನವಿಧಿಂ ತೇದ್ಯ ಪ್ರವಕ್ಷ್ಯೇ ಪಾಪನಾಶನಂ ॥೬॥

ಭಸ್ಮಸ್ನಾನೇಷ್ವಧಿಕೃತಃ ಶಾಂಭವಶ್ಶಿವಪಾದಧೀಃ ।
ನೇತರೋ ದೇವಿ ತತ್ಪಾತ್ರಂ ತ್ರಿನೇತ್ರಪ್ರಿಯಮದ್ರಿಜೇ ॥೭॥

ನಾನ್ಯಪುಂಡ್ರಧರಃ ಪಾತ್ರಂ ಭಸ್ಮಸ್ನಾನೇ ಸದೈವಹಿ ।
ವೈದಿಕೋ ವೇದನಿರತೋ ವಿರತಸ್ತ್ವನ್ಯಕರ್ಮಣಿ ॥೮॥

ನ ತಾಂತ್ರಿಕಸ್ತದ್ವಿಕೃತೋ ನೋರ್ಧ್ವಪುಂಡ್ರಧರಶ್ಶಿವೇ ।
ಸಂತಪ್ತಚಕ್ರಚಿಹ್ನೋತ್ರ ಶ್ವವದ್ಯಜ್ಞೇ ಬಹಿಷ್ಕೃತಃ ॥೯॥

---

ಶಂಭುವೇ, ವಿಶ್ವರೂಪನೇ, ವಿಶ್ವಾಧೀಶನೇ, ಇಲ್ಲಿನವರೆಗೂ ನೀನು ಭಸ್ಮಮಹಿಮೆಯನ್ನು ತಿಳಿಸಿರುವೆ. ಈಗ ಭಸ್ಮಸ್ನಾನವಿಧಿಯನ್ನು ತಿಳಿಸುವವನಾಗು. ಎಂದು ಪ್ರಾರ್ಥಿಸಲು, ಆಗ ಈಶ್ವರನು ಪಾರ್ವತಿಯೊಡನೆ ಹೀಗೆಂದನು. ॥೪-೫॥

"ದೇವಿಯೇ, ಬಹು ಗೂಢವಾದ ವಿಷಯವನ್ನೇ ಪ್ರಶ್ನಿಸುತ್ತಿರುವೆ. ಭಸ್ಮಸ್ನಾನವಿಧಿಯು ಬಹುಪಾಪನಾಶಕರವಾದದ್ದು. ಯಾವನು ಶಾಂಭವನೆನಿಸಿ, ಸರ್ವದಾ ಶಿವಪಾದವನ್ನೇ ಸ್ಮರಿಸುತ್ತಾ ಭಸ್ಮತ್ರಿಪುಂಡ್ರವನ್ನೇ ಧರಿಸುವನೋ ಅವನೇ ಭಸ್ಮಸ್ನಾನಕ್ಕೆ ಅಧಿಕಾರಿಯು. ಅವನು ವೇದಧರ್ಮದಲ್ಲಿ ನಿರತನಾಗಿ ಇತರ ಯಾವ ಧರ್ಮಗಳನ್ನೂ ನಡೆಸದವನಾಗಿರಬೇಕು. ॥೬-೭-೮॥

ತಂತ್ರಶಾಸ್ತ್ರನಿಪುಣನೂ, ಊರ್ಧ್ವಪುಂಡ್ರ (ನಾಮ) ಗಳನ್ನು ಧರಿಸುವವನೂ, ಚಕ್ರಾಂಕನಮಾಡಿಕೊಂಡಿರುವವನೂ, ಈ ಭಸ್ಮಸ್ನಾನಕ್ಕೆ ಅಧಿಕಾರಿಯಲ್ಲ. ಯಜ್ಞ

ತದ್ವದೇವಾತ್ರ ಗಿರಿಜೇ ಭಸ್ಮಸ್ನಾನವಿಧೌ ಮುದಾ ।
ತತ್ರೈತೇ ಬಹವಃ ಶ್ಲೋಕಾ ಬೃಹಜ್ಜಾಬಾಲಚೋದಿತಾಃ ॥೧೦॥

ಶೃಣುಷ್ವ ಸಾವಧಾನೇನ ಭಸ್ಮಸ್ನಾನವಿಧೌ ಶಿವೇ ।
ಭಸ್ಮಚೋಕ್ತಂ ಸಮಾದಾಯ ಸಂಸಿತಂ ಮಂತ್ರಮಂತ್ರಿತಂ ॥೧೧॥

ಮಸ್ತಕಾತ್ಪಾದಪರ್ಯಂತಂ ಮಲಸ್ನಾನಂ ಪರೋದಿತಂ ।
ಹೃನ್ಮಂತ್ರೇಣ ಚ ಕರ್ತವ್ಯಂ ವಿಧಿಸ್ನಾನಂ ಸಮಾಚರೇತ್ ॥೧೨॥

ಈಶೇನ ಪಂಚಧಾ ಭಸ್ಮ ವಿಕಿರೇನ್ಮೂರ್ಧ್ನಿ ಯತ್ನತಃ ।
ಚತುರ್ಧಾ ಪುರುಷೇಣೈವ ವಕ್ತ್ರೇ ಹೃದಿ ತಥಾಷ್ಟಧಾ ॥೧೩॥

ಅಘೋರೇಣಾಥ ವಾಮೇನ ದಶಧಾ ಉದರೇ ಕರೌ ।
ಅಷ್ಟಾವಂತೇನ ಸದ್ಯೇನ ಪಾದಾವುದ್ಧೂಲ್ಯಯತ್ನತಃ ॥೧೪॥

---

ಮಂಟಪದಲ್ಲಿ ನಾಯಿಗೆ ಹೇಗೆ ಸ್ಥಾನವಿಲ್ಲವೋ, ಹಾಗೆ ಮೇಲೆ ಹೇಳಿದವರು ಭಸ್ಮ ಸ್ನಾನಕ್ಕೆ ಅನರ್ಹರು. ಇದೇ ವಿಷಯವನ್ನು ಬೃಹಜ್ಜಾಬಾಲೋಪನಿಷತ್ತಿನಲ್ಲಿ ವಿಶೇಷವಾಗಿ ನೋಡಬಹುದು. ದೇವಿಯೇ, ಈಗ ಭಸ್ಮಸ್ನಾನವಿಧಿಯನ್ನು ವಿಶೇಷ ರೀತಿಯಲ್ಲಿ ಹೇಳುವೆನು ಕೇಳು. ॥೯-೧೦-೧೧॥

ಶಾಸ್ತ್ರವಿಧಿಯಂತೆ ಸಂಸ್ಕೃತವಾಗಿ ಶುಭ್ರವಾಗಿರುವ ವಿಭೂತಿಯನ್ನು ಕೈಯ್ಯಲ್ಲಿ ಹಿಡಿದು ಶಿರಸ್ಸಿನಿಂದ ಕಾಲಿನವರೆಗೂ ಬಳಿದುಕೊಳ್ಳಬೇಕು. ಇದಕ್ಕೆ ಮಲಸ್ನಾನವೆಂದು ಹೆಸರು. 'ಅಗ್ನಿರಿತಿಭಸ್ಮ' ಇತ್ಯಾದಿ ಮಂತ್ರಪುರಸ್ಸರವಾಗಿ ಮಾಡುವ ಭಸ್ಮಲೇಪನವು ವಿಧಿಸ್ನಾನವೆನಿಸುವುದು. ಈಶಾನಸ್ಸರ್ವವಿದ್ಯಾನಾಂ ಎಂಬ ಮಂತ್ರದಿಂದ ಭಸ್ಮವನ್ನು ಶಿರಸ್ಸಿನ ಮೇಲೆ ಐದುಸಾರಿ ಭಸ್ಮವನ್ನು ಎರಚಿ ಕೊಳ್ಳಬೇಕು. 'ತತ್ಪುರುಷಾಯ' ಎಂಬ ಶಿವಮಂತ್ರದಿಂದ ನಾಲ್ಕುಸಾರಿ ಮುಖದ ಮೇಲೂ, 'ಅಘೋರೇಭ್ಯಃ' ಎಂಬ ಮಂತ್ರದಿಂದ ಎಂಟುಸಾರಿ ಎದೆಯ ಮೇಲೂ ಭಸ್ಮಲೇಪನ ಮಾಡಿಕೊಳ್ಳಬೇಕು. 'ವಾಮದೇವಾಯನಮಃ' ಎಂಬ ಈ ಮಂತ್ರಪುರಸ್ಸರವಾಗಿ ಹತ್ತುಸಾರಿ ಹೊಟ್ಟೆಯ ಮೇಲೆ ಭಸ್ಮಲೇಪನಮಾಡಿಕೊಳ್ಳ ಬೇಕು. 'ಸದ್ಯೋಜಾತಂ' ಎಂಬ ಮಂತ್ರದಿಂದ ಎಂಟುಸಾರಿ ಪಾದಗಳಿಗೆ ಭಸ್ಮೋ

ಸರ್ವಾಂಗೋದ್ಧೂಲನಂ ಕಾರ್ಯಂ ರಾಜನ್ಯಸ್ಯ ಯಥಾವಿಧಿ ।
ಮುಖಂ ವಿನಾ ಚ ತತ್ಸರ್ವಮುದ್ಧೂಲ್ಯಕ್ರಮಯೋಗತಃ ॥೧೫॥

ಸಂಧ್ಯಾತ್ರಯೇ ನಿಶೀಥೇ ವಾ ತಥಾ ಪೂರ್ವಾಪರಾಹ್ಣಯೋಃ ।
ಸುಪ್ತ್ವಾ ಭುಕ್ತ್ವಾ ಪಯಃ ಪೀತ್ವಾ ಕೃತ್ವಾ ಚಾವಶ್ಯಕಾದಿಕಂ ॥೧೬॥

ಸ್ತ್ರೀನಪುಂಸಕಂ ಗೃಧ್ರಂ ಬಿಡಾಲಂ ಬಕಮೂಷಿಕಂ ।
ಸ್ಪೃಷ್ಟ್ವಾ ತಥಾ ವಿಧಾನನ್ಯಾನ್ ಭಸ್ಮಸ್ನಾನಂ ಸಮಾಚರೇತ್ ॥೧೭॥

ದೇವಾಗ್ನಿಗುರುವಿದ್ಯಾನಾಂ ಸಮೀಪೇಂತ್ಯಜದರ್ಶನೇ ।
ಅಶುದ್ಧಭೂತಲೇ ಮಾರ್ಗೇ ಕುರ್ಯಾನ್ನೋದ್ಧೂಲನಂ ವ್ರತೀ ॥೧೮॥

ಶಂಖತೋಯೇನ ಮೂಲೇನ ಭಸ್ಮವ್ಯಾಮಿಶ್ರಣಂ ಭವೇತ್ ।
ಏಷಿತಂ ಚಂದನೇನಾಪಿ ವಾರಿಣಾ ಸಂಯುತಂ ತು ವಾ ॥೧೯॥

ಚಂದನೇನ ಸಮಾಲಿಂಪೇತ್ ಜ್ಞಾನಾರ್ಥೀ ಚೂರ್ಣಮೇವತು ।
ಮಧ್ಯಾಹ್ನಾತ್ ಪ್ರಾಗ್ಜಲೈರ್ಯುಕ್ತಂ ತೋಯಂ ತದನು ವರ್ಜಯೇತ್ ॥೨೦॥

---

ದ್ಧೂಲನ ಮಾಡಿಕೊಳ್ಳಬೇಕು. ಕ್ಷತ್ರಿಯನಿಗೂ ಈರೀತಿ ಸರ್ವಾಂಗೋದ್ಧೂಲನ ಕಾರ್ಯವುಂಟು. ಆದರೆ ಕ್ಷತ್ರಿಯನು ಮುಖವೊಂದನ್ನು ಬಿಟ್ಟು ಉಳಿದ ಅಂಗಗಳಿಗೆಲ್ಲಾ ಭಸ್ಮೋದ್ಧೂಲನ ಮಾಡಿಕೊಳ್ಳಬೇಕು. ॥೧೨-೧೩-೧೪-೧೫॥

ಪ್ರಾತಃಕಾಲ, ಮಧ್ಯಾಹ್ನ, ಸಾಯಂಕಾಲ, ಅರ್ಧರಾತ್ರಿ, ಪೂರ್ವಾಹ್ನ, ಅಪರಾಹ್ಣ ಈ ಕಾಲಗಳಲ್ಲಿಯೂ, ನಿದ್ದೆ, ಊಟ, ಜಲಪಾನ ಇನ್ನೂ ಆವಶ್ಯಕವಾದ ಇತರ ಕಾರ್ಯಗಳು ಇವುಗಳಾದಮೇಲೂ ಭಸ್ಮಸ್ನಾನಮಾಡಬಹುದು. ಹೆಂಗಸರು, ನಪುಂಸಕರು, ಹದ್ದು, ಬೆಕ್ಕು, ಬಕ, ಇಲಿ ಮುಂತಾದುವುಗಳ ಸ್ಪರ್ಶನಾನಂತರ ಭಸ್ಮಸ್ನಾನದಿಂದ ಶುದ್ಧನಾಗಬೇಕು. ದೇವರು, ಅಗ್ನಿ, ವಿದ್ಯಾಗುರು ಇವರ ಪಕ್ಕದಲ್ಲಿ ಚಂಡಾಲದರ್ಶನವಾದರೂ, ಅಶುದ್ಧವಾದ ಭೂಭಾಗದಲ್ಲಿಯೂ ಭಸ್ಮಸ್ನಾನ ಮಾಡಕೂಡದು. ॥೧೬-೧೭-೧೮॥

ಮೂಲಮಂತ್ರವನ್ನುಚ್ಚರಿಸುತ್ತಾ, ಶಂಖೋದಕ, ಗಂಧೋದಕ ಅಥವಾ ಶುದ್ಧೋದಕ ಇವುಗಳಿಂದ ಭಸ್ಮವನ್ನು ಕಲಸಿ ಧಾರಣೆಮಾಡಬೇಕು. ಜ್ಞಾನಿಯಾಗ ಬಯಸುವವನೂ ಕೇವಲ ಭಸ್ಮಚೂರ್ಣವನ್ನು ಚಂದನ ಮಿಶ್ರಮಾಡಿಕೊಂಡು

ತ್ರಿಪುಂಡ್ರಂ ಕಾಮಯೇತ್ಪಶ್ಚಾದ್ಬ್ರಹ್ಮವಿಷ್ಣುಶಿವಾತ್ಮಕಂ ।
ಮಧ್ಯಾಂಗುಲಿಭಿರಾದಾಯ ತಿಸೃಭಿರ್ಮೂಲಮಂತ್ರಿತಂ ॥೨೨॥

ದ್ವಾತ್ರಿಂಶತ್ಸ್ಥಾನಕೇ ವಾಥ ಷೋಡಶಸ್ಥಾನಕೇಽಪಿ ವಾ ।
ಅಷ್ಟಸ್ಥಾನೇ ತಥಾ ಚೈವ ಪಂಚಸ್ಥಾನೇಽಪಿ ಯೋಜಯೇತ್ ॥೨೩॥

ಉತ್ತಮಾಂಗೇ ಲಲಾಟೇ ಚ ಕರ್ಣಯೋರ್ನೇತ್ರಯೋಸ್ತಥಾ ।
ನಾಸಾವಕ್ತ್ರಗಲೇಷ್ವೇವಮಂಸದ್ವಯಮತಃ ಪರಂ ॥೨೪॥

ಕೂರ್ಪರೇ ಮಣಿಬಂಧೇ ಚ ಹೃದಯೇ ಪಾರ್ಶ್ವಯೋರ್ದ್ವಯೋಃ ।
ನಾಭೌ ಗುಹ್ಯದ್ವಯೇ ಚೈವ ಮೂರ್ವೋರ್ಗುಲ್ಫೌ ಚ ಜಾನುನೀ ॥೨೫॥

ಜಂಘಾದ್ವಯೇ ಚ ಪಾದೌದ್ವಾ ದ್ವಾತ್ರಿಂಶತ್ಸ್ಥಾನಮುತ್ತಮಂ ।
ಅಷ್ಟಮೂರ್ತ್ಯಷ್ಟದಿಗ್ದೇಶಾದಿಕ್ಪಾಲಾನ್ವಸುಭಿಸ್ಸಹ ॥೨೬॥

---

ಬಳಿದುಕೊಳ್ಳಬೇಕು. ಮಧ್ಯಾಹ್ನಕ್ಕೆ ಮುಂಚೆ ಭಸ್ಮಲೇಪನಮಾಡಿಕೊಳ್ಳಬೇಕಾದರೆ ನೀರಿನಿಂದ ಕಲಸಿರಬೇಕು. ಮಧ್ಯಾಹ್ನಾನಂತರ ನೀರಿನಿಂದ ಕಲಸಬೇಕಿಲ್ಲ.॥೧೯-೨೦॥

ಭಸ್ಮಸ್ನಾನಾನಂತರ ಭಸ್ಮತ್ರಿಪುಂಡ್ರಧಾರಣೆಮಾಡಿಕೊಳ್ಳಬೇಕು. ತ್ರಿಪುಂಡ್ರವು ಬ್ರಹ್ಮ, ವಿಷ್ಣು, ಶಿವಾತ್ಮಕವೆಂದು ಭಾವಿಸಬೇಕು. ಮಧ್ಯದ ಮೂರು ಬೆರಳು ಗಳಿಂದಾಗಲಿ ಅಥವಾ ಅನಾಮಿಕ, ಮಧ್ಯಮ, ಅಂಗುಷ್ಠ ಈ ಮೂರು ಬೆರಳುಗಳಿಂದ ಲಾಗಲಿ, ಮೂಲಮಂತ್ರದಿಂದ ಅಭಿಮಂತ್ರಿತವಾದ ಭಸ್ಮವನ್ನು ಮುಖಕ್ಕೆ ವಿಪ್ರನು ಬಳಿದುಕೊಳ್ಳಬೇಕು. ಕ್ಷತ್ರಿಯನು ಶಿರಸ್ಸಿನ ಮೇಲೆ ತ್ರಿಪುಂಡ್ರವನ್ನು ಧರಿಸಬೇಕು. ॥೨೧-೨೨॥

ದೇಹದಲ್ಲಿ ಒಟ್ಟು ಮೂವತ್ತೆರಡು ಅಥವಾ ಹದಿನಾರು ಅಥವಾ ಎಂಟು ಅಥವಾ ಐದು ಸ್ಥಾನಗಳಲ್ಲಿ ಭಸ್ಮವನ್ನು ಹಚ್ಚಿಕೊಳ್ಳಬೇಕು. ಶಿರಸ್ಸು, ಎರಡು ಕಿವಿಗಳು, ಎರಡು ಕಣ್ಣುಗಳು, ಮೂಗು, ಮುಖ, ಕತ್ತು ಅದರ ಹಿಂಭಾಗ, ಎರಡು ಹೆಗಲು, ಎರಡು ಮೊಳಕೈ, ಎರಡು ಮುಂಗೈ, ಎದೆ, ಅದರ ಎರಡು ಪಕ್ಕಗಳು, ಹೊಕ್ಕಳು, ಹಿಂದುಮುಂದಿನ ಎರಡು ಗುಹ್ಯಪ್ರದೇಶಗಳು, ಎರಡು ತೊಡೆಗಳು, ಎರಡು ಮಂಡಿಗಳು, ಎರಡು ಮೊಳಕಾಲುಗಳು, ಎರಡು ಮುಂಗಾಲು, ಎರಡು ಹಿಂಗಾಲು, ಹೀಗೆ ಮೂವತ್ತೆರಡು ಸ್ಥಾನಗಳಾಗುವುವು. ಈ ಮೂವತ್ತೆರಡು

ಧರಾಧ್ರುವಶ್ಚ ಸೋಮಶ್ಚ ಆಪಶ್ಚೈವಾನಿಲೋನಲಃ ।
ಪ್ರತ್ಯೂಷಶ್ಚ ಪ್ರಭಾತಶ್ಚ ವಸವೋಷ್ಟಾವಿತೀರಿತಾಃ ॥೨೭॥

ಏತೇಷಾಂ ನಾಮಮಂತ್ರೇಣ ತ್ರಿಪುಂಡ್ರಂ ಧಾರಯೇದ್ಬುಧಃ ।
ವಿದಧ್ಯಾತ್ಷೋಡಶಸ್ಥಾನೇ ತ್ರಿಪುಂಡ್ರಂ ತು ಸಮಾಹಿತಃ ॥೨೮॥

ಶೀರ್ಷಕೇ ಚ ಲಲಾಟೇ ಚ ಸ್ಕಂದೇ ಚಾಂಸದ್ವಯೋರಿತಿ ।
ಕೂರ್ಪರೇ ಮಣಿಬಂಧೇ ಚ ಹೃದಯೇ ನಾಭಿಪಾರ್ಶ್ವಕೇ ॥೨೯॥

ಪೃಷ್ಠೇ ಚೈಕಂ ಪ್ರತಿಷ್ಠಾಯ ಜಪೇತ್ತತ್ರಾಧಿದೈವತಂ ।
ಶಿವಂ ಭಕ್ತಿಂ ಚ ನಾದಾಖ್ಯಂ ಈಶಂ ನಾದಾಖ್ಯಮೇವಚ ॥೩೦॥

ವಾಮಾದಿನವಶಕ್ತಿಶ್ಚ ಏತಾಃ ಷೋಡಶದೇವತಾಃ ।
ನಾಸತ್ಯೋದಸ್ರಕಶ್ಚೈವಮಶ್ವಿನೌ ದ್ವೌ ಸಮೀರಿತೌ ॥೩೧॥

ಅಥವಾ ಮೂರ್ಧ್ನಿ ಕೇಶೇ ಚ ಕರ್ಣಯೋಃ ಶ್ವಸನೇ ತಥಾ ।
ಬಾಹುದ್ವಯೇ ಚ ಹೃದಯೇ ನಾಭ್ಯಾಮೂರ್ವೋರ್ಯುಗೇ ತಥಾ ॥೩೨॥

---

ಸ್ಥಾನಗಳಿಗೂ ಕ್ರಮವಾಗಿ ಅಷ್ಟಮೂರ್ತಿಗಳು, ಅಷ್ಟದಿಕ್ಪತಿಗಳು, ಅಷ್ಟದೇಶಗಳು ಅಷ್ಟವಸುಗಳು ಹೀಗೆ ಮೂವತ್ತೆರಡು ದೇವತೆಗಳಿರುವುವು. ॥೨೩-೨೪-೨೫-೨೬॥

ಧರಾ, ಧ್ರುವ, ಸೋಮ, ಆಪ, ಅನಿಲ, ಅನಲ, ಪ್ರತ್ಯೂಷ, ಪ್ರಭಾತ ಈ ಎಂಟು ದೇವತೆಗಳೇ ಅಷ್ಟವಸುಗಳು. ಇವುಗಳ ನಾಮೋಚ್ಚಾರಣೆರೂಪವಾದ ಮಂತ್ರದಿಂದ ತ್ರಿಪುಂಡ್ರಧಾರಣೆಮಾಡಿಕೊಳ್ಳಬೇಕು. ಇನ್ನು ಹದಿನಾರು ಸ್ಥಾನಗಳು ಯಾವುವೆಂದರೆ, ॥೨೭-೨೮॥

ತಲೆ, ಹಣೆ, ಕತ್ತು, ಎರಡು ಭುಜಗಳು, ಎರಡು ಮೊಳಕೈಗಳು, ಎರಡು ಮುಂಗೈಗಳು, ಹೃದಯ ಮತ್ತು ಅದರ ಅಕ್ಕಪಕ್ಕ, ನಾಭಿ ಮತ್ತು ಅದರ ಅಕ್ಕಪಕ್ಕ, ಬೆನ್ನು ಈ ಹದಿನಾರು ಸ್ಥಾನಗಳಲ್ಲಿ ಶಿವ, ಭಕ್ತಿ, ನಾದ್ಯ, ಈಶ, ವಾಮಾದಿ ನವಶಕ್ತಿಗಳು, ನಾಸತ್ಯ, ಅಶ್ವಿನರೆಂಬ ಎರಡು ಅಶ್ವಿನೀದೇವತೆಗಳು ಇವು ಆಯಾ ಸ್ಥಾನಗಳ ದೇವತೆಗಳಾಗುವುವು. ॥೨೯-೩೦-೩೧॥

ಅಥವಾ ತಲೆ, ಕೂದಲು, ಎರಡು ಕಿವಿಗಳು, ಮೂಗು, ಎರಡು ತೋಳುಗಳು, ಹೃದಯ, ನಾಭಿ, ಎರಡು ತೊಡೆಗಳು, ಎರಡು ಮೊಳಕಾಲುಗಳು, ಎರಡು ಕಾಲುಗಳು,

ಜಾನುದ್ವಯೋ ಚ ಪದಯೋಃ ಪೃಷ್ಠಭಾಗೇ ಚ ಷೋಡಶ ।
ಶಿವಶ್ಚಂದ್ರಶ್ಚ ರುದ್ರಾರ್ಕೌ ವಿಘ್ನೇಶೋ ವಿಷ್ಣುರೇವ ಚ ॥೩೩॥

ಶ್ರೀಶ್ಚೈವ ಹೃದಯೇಶಶ್ಚ ತಥಾ ನಾಭೌ ಪ್ರಜಾಪತಿಃ ।
ನಾಗಾಶ್ಚ ನಾಗಕನ್ಯಾಶ್ಚ ಉಭಯೋಃ ಋಷಿಕನ್ಯಕಾಃ ॥೩೪॥

ಪಾದಯೋಶ್ಚ ಸಮುದ್ರಾಶ್ಚ ತೀರ್ಥಾಃ ಪೃಷ್ಠೇಽಪಿ ಶಾಸ್ತ್ರತಃ ।
ಏವಂ ಚ ಷೋಡಶ ಧ್ಯಾಯೇದಷ್ಟಸ್ಥಾನಮುಥೋಚ್ಯತೇ ॥೩೫॥

ಗುರುಸ್ಥಾನಂ ಲಲಾಟಂ ಚ ಕರ್ಣದ್ವಯಮನುತ್ತಮಂ ।
ಅಂಸಯುಗ್ಮಂ ಚ ಹೃದಯೇ ನಾಭಿರಿತ್ಯಷ್ಟಮಂ ಭವೇತ್ ॥೩೬॥

ಬ್ರಹ್ಮಾ ಚ ಋಷಯುಸ್ಸಪ್ತ ದೇವತಾಶ್ಚಪ್ರಕೀರ್ತಿತಾಃ ।
ಅಥವಾ ಮಸ್ತಕಂ ಬಾಹುಹೃದಯಂ ನಾಭಿರೇವಚ ॥೩೭॥

ಪಂಚಸ್ಥಾನಾನ್ಯಮೂನ್ಯಾಹುರ್ಭಸ್ಮತತ್ತ್ವವಿದೋ ಜನಾಃ ।
ಯಥಾಸಂಭವನಂ ಕುರ್ಯಾದ್ದೇಶಕಾಲಾದ್ಯಪೇಕ್ಷಯಾ ॥೩೮॥

---

ಬೆನ್ನು ಇವು ಹದಿನಾರು ಸ್ಥಾನಗಳಾಗುವುವು. ಈ ಸ್ಥಾನಗಳಿಗೆ ಕ್ರಮವಾಗಿ ಶಿವ, ಚಂದ್ರ, ರುದ್ರ, ಅರ್ಕ, ವಿಘ್ನೇಶ್ವರ, ವಿಷ್ಣು, ಲಕ್ಷ್ಮೀ, ಪರಬ್ರಹ್ಮ, ಪ್ರಜಾಪತಿ, ನಾಗರು, ನಾಗಕನ್ನಿಕೆಯರು, ಋಷಿ ಮತ್ತು ಋಷಿಕನ್ನಿಕೆಯರು, ಸಮುದ್ರಗಳು, (ಕಾಲು) ತೀರ್ಥಗಳು (ಬೆನ್ನು) ಹೀಗೆ ಹದಿನಾರು ಸ್ಥಾನಗಳಿಗೂ ಹದಿನಾರು ದೇವತೆಗಳು ಉಕ್ತರಾಗಿರುವರು. ಇನ್ನು ಎಂಟು ಸ್ಥಾನಗಳ ಹೆಸರನ್ನು ತಿಳಿಸುವೆನು ಕೇಳು. ॥೩೨-೩೩-೩೪-೩೫॥

ಶಿರಸ್ಸು, ಹಣೆ, ಎರಡು ಕಿವಿಗಳು, ಎರಡು ಭುಜಗಳು, ಹೃದಯ, ಹೊಕ್ಕಳು ಈ ಎಂಟು ಸ್ಥಾನಗಳಿಗೆ ಕ್ರಮವಾಗಿ ಬ್ರಹ್ಮ, ಕಶ್ಯಪಾದಿ ಸಪ್ತರ್ಷಿಗಳು ದೇವತೆಗಳೆನಿಸುವರು. ಅಥವಾ ಹಣೆ, ಎರಡು ಭುಜಗಳು, ಹೃದಯ, ನಾಭಿ ಎಂದು ಐದು ಸ್ಥಾನಗಳಾದರೂ ಭಸ್ಮಧಾರಣೆಗೆ ಯೋಗ್ಯವಾದವುಗಳೆಂದು ಭಸ್ಮತತ್ವವನ್ನು ತಿಳಿದವರು ಹೇಳುವರು. ಆದ್ದರಿಂದ ಭಸ್ಮಧಾರಿಗಳು ದೇಶಕಾಲಗಳನ್ನರಿತು ಯಥಾವಿಧಿಯಾಗಿ ಭಸ್ಮವನ್ನು ಧರಿಸಿಕೊಳ್ಳಬೇಕು. ॥೩೬-೩೭-೩೮॥

ಉದ್ಧೂಲನೇಪ್ಯಶಕ್ತಶ್ಚೇತ್ತ್ರಿಪುಂಡ್ರಾದೀನಿ ಕಾರಯೇತ್ ।
ತ್ರಿನೇತ್ರಂ ತ್ರಿಗುಣಾಧಾರಂ ತ್ರಯಾಣಾಂ ಜನಕಂ ವಿಭುಂ ॥೩೯॥

ಸ್ಮರನ್ನಮಶ್ಶಿವಾಯೇತಿ ಲಲಾಟೇ ತು ತ್ರಿಪುಂಡ್ರಕಂ ।
ಈಶಾಭ್ಯಾಂ ನಮ ಇತ್ಯುಕ್ತ್ವಾ ಪಾರ್ಶ್ವಯೋಶ್ಚ ತ್ರಿಪುಂಡ್ರಕಂ ॥೪೦॥

ಬೀಜಾಭ್ಯಾಂ ನಮ ಇತ್ಯುಕ್ತ್ವಾ ಧಾರಯೇತ್ತು ಪ್ರಕೋಷ್ಠಯೋಃ ।
ಕೂರ್ಪರಾಧಃ ಪಿತೃಭ್ಯಾಂ ಚ ಉಮೇಶಾಭ್ಯಾಂ ತಥೋಪರಿ ॥೪೧॥

ಭೀಮಾಯೇತಿ ತತಃ ಪೃಷ್ಠೇ ಶಿರಸಃ ಪಶ್ಚಿಮೇ ತಥಾ ।
ನೀಲಕಂಠಾಯ ಶಿರಸಿ ಕ್ಷಿಪೇತ್ಸರ್ವಾತ್ಮನೇ ನಮಃ ॥೪೨॥

ಪಾಪಂ ನಾಶಯತೇ ಕೃತ್ಸ್ನಮಪಿ ಜನ್ಮಶತಾರ್ಜಿತಂ ।
ಕರ್ಣೋಪರಿಕೃತಂ ಪಾಪಂ ನಷ್ಟಂ ಸ್ಯಾದ್ಭಸ್ಮಧಾರಣಾತ್ ॥೪೩॥

ಕಂಠೇ ಚ ಧಾರಣಾತ್ಕಂಠೇ ಭೋಗಾದಿಕೃತಪಾತಕಂ ।
ತದ್ಭಸ್ಮಧಾರಣಂ ಮುಖ್ಯಂ ಸರ್ವತ್ರೈವ ತ್ರಿಪುಂಡ್ರಕಂ ॥೪೪॥

---

ಭಸ್ಮೋದ್ಧೂಲನೆಗೆ ಅಶಕ್ತರಾದವರು ಭಸ್ಮತ್ರಿಪುಂಡ್ರವನ್ನು ಧರಿಸಬಹುದು. ಹಣೆಗೆ ಭಸ್ಮತ್ರಿಪುಂಡ್ರವನ್ನಿಡುವಾಗ ತ್ರಿನಯನನನ್ನೂ, ಸತ್ತ್ವರಜಸ್ತಮೋಗುಣಗಳಿಗೆ ಆಧಾರನನ್ನೂ, ಲೋಕತ್ರಯ ಜನಕನನ್ನೂ, ಸರ್ವವ್ಯಾಪಿಯೂ ಆದ ಪರಶಿವನನ್ನು ಸ್ಮರಿಸುತ್ತಾ, ನಮಶ್ಶಿವಾಯ ಎಂದು ಹೇಳುತ್ತಾ ಧರಿಸಬೇಕು. ಈಶಾಭ್ಯಾಂನಮಃ ಎಂಬ ಮಂತ್ರದಿಂದ ಎರಡು ಪಕ್ಕದ ಭುಜಗಳಿಗೂ ಭಸ್ಮವನ್ನಿಡಬೇಕು. ॥೩೯-೪೦॥

ಬೀಜಾಭ್ಯಾಂ ನಮಃ ಎನ್ನುತ್ತಾ ಮುಂಗೈಗಳಿಗೂ, ಪಿತೃಭ್ಯಾಂ ನಮಃ ಎನ್ನುತ್ತಾ ಮೊಳಕೈಗಳಿಗೂ, ಉಮೇಶಾಭ್ಯಾಂ ನಮಃ ಎನ್ನುತ್ತಾ ತೋಳುಗಳಿಗೂ, ಭೀಮಾಯ ನಮಃ ಎನ್ನುತ್ತಾ ಬೆನ್ನಿಗೂ, ನೀಲಕಂಠಾಯ ನಮಃ ಎನ್ನುತ್ತಾ ತಲೆಯ ಹಿಂಭಾಗಕ್ಕೂ, ಸರ್ವಾತ್ಮನೇ ನಮಃ ಎಂದು ಶಿರಸ್ಸಿಗೂ ಭಸ್ಮಧಾರಣೆ ಮಾಡಿಕೊಳ್ಳಬೇಕು. ॥೪೧-೪೨॥

ಕಿವಿಗಳ ಮೇಲೆ ಭಸ್ಮವನ್ನು ಧರಿಸುವುದರಿಂದ ಅನೇಕ ಜನ್ಮಗಳಿಂದ ಸಂಪಾದಿಸಿದ ಪಾಪರಾಶಿಯೆಲ್ಲವೂ ಸಂಪೂರ್ಣವಾಗಿ ನಾಶಹೊಂದುವುದು. ಹಾಗೆಯೇ ಕಂಠಪ್ರದೇಶದಲ್ಲಿ ಧಾರಣೆಮಾಡುವುದರಿಂದ ಭೋಗಕಾಲದಲ್ಲಿ ಒದಗಿದ ಸಕಲ

ಬ್ರಹ್ಮವಿಷ್ಣುಮಹೇಶಾತ್ಮತ್ರ್ಯಗ್ನೀನಾಂ ಚ ಧಾರಣಂ ।
ಗುಣಲೋಕತ್ರಯಾಣಾಂ ಚ ಧಾರಣಂ ತೇನ ವೈ ಕೃತಂ ॥೪೫॥

ತೇನಾಧೀತಂ ಗುರೋಶ್ಚೈವ ತೇನ ಸರ್ವಮನುಷ್ಠಿತಂ ।
ಯೇನ ವಿಪ್ರೇಣ ಶಿರಸಿ ತ್ರಿಪುಂಡ್ರಂ ಭಸ್ಮನಾಕೃತಂ ॥೪೬॥

ತ್ಯಕ್ತವರ್ಣಾಶ್ರಮಾಚಾರೋ ಲುಪ್ತವರ್ಣಕ್ರಿಯೋಽಪಿ ಯಃ ।
ಸಕೃನ್ನಿರ್ಮುಕ್ತಿಕಂ ಪುಂಡ್ರಂ ಧಾರಣಾತ್ಸೋಽಪಿ ಮುಚ್ಯತೇ ॥೪೭॥

ಯೇ ಭಸ್ಮಧಾರಣಂ ಮುಕ್ತ್ವಾ ಕರ್ಮ ಕುರ್ವಂತಿ ಮಾನವಾಃ ।
ತೇಷಾಂ ನಾಸ್ತಿ ವಿನಿರ್ಮೋಕ್ಷಃ ಸಂಸಾರಾಜ್ಜನ್ಮಕೋಟಿಭಿಃ ॥೪೮॥

ಮಹಾಪಾತಕಯುಕ್ತಾನಾಂ ಪೂರ್ವಜನ್ಮಸು ಸರ್ವತಃ ।
ತ್ರಿಪುಂಡ್ರೋದ್ಧೂಲನೇ ದ್ವೇಷೋ ಜಾಯತೇ ಸುದೃಢಂ ಬುಧಾಃ ॥೪೯॥

ಯೇಷಾಂ ದ್ವೇಷೋ ಭವೇದ್ಬ್ರಹ್ಮನ್ ಲಲಾಟೇ ಭಸ್ಮದರ್ಶನಾತ್ ।
ತೇಷಾಮುತ್ಪತ್ತಿಸಾಂಕರ್ಯಮನುಮೇಯಂ ವಿಪಶ್ಚಿತಾ ॥೫೦॥

---

ಪಾತಕವೂ ಪರಿಹಾರವಾಗುವುದು. ಆದ್ದರಿಂದಲೇ ಮಾನವರು ಸರ್ವದಾ ಭಸ್ಮಧಾರಣೆ ಮಾಡಬೇಕು. ॥೪೩-೪೪॥

ಯಾವ ಬ್ರಾಹ್ಮಣನು ತನ್ನ ಶಿರಸ್ಸಿನಲ್ಲಿ ಭಸ್ಮತ್ರಿಪುಂಡ್ರವನ್ನಿಡುವನೊ, ಅವನು ಬ್ರಹ್ಮ ವಿಷ್ಣು ರುದ್ರರೆಂಬ ತ್ರಿಮೂರ್ತಿಗಳನ್ನೂ, ವೇದತ್ರಯಗಳನ್ನೂ ಅಗ್ನಿತ್ರಯಗಳನ್ನೂ, ಗುಣತ್ರಯ ಲೋಕತ್ರಯಗಳನ್ನೂ ಧಾರಣೆಮಾಡಿದಂತಾಗುವುದು. ಅಲ್ಲದೆ ಅವನು ಸಕಲ ವಿದ್ಯೆಯನ್ನೂ ಗುರುಮುಖದಿಂದ ಪಡೆದಂತಾಗುವನು. ॥೪೫-೪೬॥

ಭಸ್ಮತ್ರಿಪುಂಡ್ರಧಾರಿಯು, ವರ್ಣಾಶ್ರಮಧರ್ಮಹೀನನಾಗಿದ್ದರೂ, ಧರ್ಮಲೋಪಮಾಡಿದ್ದರೂ, ಭಸ್ಮಧಾರಣಮಹಿಮೆಯಿಂದಲೇ ಅವನಿಗೆ ಮುಕ್ತಿಯು ಲಭಿಸುವುದು. ಭಸ್ಮಧಾರಣೆಯಿಲ್ಲದೆ ಕರ್ಮಾನುಷ್ಠಾನಮಾಡುವವರಿಗೆ ಎಷ್ಟು ಜನ್ಮಗಳು ಕಳೆದರೂ ಮುಕ್ತಿ ದೊರಕಲಾರದು. ॥೪೭-೪೮॥

ಯಾರು ಈ ಜನ್ಮದಲ್ಲಿ ಮಹಾಪಾಪಿಗಳೆನಿಸಿರುವರೋ ಅವರು ಹಿಂದಿನ ಜನ್ಮಗಳಲ್ಲಿ ಭಸ್ಮತ್ರಿಪುಂಡ್ರಧಾರಣೆಯನ್ನು ದ್ವೇಷಿಸಿದ್ದರೆಂದು ಭಾವಿಸಬೇಕು.

ಯೇ ಭಸ್ಮಧಾರಣಂ ದೃಷ್ಟ್ವಾ ನರಾಃ ಕುರ್ವಂತಿ ತಾಡನಂ ।
ತೇಷಾಂ ಚಂಡಾಲತೋ ಜನ್ಮ ಬ್ರಹ್ಮನ್ನೂಹ್ಯಂ ವಿಪಶ್ಚಿತಾ ॥೫೧॥

ಯೇಷಾಂ ನಾಸ್ತಿ ಮುನೇ ಶ್ರದ್ಧಾ ಶ್ರೌತೇ ಭಸ್ಮನಿ ಸರ್ವದಾ ।
ಗರ್ಭಾಧಾನಾದಿಸಂಸ್ಕಾರಸ್ತೇಷಾಂ ನಾಸ್ತೀತಿ ನಿಶ್ಚಯಃ ॥೫೨॥

ತ್ರಿಪುಂಡ್ರಂ ಯೇ ವಿನಿಂದಂತಿ ನಿಂದಂತಿ ಶಿವಮೇವ ತೇ ।
ಧಾರಯಂತಿ ಚ ಯೇ ಭಕ್ತ್ಯಾ ಧಾರಯಂತಿ ತಮೇವ ತೇ ॥೫೩॥

ಧಿಗ್ಭಸ್ಮರಹಿತಂ ಫಾಲಂ ಧಿಗ್ಗ್ರಾಮಮಶಿವಾಲಯಂ ।
ಧಿಗನೀಶಾರ್ಚನಂ ಜನ್ಮ ಧಿಗ್ವಿದ್ಯಾಮಶಿವಾಶ್ರಯಾಂ ॥೫೪॥

ರುದ್ರಾಗ್ನೇರ್ಯತ್ಪರಂ ವೀರ್ಯಂ ತದ್ಭಸ್ಮ ಪರಿಕೀರ್ತಿತಂ ।
ತಸ್ಮಾತ್ಸರ್ವೇಷು ಲೋಕೇಷು ವೀರ್ಯವಾನ್ ಭಸ್ಮಸಂಯುತಃ ॥೫೫॥

ಭಸ್ಮನಿಷ್ಠಸ್ಯ ದಹ್ಯಂತೇ ದೋಷಾ ಭಸ್ಮಾಗ್ನಿಸಂಗಮಾತ್ ।
ಭಸ್ಮಸ್ನಾನವಿಶುದ್ಧಾತ್ಮಾ ಭಸ್ಮನಿಷ್ಠ ಇತಿ ಸ್ಮೃತಃ ॥೫೬॥

---

ಲಲಾಟದಲ್ಲಿ ಭಸ್ಮಧಾರಣೆಮಾಡಿರುವವರನ್ನು ಯಾರು ದ್ವೇಷಿಸುವರೋ, ಅವರು ವ್ಯಭಿಚಾರದಿಂದ ಜನಿಸಿದವರೆಂದು ಊಹಿಸಬೇಕಾಗುತ್ತದೆ. ॥೪೯-೫೦॥

ಯಾರು ಭಸ್ಮಧಾರಿಯನ್ನು ನೋಡಿದೊಡನೆಯೇ ಅವನನ್ನು ಹೊಡೆಯಲುದ್ಯುಕ್ತರಾಗುವರೋ ಅವರು ಚಂಡಾಲಜನ್ಮದವರೆಂದು ತಿಳಿಯಬೇಕು. ಶ್ರುತ್ಯುಕ್ತವಾದ ಭಸ್ಮದಲ್ಲಿ ಆದರವಿಲ್ಲದವರಿಗೆ ಗರ್ಭಾಧಾನಾದಿ ಸಂಸ್ಕಾರಗಳು ನಡೆದಿಲ್ಲವೆಂದು ಭಾವಿಸಬೇಕು. ॥೫೧-೫೨॥

ತ್ರಿಪುಂಡ್ರವನ್ನು ನಿಂದಿಸುವವನು ಶಿವನನ್ನು ನಿಂದಿಸಿದಂತೆಯೇ. ಅದನ್ನು ಧರಿಸಿದವನು ಶಿವನನ್ನು ಧರಿಸಿದಂತೆಯೇ ಸರಿ. ಭಸ್ಮರಹಿತವಾದ ಹಣೆಯನ್ನೂ ಶಿವಾಲಯವಿಲ್ಲದ ಗ್ರಾಮವನ್ನೂ, ಈಶ್ವರಾರ್ಚನೆ ಮಾಡದ ಜನ್ಮವನ್ನೂ, ಶಿವ ವಿಷಯಕವಲ್ಲದ ವಿದ್ಯೆಯನ್ನೂ ಧಿಕ್ಕರಿಸಬೇಕು. ॥೫೩-೫೪॥

ರುದ್ರಾಗ್ನಿಯ ವೀರ್ಯವೇ ಈ ಭಸ್ಮ. ಆದ್ದರಿಂದಲೇ ಭಸ್ಮಧಾರಿಯಾದವನು ಸರ್ವಲೋಕಗಳಲ್ಲಿಯೂ ಶೂರನೆನಿಸುವನು. ಭಸ್ಮಧಾರಿಯಾದವನಿಗೆ ಸಮಸ್ತ

॥ ಶ್ರೀ ಸ್ಕಂದ ಉವಾಚ ॥

ಅಷ್ಟಸ್ಥಾನಧೃತಂ ತ್ರಿಪುಂಡ್ರಮಲಿಕೇ ಸ್ಯಾದಷ್ಟಮೂರ್ತಿಪ್ರಿಯಂ
ತದ್ವಾದ್ವಾದಶಭಾನುದೈವತಮುಮೇ ತದ್ವಾದಶಾಂಗೈರ್ಧೃತಂ ।
ಮನ್ಯೇ ಷೋಡಶಶೀತಲಿಂಗಕಲಯಾ ಧಾರ್ಯಂ ತ್ರಿಪುಂಡ್ರಂ ತನೌ
ದ್ವಾತ್ರಿಂಶತ್ಸ್ಥಿತವರ್ಷ್ಮಣಿ ತ್ರಿಭುವನಾಧೀಶಾಸ್ಪದಂ ಪ್ರಾಪ್ನುಯಾತ್ ॥೫೭॥

ಧೃತಂ ಲಲಾಟೇಕ್ಷಿ ದಧಾತಿ ಫಾಲೇ
ಪಾಣಾವಥೈಣಂ ಶಿರಸೀಂದುಗಂಗೇ ।
ವಕ್ಷಃ ಸುಚಕ್ಷುಶ್ರವಸೋರುಹಾರಂ
ಹರೋ ಭವೇದ್ಭೂತಿವಿಭೂತಿಭಾನ್ಯೈಃ ॥೫೮॥

ಯೋ ವಹ್ನಿಸಪ್ತಕಮನುಪ್ರಥಿತೋರುಭಸ್ಮ
ಭೀಷಾ ತ್ರಿಯಾಯುಷಮನುಪ್ರಥಿತೋರುಪುಂಡ್ರಃ ।

---

ಪಾಪಗಳೂ ಧ್ವಂಸವಾಗುವುವು. ಏಕೆಂದರೆ ಭಸ್ಮವೇ ಒಂದು ಅಗ್ನಿ. ಭಸ್ಮಸ್ನಾನ ದಿಂದ ಶುದ್ಧನಾದವನನ್ನೇ ಭಸ್ಮನಿಷ್ಠನೆಂದು ಹೇಳಬೇಕು. ॥೫೫-೫೬॥

ಪಾರ್ವತಿಯೇ, ಮೇಲೆ ಹೇಳಿದಂತೆ ಎಂಟು ಅವಯವಗಳಲ್ಲಿ ಭಸ್ಮಧಾರಣೆ ಮಾಡಿದವನು ಅಷ್ಟಮೂರ್ತಿಯಾದ ಶಂಕರನಿಗೆ ಪ್ರಿಯನಾಗುವನು. ಹನ್ನೆರಡು ಕಡೆ ಭಸ್ಮವನ್ನು ಧರಿಸಿದವನು ದ್ವಾದಶಾದಿತ್ಯರಲ್ಲಿ ಐಕ್ಯವಾಗುವನು. ಹದಿನಾರು ಸ್ಥಾನಗಳಲ್ಲಿ ಭಸ್ಮವನ್ನು ಧರಿಸಿದವರು ಷೋಡಶಕಲಾವಿಶಿಷ್ಟನಾದ ಚಂದ್ರನಂತೆ ಶೋಭಿಸುವರು. ಮೂವತ್ತೆರಡು ಸ್ಥಾನಗಳಲ್ಲಿ ಭಸ್ಮವನ್ನು ಧರಿಸಿದವನು ಲೋಕೈಕ ರಕ್ಷಕನಾದ ಶಂಕರನ ಸ್ಥಾನವನ್ನು ಹೊಂದುವನು. ॥೫೭॥

ಹಣೆಯಲ್ಲಿ ಭಸ್ಮಧರಿಸಿದವನು ಹಣೆಗಣ್ಣಾಗುವನು. (ಫಾಲಲೋಚನ) ಕೈಗೆ ಧರಿಸಿದವನು ಕೈಯ್ಯಲ್ಲಿ ಹರಿಣವನ್ನು ಹೊಂದುವನು. ತಲೆಯಲ್ಲಿ ಭಸ್ಮ ವಿಟ್ಟವನಿಗೆ ಗಂಗಾ ಮತ್ತು ಚಂದ್ರರು ಶಿರದಲ್ಲಿ ನಿಲ್ಲುವರು. ಭಸ್ಮವು ಎದೆಯಲ್ಲಿ ನಿಂತರೆ ಅವರಿಗೆ ಆದಿಶೇಷನೇ ಹಾರವಾಗುವನು. ಈರೀತಿ ವಿಭೂತಿ ಧಾರಣೆಯಿಂದ ಈಶ್ವರ ಭಕ್ತರು ಕ್ರಮವಾಗಿ ಈಶ್ವರಸಾರೂಪ್ಯವನ್ನೇ ಪಡೆಯುವರು. ॥೫೮॥

'ಅಗ್ನಿರಿತಿಭಸ್ಮ' ಮುಂತಾದ ಏಳು ಮಂತ್ರಗಳಿಂದ ಭಸ್ಮೋದ್ಧೂಲನವನ್ನೂ ತ್ರಿಯಾಯುಷಮಿತ್ಯಾದಿ ಮಂತ್ರಗಳಿಂದ ತ್ರಿಪುಂಡ್ರವನ್ನೂ ಯಾರು ಧರಿಸುವರೋ,

ಫಾಲೈಣವಾಹಸಖ ಏಣ ಕೃತಾಂಕಮೌಲಿ
ರೇಣೀದೃಶಾರ್ಧತನುರೇಣಕರೋ ಭವೇತ ॥೫೯॥

ತ್ರೈವರ್ಣಿಕಾನಾಮಿದಮೇವ ಭಸ್ಮ।
ಧಾರ್ಯಂ ಸದಾ ಶ್ರೌತಭವಂ ಗೃಹಸ್ಥೈಃ ॥೬೦॥

ವಿರಜಾನಲಂ ಸಮಿದ್ಭವಂ ವಾ
ಸ ಹಿ ವರ್ಣಿಃ ಕಿಲ ಧಾರಯೇದ್ವಿಭೂತಿಂ।
ಸ್ಮೃತಿ ಜಾತಾನಲಭಸ್ಮಧಾರ್ಯ
ಮಾಹು ರ್ಗೃಹಿಣೋ ವೈ ನಿಯಮೇನ ಸರ್ವಥಾ ಹಿ ॥೬೧॥

ವನದಾಹೋತ್ಥಭವಂ ವನೇಚರೋ
ಯತಯಸ್ಸರ್ವಗತಂ ಸಿತಂ ಸದಾ।
ಅತಿವರ್ಣಾಶ್ರಮಧರ್ಮತತ್ಪರಃ
ಪಿತೃಕಾಂತಾರಗತಂ ವಿಲೇಪಯೇತ್ ॥೬೨॥

---

ಅವರ ಹಣೆಯಲ್ಲಿ ಅಗ್ನಿಯೂ, ತಲೆಯಲ್ಲಿ ಚಂದ್ರನೂ, ವಾಮಭಾಗದಲ್ಲಿ ಹರಿಣಾಕ್ಷಿ ಯಾದ ಪಾರ್ವತಿಯೂ, ಕೈಯ್ಯಲ್ಲಿ ಜಿಂಕೆಯೂ ಬಂದು ನಿಲ್ಲುವುವು. ಅಂದರೆ ಅವರು ಸಾಕ್ಷಾಚ್ಛಂಕರಸ್ವರೂಪರೇ ಆಗುವರು. ॥೫೯॥

ಬ್ರಾಹ್ಮಣ, ಕ್ಷತ್ರಿಯ ವೈಶ್ಯರೆಂಬ ತ್ರೈವರ್ಣಿಕರಲ್ಲಿಯೂ ಗೃಹಸ್ಥರಾದವರು ಸದಾ ಶ್ರೌತಾಗ್ನಿಯಿಂದ ಹುಟ್ಟಿದ ಭಸ್ಮವನ್ನು ಧರಿಸಬಹುದು. ಬ್ರಹ್ಮಚಾರಿ ಯಾದವನು ದೂಳಿಲ್ಲದ ಅಗ್ನಿಯಿಂದ ಹುಟ್ಟಿದ ಭಸ್ಮವನ್ನಾಗಲಿ, ಸಮಿದಾಧಾನ ಮಾಡುವ ಅಗ್ನಿಕಾರ್ಯದ ಭಸ್ಮವನ್ನಾಗಲಿ ಧರಿಸಬಹುದು. ಗೃಹಸ್ಥರಾದವರು ಮಾತ್ರ ಗೃಹ್ಯಾಗ್ನಿಯಿಂದ ಲಭಿಸಿದ ಭಸ್ಮವನ್ನೇ ಧರಿಸಬೇಕೆಂಬ ನಿಯಮವಿದೆ. ॥೬೦-೬೧॥

ವಾನಪ್ರಸ್ಥಾಶ್ರಮಿಯು ದಾವಾಗ್ನಿಯ ಭಸ್ಮವನ್ನೂ, ಸಂನ್ಯಾಸಿಗಳು ಶುಭ್ರವಾದ ಯಾವ ಭಸ್ಮವನ್ನಾಗಲಿ ಧರಿಸಬಹುದು. ಆದರೆ ವೈರಾಗ್ಯದಿಂದ ಅತ್ಯಾಶ್ರಮಿಯಾದವನು ಸ್ಮಶಾನಗತವಾದ ಭಸ್ಮವನ್ನೂ ಸಹ ಲೇಪಿಸಿಕೊಳ್ಳಬೇಕು. ॥೬೨॥

ವಿಪ್ರಾಣಾಂ ವಚನಾಗ್ನಿಸಂಭವಮುನೇಧಾರ್ಯಂ ತ್ರಿಪುಂಡ್ರಾತ್ಮನಾ
ಭಸ್ಮೈನಾಘಹರಂ ಭವೇತ ಹಿತಕ್ಷತ್ಪಾದೋದ್ಭವಾನಾಂ ಸದಾ ।
ಸಂಕೀರ್ಣೇಷ್ವಪಿ ರಥ್ಯಪಥ್ಯವಿಹಿತಂ ಭಸ್ಮೈವ ತತ್ಪಾವನಂ
ಧನ್ಯಾನಾಮಿದಮೇವ ಮಂಗಲಕರಂ ಸತ್ಪಾಲಲಿಪ್ತಂಮುನೇ ॥೬೩॥

ಭಸ್ಮತ್ರಿಪುಂಡ್ರಪರಿಮಂಡಿತತುಂಡಗಂಡ
ಶ್ರೀಬಾಹುದಂಡಯುಗಳಾಂಸಬೃಹತ್ಪಿಚಂಡಃ ।
ಚಂಡಾಂಶುಸೂನುನಿಲಯಂ ನ ಸ ಜಾತು ಪಶ್ಯೇ
ದಿಂದುಪ್ರಭಾಸರಸವಮೌಲಿಕಟಾಕ್ಷಷಂಡೈಃ ॥೬೪॥

ಭವೇತ್ಸ ವಿಭವಾಧಿಕಃ ಪ್ರತಿಭವೇಪಿ ಭಾವಾದರೋ
ಭವೋದ್ಭವಸಮರ್ಚನಪ್ರಭವಿತಾತ್ಮಭಾವಸ್ಸದಾ ।
ಭಜೇತ ಭಸಿತಂ ಸಿತಂ ಯದಿ ತದಾಂತ್ಯಜಃ ಸಂತ್ಯಜನ್
ಭವೇತ ಕಿಲ ವಾನರಃ ಪರಮಕಾತರಃ ಪಾಮರಃ ॥೬೫॥

---

ದ್ವಿಜರೆನಿಸಿದವರು ತಾವು ಔಪಾಸನೆ ಮಾಡಿದ ಅಗ್ನಿಯಿಂದ ಉತ್ಪನ್ನವಾದ ಭಸ್ಮವನ್ನೇ ತ್ರಿಪುಂಡ್ರಾಕಾರದಲ್ಲಿ ಧರಿಸಬೇಕು. ಶೂದ್ರರೂ ಮತ್ತು ಇತರ ಎಲ್ಲಾ ಜಾತಿಯವರೂ ಪವಿತ್ರವಾದ ಭೂಮಿಯಲ್ಲಿ ದೊರೆತ ಭಸ್ಮದಿಂದ ತ್ರಿಪುಂಡ್ರವನ್ನು ಇಡಬಹುದು. ಒಟ್ಟನಲ್ಲಿ ಇವೆರಡೂ ಮಂಗಳಕರವಾದವುಗಳೇ ಸರಿ. ॥೬೩॥

ಯಾರು ತಮ್ಮ ಮುಖ, ಶಿರಸ್ಸು, ತೋಳು, ಎದೆ, ಭುಜ, ಉದರ ಮುಂತಾದ ಭಾಗಗಳಲ್ಲಿ ಭಸ್ಮತ್ರಿಪುಂಡ್ರವನ್ನು ಧರಿಸುವರೋ, ಅವರು ಯಮಸದನ ವನ್ನು ಎಂದೂ ನೋಡಲಾರರು. ಅದೂ ಅಲ್ಲದೆ ಅವರು ಪರಶಿವನ ಪವಿತ್ರವಾದ ಮತ್ತು ಚಂದ್ರಪ್ರಭೆಯಿಂದ ರಂಜಿಸುವ ಕಟಾಕ್ಷಲೇಶಕ್ಕೆ ಪಾತ್ರರಾಗಿ ಶಿವಸಾಯುಜ್ಯ ವನ್ನು ಸೇರುವರು. ॥೬೪॥

ಶುಭ್ರವೂ ಪವಿತ್ರವೂ ಆದ ಭಸ್ಮವನ್ನು ಧರಿಸಿದವನು ಪ್ರತಿಜನ್ಮದಲ್ಲಿಯೂ ಅತ್ಯೈಶ್ವರ್ಯಶಾಲಿಯಾಗಿದ್ದು, ಶಿವಭಕ್ತಿಯನ್ನು ಹೆಚ್ಚಿಸಿಕೊಳ್ಳುತ್ತಾ ಈಶ್ವರಾರ್ಚನೆ ಯಿಂದ ಆತ್ಮತೇಜಸ್ಸನ್ನು ಹೆಚ್ಚಿಸಿಕೊಳ್ಳುವನು. ಆದರೆ ಭಸ್ಮಧಾರಣೆಯಲ್ಲಿ ವಿಮುಖ ನಾದವನು ಮಾತ್ರ ಅಂತ್ಯಜನಂತಾಗಿಯೋ, ಅಥವಾ ಕಪಿಯಾಗಿಯೋ, ಸರ್ವದಾ ಭಯಗ್ರಸ್ತನಾಗಿರುವ ಅಜ್ಞಾನಿಯಾಗಿಯೋ ಜನ್ಮತಾಳಿ ಸಂಕಟಪಡುವನು. ॥೬೫॥

ಶಿವೇ ಭಸಿತಭೂಷಣೇ ಭವತಿ ಭಾಗ್ಯಪೂರ್ಣೋ ನರೋ
ವರಶ್ರುತಿಪರಾಯಣೋಽಪ್ಯಹಹ ಭಸ್ಮಪುಂಡ್ರೋಜ್ಝಿತಃ ।
ದ್ವಿಜಾಧಮಕುಲಾನಲಪ್ರಬಲಧೂಮಕೇತುರ್ಭವೇತ್
ಕದಾಪಿ ನರಕಾಲಯಾನ್ನಹಿ ಸ ಜಾತು ಮುಚ್ಯೇವಪಿ ॥೬೬॥

ಧೃತಸಿತಭಸಿತತ್ರಿಪುಂಡ್ರಭೂಷಾ
ಯತಿಮತಿಗತಿದಾಯಿನಸ್ತು ತೇಶಾಃ ।
ಕೃತವರಸುಕೃತಾ ಜಿತಾರಿವರ್ಗಾ
ಮಿತಹಿತತಪಸಾ ಭವಂತಿ ಹಾರಾಃ ॥೬೭॥

ನ ಸ್ನಾನ ಶೌಚಾಚಮನಕ್ರಿಯಾಭಿಃ
ಶುದ್ಧ್ಯೇತ ವಿಧ್ಯಾಪಿ ಕೃತಾಕೃತಾಭಿಃ ।
ಭಸ್ಮತ್ರಿಪುಂಡ್ರೋಜ್ಝಿತಫಾಲಗಾತ್ರಃ
ಪಾತ್ರಂ ನ ಸಾಮುಷ್ಮಿಕಪುಣ್ಯಹೇತೌ ॥೬೮॥

---

ಈಶ್ವರನನ್ನು ವಿಭೂತಿಯಿಂದ ಅಲಂಕರಿಸಿ ಪೂಜಿಸಿದ ಮಾನವನೂ ಭಾಗ್ಯಪೂರ್ಣನಾಗುವನು. ಎಷ್ಟೇ ವೇದವೇದಾಂತಗಳಲ್ಲಿ ನಿಷ್ಣಾತನಾಗಿದ್ದರೂ, ಭಸ್ಮತ್ರಿಪುಂಡ್ರವಿರಹಿತನಾಗಿದ್ದರೆ, ಆ ಬ್ರಾಹ್ಮಣನು ತನ್ನ ವಂಶವನ್ನೇ ನಾಶಗೊಳಿಸುವ ಧೂಮಕೇತುವಿನಂತಾಗುವನು. ಅಂತಹವನಿಗೆ ಎಂದೂ ನರಕವಾಸವು ತಪ್ಪಲಾರದು. ॥೬೬॥

ಶುಭ್ರವಾದ ಭಸ್ಮತ್ರಿಪುಂಡ್ರವನ್ನಿಟ್ಟು, ಶಿವಾರ್ಚಕರಾದವರು ಯತಿಗಳಿಗೂ ಮುಕ್ತಿ ಕಾಣಿಸುವರು. ಶಂಕರನನ್ನು ಸ್ತುತಿಸುತ್ತಾ, ಪುಣ್ಯಕಾರ್ಯಗಳನ್ನಾಚರಿಸಿ, ಜಿತೇಂದ್ರಿಯರಾದವರು ಕಾಲಾಂತರದಲ್ಲಿ ಹರಸದೃಶರೆನಿಸಿ ಹರಸ್ವರೂಪರೇ ಆಗುವರು. ॥೬೭॥

ವಿಧಿವತ್ತಾಗಿ, ಶೌಚಕ್ರಿಯೆಗಳು, ಆಚಮನಾದಿ ಶುದ್ಧೀಕರಣ ಕಾರ್ಯಗಳು ಇವುಗಳನ್ನು ನಡೆಸುವುದರಿಂದ ಮಾನವರು ಶುದ್ಧರಾಗುವುದಿಲ್ಲ. ಬಿಟ್ಟರೆ ಪತಿತರೂ ಎನಿಸುವುದಿಲ್ಲ. ಆದರೆ ಭಸ್ಮತ್ರಿಪುಂಡ್ರರಹಿತವಾದ ಫಾಲಪ್ರದೇಶವುಳ್ಳವನಿಗೆ ಮಾತ್ರ ಆಮುಷ್ಮಿಕವಾದ ಪುಣ್ಯಸಂಪಾದನೆಯಲ್ಲಿ ಎಂದಿಗೂ ಯಾವ ಅಧಿಕಾರವು ಲಭಿಸಲಾರದು. ॥೬೮॥

ವೀತೈಷಣಸ್ತ್ರಿಷವಣಂ ಕಿಲ ಭಸ್ಮಭೂಷೋ
ಯೋಷಾ ವಿರಕ್ತಹೃದಯಃ ಕಿಲಭಕ್ತವರ್ಯಃ ।
ಶಕ್ತಃ ಸಮುಕ್ತಿಪದವೀಮಭಿವೀಕ್ಷಿತುಂ ವೈ
ತ್ರ್ಯಕ್ಷ ಪ್ರಸಾದಮಖಿಲಂ ಸ ತದಾ ಲಭೇತ ॥೬೯॥

ಇತಿ ಶ್ರೀಶಿವರಹಸ್ಯೇ ದಶಮಾಂಶೇ ಪೂರ್ವಾರ್ಧೇ ಭಸ್ಮಸ್ನಾನ
ತ್ರಿಪುಂಡ್ರವಿಧಿವರ್ಣನಂ ನಾಮ ಷಷ್ಠೋಽಧ್ಯಾಯಃ

---

ಪಶು, ಪತ್ನೀ ಪುತ್ರಾದಿಗಳಲ್ಲಿ ಆಸೆಯನ್ನು ಬಿಟ್ಟು ತ್ರಿಕಾಲಸ್ನಾನ, ಭಸ್ಮಧಾರಣೆ ಇವುಗಳಲ್ಲಿ ಆಸಕ್ತನಾಗಿ, ಸ್ತ್ರೀಹವ್ಯಾಸವನ್ನು ತೊರೆದು ಸದಾಶಿವನ ಪ್ರಸಾದವನ್ನೇ ಅಭಿಲಷಿಸುತ್ತಿರುವವನಿಗೆ ಮಾತ್ರ ಮುಕ್ತಿಸಾಮ್ರಾಜ್ಯವನ್ನು ಸೂರೆಗೊಳ್ಳುವ ಸಾಮರ್ಥ್ಯವಿರುವುದು. ಹೀಗಿಲ್ಲದಿರುವವರಿಗೆ ಮುಕ್ತಿಯು ಎಂದೂ ಲಭಿಸಲಾರದು. ಎಂದು ಕುಮಾರಸ್ವಾಮಿಯು ಜೈಗೀಷವ್ಯಮಹರ್ಷಿಗೆ ಭಸ್ಮಧಾರಣೆಯ ಪ್ರಾಶಸ್ತ್ಯವನ್ನು ವಿವರವಾಗಿ ಹೇಳಿದನು. ॥೬೯॥

ಇಲ್ಲಿಗೆ ಶ್ರೀ ಶಿವರಹಸ್ಯದ ದಶಮಾಂಶದಲ್ಲಿ ಆರನೆಯ ಅಧ್ಯಾಯವು
ಮುಗಿದುದು.

॥ ಶ್ರೀಃ ॥

॥ ಶ್ರೀ ಶಿವಾಯನಮಃ ॥

# ಅಥ ಶ್ರೀಶಿವರಹಸ್ಯೇ

## ಈಶಾನಾಖ್ಯೇ

## ದಶಮಾಂಶಪೂರ್ವಾರ್ಧೇ

## ಸಪ್ತಮೋಽಧ್ಯಾಯಃ

॥ ಶ್ರೀಸ್ಕಂದ ಉವಾಚ ॥

ಮಾನಸ್ತೋಕೇತಿ ಮಂತ್ರೇಣ ಮಂತ್ರಿತಂ ಭಸ್ಮಧಾರಯೇತ್ ।
ಊರ್ಧ್ವಪುಂಡ್ರಂ ಭವೇತ್ಸಾಮಮಧ್ಯಪುಂಡ್ರಂ ಯಜೂಂಷಿ ಚ ॥೧॥

ಅಧಃಪುಂಡ್ರಮೃಚಃ ಸಾಕ್ಷಾತ್ತಸ್ಮಾತ್ಪುಂಡ್ರಂ ತ್ರಿಯಾಯುಷಂ ।
ತ್ರಿಯಾಯುಷಾಣಿ ಕುರ್ವೀತ ಲಲಾಟೇ ಭುಜಯೋರ್ದ್ವಯೋಃ ॥೨॥

ನಾಭೌ ಶಿರಸಿ ಹೃತ್ಪಾರ್ಶ್ವೇ ಬ್ರಾಹ್ಮಣಾಃ ಕ್ಷತ್ರಿಯಾಸ್ತಥಾ ।
ವೈಶ್ಯಾಸ್ತ್ರಿಯಂಬಕೇನೈವ ಶೂದ್ರಾಃ ಪಂಚಾಕ್ಷರೇಣ ತು ॥೩॥

---

## ಏಳನೆಯ ಅಧ್ಯಾಯ

'ಮಾನಸ್ತೋಕೆ ತನಯೇ' ಎಂಬ ಮಂತ್ರದಿಂದ ಪರಿಪೂತವಾದ ಭಸ್ಮವನ್ನು 'ತ್ರ್ಯಾಯುಷಂ ಜಮದಗ್ನೇಃ' ಎಂಬ ಮಂತ್ರದಿಂದ ಲಲಾಟಾದಿಗಳಲ್ಲಿ ಧರಿಸಿಕೊಳ್ಳಬೇಕು. ಅಧಃಪುಂಡ್ರ, ಮಧ್ಯಪುಂಡ್ರ, ಊರ್ಧ್ವಪುಂಡ್ರಗಳು ಕ್ರಮವಾಗಿ ಋಗ್ವೇದ, ಯಜುರ್ವೇದ, ಸಾಮವೇದಗಳನ್ನು ಸೂಚಿಸುವುಗಳಾದುದರಿಂದ ತ್ರಿಯಾಯುಷಗಳೆಂದು ಹೇಳಲ್ಪಟ್ಟಿವೆ. ॥೧-೨॥

ಬ್ರಾಹ್ಮಣಾದಿವರ್ಣತ್ರಯದವರು ಲಲಾಟ, ಎರಡು ಭುಜಗಳು, ಹೊಕ್ಕಳು, ಶಿರಸ್ಸು, ಹೃದಯದ ಪಾರ್ಶ್ವಗಳು ಇವುಗಳಲ್ಲಿ ತ್ರಿಯಂಬಕದೇವತಾಕವಾದ ಮಂತ್ರದಿಂದ ಧರಿಸಬೇಕು. ಮುತ್ತೈದೆಯರೂ, ವಿಧವೆಯರೂ ಆದ ಹೆಂಗಸರಿಗೂ,

ಸ್ತ್ರೀಣಾಂ ಚ ಸಧವಾನಾಂ ತು ಪಂಚಾಕ್ಷರತ್ರಿಪುಂಡ್ರಕಂ ।
ವಿಧವಾನಾಂ ತಥೈವಾಯಂ ವಿಧಿಃ ಪ್ರೋಕ್ತೋಽಥ ಶೂದ್ರವತ್ ॥೪॥

ತ್ರಿಯಂಬಕೇನ ಮನಸಾ ಬ್ರಹ್ಮಚಾರೀ ಸದೈವ ಹಿ ।
ಪಂಚಬ್ರಹ್ಮಾದಿಮನುಭಿರ್ಗೃಹಸ್ಥಸ್ಯ ವಿಧೀಯತೇ ॥೫॥

ಅಘೋರೇಣಾಥ ಮನುನಾ ವಿಪಿನಸ್ಥವಿಧಿಃ ಸ್ಮೃತಃ ।
ಯತಿಸ್ತು ಪ್ರಣವೇನೈವ ತ್ರಿಪುಂಡ್ರಾದೀನಿ ಕಾರಯೇತ್ ॥೬॥

ಅತಿವರ್ಣಾಶ್ರಮೀ ನಿತ್ಯಂ ಶಿವೋಽಹಂ ಭಾವನಾತ್ಮನಾ ।
ಶಿವಯೋಗೀ ಚ ನಿಯತಂ ಈಶಾನೇನ ವಿಧಾರಯೇತ್ ॥೭॥

ನ ತ್ಯಾಜ್ಯಂ ಸರ್ವವರ್ಣೈಶ್ಚ ಭಸ್ಮೇದಂ ಶಿವಶಾಸನಂ ।
ಅತ್ರೇದಮಿತಿಹಾಸಂ ತೇ ನಾಮಪಂಚಕಭಾಸಕಂ ॥೮॥

ವಾಸಿಷ್ಠೋಽಥ ಮುನಿಃ ಕಶ್ಚಿದವಂತ್ಯೋ ವೇದವಿತ್ತಮಃ ।
ಧನಂಜಯಸಮೋ ವಿಪ್ರೋ ನಾಮ್ನೈವಾಸೀದ್ಧನಂಜಯಃ ॥೯॥

---

ಶೂದ್ರರಿಗೂ, ಶಿವಪಂಚಾಕ್ಷರದಿಂದ ಭಸ್ಮಧಾರಣೆ ಮಾಡುವುದು ವಿಧಿವಿಹಿತವಾಗಿದೆ. ॥೩-೪॥

'ತ್ರ್ಯಂಬಕಂ ಯಜಾಮಹೆ' ಎಂಬ ಮಂತ್ರದಿಂದ ಬ್ರಹ್ಮಚಾರಿಯೂ, ಸದ್ಯೋಜಾತಾದಿ ಮಂತ್ರಗಳಿಂದ ಗೃಹಸ್ಥನೂ, 'ಅಘೋರೇಭ್ಯಃ' ಎಂಬ ಮಂತ್ರದಿಂದ ವಾನಪ್ರಸ್ಥಾಶ್ರಮಿಯೂ, ಪ್ರಣವದಿಂದ ಯತಿಯೂ ತ್ರಿಪುಂಡ್ರವನ್ನು ಧರಿಸಬೇಕು. ॥೫-೬॥

ಅತ್ಯಾಶ್ರಮಿಯಾಗಿ ಜ್ಞಾನಿಯಾಗಿರುವ ಶಿವಯೋಗಿಯು 'ಶಿವೋಽಹಂ' ಎಂಬ ಭಾವನೆಯಿಂದಲೂ, 'ಈಶಾನಸ್ಸರ್ವವಿದ್ಯಾನಾಂ' ಎಂಬ ಮಂತ್ರದಿಂದಲೂ ಧರಿಸಿಕೊಳ್ಳಬೇಕು. ಯಾವ ವರ್ಣದವರೂ ಭಸ್ಮವನ್ನು ತಿರಸ್ಕರಿಸಬಾರದು. ಸರ್ವರಿಗೂ ಭಸ್ಮವೇ ಧಾರ್ಯಮಾಣವಾದ ವಸ್ತು. ಈ ವಿಷಯವನ್ನೇ ವಿವರಿಸುವ ಇತಿಹಾಸವೊಂದು ಪ್ರಸಿದ್ಧವಾಗಿರುವುದು. ಅದನ್ನು ಹೇಳುವೆನು ಕೇಳು. ॥೭-೮॥

ಅವಂತೀದೇಶದಲ್ಲಿ, ವಸಿಷ್ಠವಂಶದವನೂ, ವೇದವೇದಾಂತಪಾರಂಗತನೂ, ಅಗ್ನಿಸಮನಾಗಿ ತೇಜಸ್ವಿಯೂ ಆದ ಧನಂಜಯನಾಮಕ ಬ್ರಾಹ್ಮಣನೊಬ್ಬನಿದ್ದನು.

ತಸ್ಯ ಭಾರ್ಯಾಶತಂ ಚಾಸೀದ್ರೂಪಲಾವಣ್ಯಶೋಭಿತಂ ।
ಜ್ಯೈಷ್ಠಿನೇಯಸ್ತಸ್ಯ ಸುತೋ ಕರುಣೋ ನಾಮತೋ ಭವೇತ್ ॥೧೦॥

ಉಪನೀತಃ ಸಕಾಲೇನ ವೇದಾನಪ್ಯಗೃಹೀತ್ಸಹಿ ।
ಭಾರ್ಗವೀಮುಪಯೇಮೇ ಸ ಕನ್ಯಾಂ ಕಮಲಲೋಚನಾಂ ॥೧೧॥

ಪಿತರ್ಯುಪರತೇ ಕಾಲೇ ಭ್ರಾತೃಭಿಃ ಕಲಹೋದ್ಯತೈಃ ।
ವಿಭಜ್ಯ ತತ್ಪಿತೃಧನಂ ಭವನಾಶಾತಟಂ ಯಯೌ ॥೧೨॥

ತತ್ರಾಶ್ರಮೋಚಿತಂ ಕರ್ಮ ನಿರ್ವರ್ತ್ಯ ಸಮವಸ್ಥಿತಃ ।
ನೃಸಿಂಹಮುಗಮತ್ತತ್ರ ಹರಿಂ ಸಂಸೇವಿತುಂ ದ್ವಿಜಃ ॥೧೩॥

ಬ್ರಾಹ್ಮಣೇನ ಪುರೋ ನ್ಯಸ್ತಂ ನೃಸಿಂಹೋಪಾಯನಂಫಲಂ ।
ಅಜಿಘ್ರತ್ಸೋಽಪಿ ಜಂಬೀರಂ ಗಂಧವತ್ಕಾಂಚನಪ್ರಭಂ ॥೧೪॥

---

ಅವನಿಗೆ ರೂಪಲಾವಣ್ಯಯುಕ್ತವಾದ ನೂರುಜನ ಹೆಂಡತಿಯರಿದ್ದರು. ಅವನ ಹಿರಿಯ ಮಗನೇ ಕರುಣನೆಂಬ ಹೆಸರಿನವನು. ||೯-೧೦||

ಅವನಿಗೆ ಸಕಾಲದಲ್ಲಿ ಉಪನಯನವಾಯಿತು. ವೇದಭಾಗವನ್ನೆಲ್ಲಾ ಪೂರ್ಣವಾಗಿ ಅಭ್ಯಾಸಮಾಡಿದನು. ಅನಂತರ ಸುಂದರಿಯಾದ ಮತ್ತು ಕಮಲ ಲೋಚನೆಯಾದ ಭಾರ್ಗವಿಯನ್ನು ಮದುವೆಮಾಡಿಕೊಂಡನು. ಕಾಲಕ್ರಮದಲ್ಲಿ ಅವನ ತಂದೆಯು ಮೃತನಾದನು. ಅಣ್ಣತಮ್ಮಂದಿರಲ್ಲಿ ಆಸ್ತಿಗಾಗಿ ಜಗಳ ಹುಟ್ಟಿತು. ಒಡನೆಯೇ ಈ ಜ್ಯೇಷ್ಠಪುತ್ರನು ಆಸ್ತಿಯನ್ನು ಅಣ್ಣತಮ್ಮಂದಿರಿಗೆ ಹಂಚಿ ತಾನು ಭವನಾಶಕ್ಷೇತ್ರಕ್ಕೆ ಹೋದನು. ||೧೧-೧೨||

ಅಲ್ಲಿಯೇ ತನ್ನ ನಿತ್ಯಕರ್ಮಗಳನ್ನು ನಡೆಸುತ್ತಾ ಸುಖದಿಂದಿರಲು, ಅಲ್ಲಿಗೆ ಒಬ್ಬ ಬ್ರಾಹ್ಮಣನು ಅಲ್ಲಿದ್ದ ನೃಸಿಂಹದೇವರನ್ನು ಪೂಜಿಸಲು ಬಂದು, ದೇವರ ನೈವೇದ್ಯಕ್ಕಾಗಿ ಉತ್ತಮವಾದ ಹಣ್ಣುಗಳನ್ನು ಮುಂದಿಟ್ಟಿದ್ದನು. ಅಲ್ಲಿದ್ದ ಈ ಕರುಣನೆಂಬವನು ಅಲ್ಲಿದ್ದ ಸುಗಂಧವೂ, ಸುವರ್ಣವುಳ್ಳದ್ದೂ ಆಗಿ ಶೋಭಿಸುತ್ತಿದ್ದ ಒಂದು ನಿಂಬೆಹಣ್ಣನ್ನು ಮೂಸಿನೋಡಿದನು. ||೧೩-೧೪||

ತೇನ ವಿಪ್ರೇಣ ಶಪ್ತೋಽಸೌ ಮಕ್ಷಿಕತ್ವಮುಪೇಯಿವಾನ್ ।
ಭಾರ್ಯಾಮಾಹೂಯ ವಿಪ್ರೋಽಸೌ ಜಗಾದ ಸ್ವಸ್ಯ ಚೇಷ್ಟಿತಂ ॥೧೫॥

ಮಾಂ ರಕ್ಷೇತಿ ತದಾ ಪ್ರಾಹ ಕರುಣಂ ಶರಣಾಯತಃ ।
ಮಕ್ಷಿಕಾಂ ತಾಮುರಕ್ಷತ್ಸಾ ತದಂತರವಿರೋಧಿನಃ ॥೧೬॥

ಭ್ರಾತರಸ್ತಸ್ಯ ತಂ ಪಾಪಂ ತೈಲಮಧ್ಯೇಽಪ್ಯಮಾರಯನ್ ।
ಸಾ ಮೃತಂ ಸ್ವಪತಿಂ ಗೃಹ್ಯ ಅರುಂಧತ್ಯೈ ನ್ಯವೇದಯತ್ ॥೧೭॥

ರುದತೀಂ ಸಾ ವಿಶಾಲಾಕ್ಷೀ ತಾಂ ಸಾಂತ್ವೈಃ ಸಮತೋಷಯತ್ ॥೧೮॥

॥ ಅರುಂಧತ್ಯುವಾಚ ॥

ಶೋಕೇನಾಲಮಿತೋ ಭದ್ರೇ ಭಸ್ಮನಾ ಜೀವಯಾಮ್ಯಹಂ ।
ಅಗ್ನಿಹೋತ್ರೋದ್ಭವಂ ಭಸ್ಮ ಸಮಾನಯದುದ್ಧೃತಂ ಮಮ ॥೧೯॥

ಸಮಾನೀಯ ತತೋ ಭಸ್ಮ ದದೌ ತಸ್ಯಾಃ ಕರೇ ಸತೀ ।
ಮೃತ್ಯುಂಜಯೇನ ಮಂತ್ರೇಣ ಮೃತಜಂತೌ ತದಾಕ್ಷಿಪತ್ ॥೨೦॥

---

ಒಡನೆಯೇ ಆ ವಿಪ್ರನು ಕೋಪಗೊಂಡು ಕರುಣನು ನೊಣವಾಗುವಂತೆ ಶಾಪವಿತ್ತನು. ಅವನು ಕೂಡಲೇ ನೊಣದಂತಾಗಿ ತನ್ನ ಹೆಂಡತಿಗೆ ಇದನ್ನು ತಿಳಿಸಿ ತನ್ನನ್ನು ಕಾಪಾಡೆಂದು ಅವಳ ಮೊರೆಹೊಕ್ಕನು. ಆಗ ಪತ್ನಿಯು ನೊಣದಂತಾದ ಪತಿಯನ್ನೇ ರಕ್ಷಿಸುತ್ತಿದ್ದಳು. ಇದನ್ನರಿತ ಅವನ ಅಣ್ಣತಮ್ಮಂದಿರು ಮೋಸದಿಂದ ಆ ನೊಣವು ಎಣ್ಣೆಗಡಿಗೆಯಲ್ಲಿ ಬೀಳುವಂತೆ ಮಾಡಿ, ಅದನ್ನು ಕೊಂದುಬಿಟ್ಟರು. ಹಾಗೆ ಮೃತನಾದ ತನ್ನ ಪತಿಯನ್ನು ನೋಡಿ ಪತ್ನಿಯು ಅಳುತ್ತ ಆ ನೊಣವನ್ನು ತಂದು ಅರುಂಧತಿಗೆ ಕೊಟ್ಟು ಹೇಗಾದರೂ ಮಾಡಿ ಇದನ್ನು ಬದುಕಿಸಿಕೊಡಬೇಕೆಂದು ಪ್ರಾರ್ಥಿಸಿದಳು. ॥೧೫-೧೬-೧೭-೧೮॥

ಆಗ ಅರುಂಧತಿಯು ಆ ಭಾರ್ಗವಿಯನ್ನು ಸಮಾಧಾನಪಡಿಸುತ್ತಾ, ಒಳಗೆ ಹೋಗಿ ತನ್ನ ಪತಿಯು ಮಾಡಿದ್ದ ಅಗ್ನಿಹೋತ್ರದ ಭಸ್ಮವನ್ನು ತಂದು, ಆಕೆಯ ಕೈಯಲ್ಲಿಟ್ಟು, ಮೃತ್ಯುಂಜಯದೇವತಾಕವಾದ ಮಂತ್ರವನ್ನುಚ್ಚರಿಸುತ್ತಾ ಸತ್ತುಬಿದ್ದಿದ್ದ ನೊಣದ ಮೇಲೆ ಎರಚುವಂತೆ ಹೇಳಿದಳು. ॥೧೯-೨೦॥

ಮಂದವಾಯುಸ್ತದಾ ಜಜ್ಞೇ ವ್ಯಜನೇನ ಶುಚಿಸ್ಮಿತಾ ।
ಉದತಿಷ್ಠತ್ತತೋ ಜಂತುರ್ಭಸ್ಮನಾಸ್ಯ ಪ್ರಭಾವತಃ ॥೨೦॥

ತತೋ ವರ್ಷಶತಾಂತೇಽಸ್ಯ ಭ್ರಾತಾಮೃತಿಮವಾಪ್ತವಾನ್ ।
ಕಾಶ್ಯಪೋ ದುಷ್ಟಸರ್ಪೇಣ ದಷ್ಟೋಽಪಿ ಪುನರುತ್ಥಿತಃ ॥೨೨॥

ಭಸ್ಮನೋಽಸ್ಯ ಪ್ರಭಾವಂ ವೈ ತಸ್ಮಾದ್ರಕ್ಷೇತಿ ನಾಮತಃ ।
ತಸ್ಮಾಚ್ಚ ಭಸ್ಮನೋ ವೀರ್ಯಾತ್ತಸ್ಯ ಪುತ್ರೋಽಭವನ್ಮುನಿಃ ॥೨೩॥

ದಧೀಚಿಸ್ತಪತಾಂ ಶ್ರೇಷ್ಠಸ್ತಪಸ್ವೀ ತಪನಪ್ರಭಃ ।
ಶಾಂಭವೋಽಸೌ ಮುನೇ ತತ್ರ ಸುರಕಾರ್ಯಾರ್ಥಮುದ್ಯತಃ ॥೨೪॥

ಗೌತಮಸ್ಯ ಮುನೇಃ ಪೂರ್ವಂ ವಿವಾಹೇಽಹಲ್ಯಯಾ ಸಹ ।
ರೂಪಯುಕ್ತಾಂ ದೇವಗಣಾಸ್ತಾಂ ವೀಕ್ಷ್ಯ ಪ್ರಮುದೋತ್ತಮಾಂ॥೨೫॥

---

ಅವನ ಪತ್ನಿಯು ಬೀಸಣಿಗೆಯಿಂದ ಸ್ವಲ್ಪ ಬೀಸಿದೊಡನೆಯೇ ಆ ನೊಣವು ಜೀವಸಹಿತವಾಗಿ ಎದ್ದು ಹಾರಿತು. ಭಸ್ಮಪ್ರಭಾವದಿಂದ ಬದುಕಿದ ಇವನ ತಮ್ಮನಾದ ಕಾಶ್ಯಪನೆಂಬುವನು ಕೆಲವು ವರ್ಷಗಳ ಮೇಲೆ ಸರ್ಪದಿಂದ ಕಚ್ಚಲ್ಪಟ್ಟು ಮೃತಿಹೊಂದಿದನು. ಆಗಲೂ ಅದೇ ಭಸ್ಮಪ್ರಭಾವದಿಂದ ಅವನು ಜೀವಸಹಿತವಾಗಿ ಎದ್ದನು. ॥೨೦-೨೧-೨೨॥

“ತಸ್ಮಾದ್ರಕ್ಷ” ಎಂಬ ಪ್ರಾರ್ಥನೆಕೊಡುವ ವೇದಮಂತ್ರಪುರಸ್ಸರವಾಗಿ ಹೊಂದುವ ಭಸ್ಮವು ಮಹಾಮಹಿಮೆಯುಳ್ಳದ್ದು. ಅದೇ ಭಸ್ಮಮಹಿಮೆಯಿಂದ ಆ ಕಾಶ್ಯಪನೆಂಬುವನಿಗೆ ದಧೀಚಿಯೆಂಬ ಮಹಾತಪಸ್ವಿಯಾದ ಋಷಿಯೊಬ್ಬನು ಜನಿಸಿದನು. ಅವನು ಸೂರ್ಯನಂತೆ ಸದಾ ತೇಜಸ್ವಿಯಾಗಿದ್ದನು. ದೇವತೆಗಳ ಜಯಕ್ಕಾಗಿ ತನ್ನ ಬೆನ್ನುಮೂಳೆಯನ್ನು ಕೊಟ್ಟು ಕಾಪಾಡಿದವನೇ ಆ ಮಹಾತ್ಮನು. ಹಿಂದೆ ಗೌತಮಮಹರ್ಷಿಯು ಬಹು ಸುಂದರಿಯಾದ ಅಹಲ್ಯೆಯನ್ನು ಮದುವೆಯಾದಾಗ, ಆಕೆಯ ಸೌಂದರ್ಯಕ್ಕೆ ದೇವತೆಗಳೆಲ್ಲರೂ ಮೋಹಗೊಂಡರು. ॥೨೩-೨೪-೨೫॥

ಕಾಮಪ್ರಮಾದೋಪಹತಾಃ ನಿರ್ಘೋಷತರಭಸೋಽಭವನ್ ।
ಇಂದ್ರೋಪಿ ಸಂಗತಸ್ತಸ್ಯಾಂ ಶಪ್ತಶ್ಚಾಕ್ಷಪದೇನ ಹಿ ॥೨೬॥

ಹ್ರಿಯಾವನಮ್ರಾ ತೇ ದೇವಾಃ ಪುರುಹೂತಪುರೋಗಮಾಃ ।
ದೂರ್ವಾಸಸಂ ಭಸ್ಮನಿಷ್ಠಮಗಚ್ಛನ್ ಪಾಪಶಾಂತಯೇ ॥೨೭॥

ಪ್ರಣಮ್ಯ ಶಾಂಭವಶ್ರೇಷ್ಠಂ ಭಸ್ಮನಿಷ್ಠಂ ಸುರಾಸ್ತದಾ ।
ಪ್ರಾಹುಃ ಪ್ರಾಂಜಲಯಸ್ಸರ್ವೇ ಸ್ವಾಗೋ ಮುನಿವರಂ ಪ್ರತಿ ॥೨೮॥

॥ ದೇವಾ ಊಚುಃ ॥

ಕ್ಷಮಸ್ವ ನೋ ಮುನಿಶ್ರೇಷ್ಠ ಸ್ವಾಗೋ ಹೇತುಂ ತದದ್ಯನಃ ।
ಇಂದ್ರಂ ಚ ಕೃಪಯಾ ವೀಕ್ಷ್ಯ ಪಾಹ್ಯಸ್ಮಾನ್ ಮುನಿಶಾಪತಃ ॥೨೯॥

ಇತ್ಯುಕ್ತಂ ದೇವವಚನಂ ಶ್ರುತ್ವಾ ತಾನಾಹ ಸುವ್ರತಃ ॥೩೦॥

॥ ದೂರ್ವಾಸಾ ಉವಾಚ ॥

ತದ್ದೋಷಂ ಶಮಯಿಷ್ಯೇಽಹಂ ಭಸ್ಮನೈವ ಸುರೋತ್ತಮಾಃ ।
ಶತರುದ್ರೋತ್ಥಮಂತ್ರೇಣ ಮಂತ್ರಿತೇನೈವ ಭಸ್ಮನಾ ॥೩೧॥

---

ಇಂದ್ರನು ಕಾಮುಕನಾಗಿ ಅಹಲ್ಯೆಯ ಸಮಾಗಮವನ್ನು ಪಡೆದು, ಗೌತಮ (ಕಾಲಿನಲ್ಲಿ ಕಣ್ಣುಳ್ಳವನು) ಮಹರ್ಷಿಯಿಂದ ಶಾಪಹೊಂದಿದನು. ಅದೇ ಸಂದರ್ಭದಲ್ಲಿ ನಾಚಿಕೆಗೊಂಡ ಎಲ್ಲಾ ದೇವತೆಗಳು ಇಂದ್ರನೊಡಗೂಡಿ, ತಮ್ಮ ಪಾಪಪರಿಹಾರಕ್ಕಾಗಿ ಭಸ್ಮಧಾರಿಯೂ, ಶಾಂಭವಶ್ರೇಷ್ಠನೂ ಆದ ದೂರ್ವಾಸ ಮಹರ್ಷಿಯನ್ನು ಕಂಡು, ನಮಸ್ಕರಿಸಿ ತಮ್ಮ ಅಪರಾಧವನ್ನು ಅವನ ಮುಂದೆ ಹೇಳಿಕೊಂಡರು. ॥೨೬-೨೭-೨೮॥

" ಮಹರ್ಷಿಶ್ರೇಷ್ಠನೆ, ಋಷಿಶಾಪದಿಂದ ಬಳಲುತ್ತಿರುವ ಇಂದ್ರನನ್ನೂ, ಅಪಮಾನಿತರಾಗಿರುವ ನಮ್ಮನ್ನೂ ಈಗ ರಕ್ಷಿಸು " ಎಂದು ದೇವತೆಗಳು ದೂರ್ವಾಸನನ್ನು ಪ್ರಾರ್ಥಿಸಿಕೊಳ್ಳಲು ಆಗ ದೂರ್ವಾಸಮಹರ್ಷಿಯು ಹೀಗೆಂದನು. ॥೨೯-೩೦॥

" ಎಲೈ ದೇವತೆಗಳಿರಾ, ಹೆದರಬೇಡಿ. ನಿಮ್ಮ ಆ ಅಪರಾಧವನ್ನು ಮಂತ್ರಪೂತವಾದ ಈ ಭಸ್ಮದಿಂದ ಪರಿಹರಿಸುವೆನು. ಗೌತಮರ ಶಾಪದಿಂದ

ಶಮಯಿಷ್ಯೇ ಮುನಿಕೃತಂ ಶಾಪೇನೇಂದ್ರವಿರೂಪತಾಂ ।
ಇತ್ಯೇವಮುಕ್ತ್ವಾ ದುರ್ವಾಸಾ ದತ್ತವಾನ್ ಭಸ್ಮಚೋತ್ತಮಂ ॥೩೨॥

ಬ್ರೂತ ಮದ್ವಚನಾತ್ಸರ್ವೇ ಯೂಯಂ ವೈ ಕೃತರೇಭಸಃ ।
ಶತರುದ್ರೇಣ ಮಂತ್ರೇಣ ಭಸ್ಮೋದ್ಧೂಲಿತವಿಗ್ರಹಾಃ ॥೩೩॥

ನಿರ್ಧೂತರೇಭಸಃ ಸೇಂದ್ರಾಃ ಸುರಾ ಆಸನ್ನರೇಭಸಃ ।
ಆಶ್ಚರ್ಯಮೇತಜ್ಜಾನೀಹಿ ಪ್ರಭಾವಂ ಭಸ್ಮನೋ ಮುನೇ ॥೩೪॥

ಏಕಾರ್ಣವೇ ಯುಗಾಂತೇ ಹಿ ಪುರಾಹಿಶಯನೇ ಹರಿಃ ।
ಯೋಗಮಾಸ್ಥಾಯ ಪರಮಂ ಶಿಶ್ಯೇ ಸ ತಮಸಾವೃತಃ ॥೩೫॥

ಜಾನುದಘ್ನೇಽರ್ಣವಜಲೇ ಸಂಚರನ್ ಪರಮೇಶ್ವರಃ ।
ಶೂಲಾಸಕ್ತಮಹಾಸ್ಕಂಧಃ ಸೋಮಾರ್ಧಕೃತಶೇಖರಃ ॥೩೬॥

---

ಇಂದ್ರನಿಗೆ ಒದಗಿರುವ ವಿರೂಪವನ್ನು ನಿವಾರಿಸುವೆನು" ಎಂದು ಹೇಳುತ್ತಾ ದೂರ್ವಾಸಮಹರ್ಷಿಯು ಉತ್ತಮವಾದ ಭಸ್ಮವನ್ನು ಅಭಿಮಂತ್ರಿಸಿಕೊಟ್ಟು ಈರೀತಿ ಆಶ್ವಾಸನವಿತ್ತನು. ॥೩೧-೩೨॥

ದೇವತೆಗಳಿರಾ, ನೀವು ಇಲ್ಲಿನ ವರೆಗೂ ಎಷ್ಟೋ ತಪ್ಪುಮಾಡಿರುವಿರಿ. ಪಾಪವನ್ನು ಗಳಿಸಿರುವಿರಿ. ಆದರೂ ಈ ಭಸ್ಮವನ್ನು ಶತರುದ್ರಮಂತ್ರಗಳಿಂದ ನಿಮ್ಮ ಶರೀರಗಳಿಗೆ ಬಳಿದುಕೊಳ್ಳಿರಿ. ನಿಮ್ಮ ಪಾಪಗಳು ಈ ಕೂಡಲೇ ನಿವಾರಣೆ ಯಾಗುವುವು. ಭಸ್ಮಮಹಿಮೆಯನ್ನು ಸಾಮಾನ್ಯವೆಂದು ಭಾವಿಸಬೇಡಿ. ಇದು ಅತ್ಯಾಶ್ಚರ್ಯಕರವಾದುದು. ॥೩೩-೩೪॥

ಹಿಂದೆ ಪ್ರಳಯಕಾಲದಲ್ಲಿ ಪ್ರಪಂಚವೆಲ್ಲಾ ಜಲಮಯವಾಗಿದ್ದಾಗ, ವಿಷ್ಣುವು ಸರ್ಪಶಯನನಾಗಿ ಮಾಯಾವಿಶಿಷ್ಟನಾಗಿ ಯೋಗನಿದ್ರೆಯಲ್ಲಿ ಮಲಗಿದ್ದನು. ಆಗ ಚಂದ್ರಶೇಖರನೆನಿಸಿದ ಶಂಕರನು ತನ್ನ ಮೊಳಕಾಲಿಗೆ ಬರುವ ಆ ನೀರಿನಲ್ಲಿ ನಡೆದುಕೊಂಡು ಹೋಗಿ ತನ್ನ ತ್ರಿಶೂಲವನ್ನು ಹೆಗಲಿನಮೇಲಿಟ್ಟುಕೊಂಡು ವಿಷ್ಣುವನ್ನು ನೋಡಿದನು. ॥೩೫-೩೬॥

ದೃಷ್ಟ್ವಾ ಹರಿಂ ಕರುಣಯಾ ಸ್ವಭಾವತಮಸಾವೃತಂ ।
ಅಪ್ರಣಮ್ಯ ಸ್ಥಿತಂ ಜ್ಞಾತ್ವಾ ತದಜ್ಞಾನನಿವೃತ್ತಯೇ ॥೩೭॥

ಸ್ವವಕ್ಷಸಿ ಸ್ಥಿತಂ ಭಸ್ಮ ನಖೇನಾದಾಯ ಶಂಕರಃ ।
ಪ್ರಣವೇನಾಽಭಿಮಂತ್ರ್ಯಾಥ ಶಿವಪಂಚಾಕ್ಷರೇಣ ಹಿ ॥೩೮॥

ಹರಿಮಸ್ತಕಗಾತ್ರೇಷು ಭಸ್ಮ ತತ್ಕ್ಷಿಪದಂಜಸಾ ।
ಶಿವಾಂಗಸಂಗಭಸ್ಮಾದಿ ಸಂವೃತಾಂಗೋ ಹರಿರ್ಹರಂ ॥೩೯॥

ಸಂತ್ಯಜ್ಯ ತಾಮಸಂ ಹೃತ್ಸ್ಥಂ ಧ್ಯಾಯನ್ನಭ್ಯುತ್ಥಿತೋ ಹರಿಃ ।
ಸಾಽಷ್ಟಾಂಗಮಷ್ಟಮೂರ್ತಿಂ ತಮಷ್ಟಾಂಗಂ ಪ್ರಣಿಪತ್ಯ ಚ ॥೪೦॥

ದೃಷ್ಟ್ವೇಶ್ವರಂ ಭಕ್ತಿಗಮ್ಯಂ ಭಸ್ಮಾಭಕ್ಷಯದಚ್ಯುತಃ ।
ತದೈವಾಸೀದ್ಧರಿಸ್ತೂರ್ಣಂ ಪಕ್ವಬಿಂಬಸಮದ್ಯುತಿಃ ॥೪೧॥

ವಾಸುದೇವಃ ಶುದ್ಧಮುಕ್ತಾ ಫಲವರ್ಣೋಽಭವತ್ತದಾ ।
ತದಾ ಪ್ರಭೃತಿ ಮುಕ್ತಾಭೋ ವಾಸುದೇವೋ ಮುನೀಶ್ವರ ॥೪೨॥

ತುಷ್ಟಾವ ದೇವಂ ಹೃಷ್ಟೋಽಸೌ ಶಿಪಿವಿಷ್ಟಮುಮಾಸಖಂ ॥೪೩॥

---

ಆಗ ವಿಷ್ಣುವು ಮಾಯಾವಿಶಿಷ್ಟನಾಗಿ ಅಜ್ಞಾನಿಯಾಗಿದ್ದುದರಿಂದ ಅವನಿಗೆ ಈಶ್ವರಸ್ವರೂಪವು ಕಾಣದೇಹೋಯಿತು. ತಾನು ಬಂದರೂ ನಮಸ್ಕರಿಸದಿರುವ ವಿಷ್ಣುವನ್ನು ನೋಡಿ ಶಂಕರನು ದಯೆಯಿಂದ ಅವನ ಅಜ್ಞಾನನಿವೃತ್ತಿಗಾಗಿ ತನ್ನ ಎದೆಯಮೇಲಿದ್ದ ಭಸ್ಮವನ್ನು ಉಗುರಿನಿಂದ ತೆಗೆದುಕೊಂಡು ಪ್ರಣವದಿಂದ ಅಭಿಮಂತ್ರಿಸಿ, ಶಿವಪಂಚಾಕ್ಷರಮಂತ್ರವನ್ನುಚ್ಚರಿಸುತ್ತಾ ವಿಷ್ಣುವಿನ ಶಿರಸ್ಸು, ಹಣೆ, ದೇಹ ಇವುಗಳಿಗೆ ಬೀಳುವಂತೆ ಎಸೆದನು. ಅದರ ಮಹಿಮೆಯಿಂದ ವಿಷ್ಣುವು ಕೂಡಲೇ ಅಜ್ಞಾನವನ್ನು ಬಿಟ್ಟು, ಜ್ಞಾನಿಯಾಗಿ ಎದುರಿನಲ್ಲಿ ನಿಂತಿರುವ ಅಷ್ಟಮೂರ್ತಿಸ್ವರೂಪನಾದ ಮಹಾದೇವನನ್ನು ಸಾಷ್ಟಾಂಗಪ್ರಣಾಮದಿಂದ ವಂದಿಸಿದನು. ॥೩೭-೩೮-೩೯-೪೦॥

ಆಗ ಶಂಕರನು ಅವನಿಗೆ ಪ್ರಸನ್ನನಾಗಿ ಕೊಟ್ಟ ಭಸ್ಮವನ್ನು ಅಚ್ಯುತನು ಸಂತೋಷದಿಂದ ಭಕ್ಷಿಸಲು, ಕೂಡಲೇ ಅವನ ದೇಹವು ಪಕ್ವವಾದ ತೊಂಡೆಹಣ್ಣಿನಂತೆ ಶೋಭಿಸತೊಡಗಿತು. ಅಂದಿನಿಂದ ವಾಸುದೇವನು ಮುತ್ತಿನಂತೆ ಶುಭ್ರದೇಹಿ

॥ ಶ್ರೀ ವಿಷ್ಣುರುವಾಚ ॥

ತ್ರ್ಯಕ್ಷಾಕ್ಷಯೋರುರಕ್ಷಾಕ್ಷಪಿತಹೃದಿ ಮಮ ಧ್ವಾಂತ ಸಂಘಾತವಕ್ಷ ।
ಕ್ಷೋಭಾಕ್ಷಾಕ್ಷತಶಿಕ್ಷಯಾಽದ್ಭುತಸುರಾಧ್ಯಕ್ಷಾದ್ಯಸಂವೀಕ್ಷಿತಃ ॥೪೪॥

ವೀಕ್ಷಾಶಿಕ್ಷಿತದಕ್ಷಪಕ್ಷಸುಮಧ್ಯಕ್ಷಾಕಲಾಂತಕ ಸ್ವಧ್ವರಾ
ಧ್ಯಕ್ಷಾಕ್ಷೋಭ್ಯ ಗುಣಾಕರಾರ್ಣವನಿಭೋ ಮಾಂ ರಕ್ಷ ಉಕ್ಷಧ್ವಜ ॥೪೫॥

ಅಶಕ್ಯಂ ತೇ ರೂಪಂ ಪರಮ ಪರಮಪ್ರಾಪ್ಯ ಹರಯೋ
ಭವಾಭಾವಂ ಪ್ರಾಪ್ತಾ ವಿಧಿಹರಸುರಾಶ್ಚಾಸುರಗಣಾಃ ।
ಮಹಾಗ್ರಾಸೋರುದ್ರೋ ಭವಸಿ ಭಗವನ್ ಅದ್ಭುತತರೋ
ವರೀಯಾನೋಜಿಷ್ಠೋ ಬೃಹದಣುಕರೂಪೋಽಸಿ ಮಹಿಮಾ ॥೪೬॥

---

ಯಾಗಿ ಶೋಭಿಸಲಾರಂಭಿಸಿದನು. ಅದೇ ಸಮಯದಲ್ಲಿ ಸಂತುಷ್ಟನಾದ ವಿಷ್ಣುವು ಶಂಕರನನ್ನು ಹೀಗೆ ಪ್ರಾರ್ಥಿಸತೊಡಗಿದನು. ॥೪೧-೪೨-೪೩॥

"ತ್ರಿಲೋಚನನೇ, ವೃಷಭಧ್ವಜನೇ, ಅಜ್ಞಾನದಿಂದ ಕತ್ತಲೆಯಾಗಿದ್ದ ನನ್ನ ಹೃದಯವನ್ನು ಕೇವಲ ದೃಷ್ಟಿಮಾತ್ರದಿಂದಲೇ ಬೆಳಕುಮಾಡಿದೆ. ಸಮಸ್ತ ದೇವದೇವನಾದ ನೀನು ಅನಾಯಾಸವಾಗಿ ನನಗೆ ಗೋಚರಿಸಿದೆ. ದಕ್ಷಬ್ರಹ್ಮನ ಪಕ್ಷದಲ್ಲಿದ್ದ ಸಕಲ ದೇವರಾಕ್ಷಸರನ್ನೆಲ್ಲಾ ಕೇವಲ ಕಟಾಕ್ಷಪಾತದಿಂದಲೇ ಧ್ವಂಸ ಗೊಳಿಸಿದೆ. ಯಮನ ಗರ್ವವನ್ನೂ ಮುರಿದೆ. ಇಂತಹ ಮಹಾನುಭಾವನಾದ ನಿನಗೆ ವಂದನೆಗಳು. ॥೪೪॥

ಪರಶಿವನೇ, ನಿನ್ನ ರೂಪವನ್ನು ಊಹಿಸುವುದೂ ಸುಲಭವಲ್ಲ. ಹಾಗೆ ನಿನ್ನ ರೂಪವನ್ನು ನೋಡದ ಬ್ರಹ್ಮಾದಿದೇವತೆಗಳೂ, ರಾಕ್ಷಸರೂ ನಿನ್ನಂತಾಗಲು ಸಾಧ್ಯರಾಗಲಿಲ್ಲ. ರುದ್ರನೇ, ನೀನು ಮಹಾಪ್ರಪಂಚವನ್ನೇ ಗ್ರಾಸವನ್ನಾಗಿಮಾಡಿ ಕೊಳ್ಳುವೆ. ನಿನ್ನ ಮಹಿಮೆಯು ಅದ್ಭುತವಾದದ್ದು. ನೀನು ಮಹಾತ್ಮನು. ಬೃಹದ್ರೂಪದಿಂದಲೂ, ಅಣುರೂಪದಿಂದಲೂ ತೋರಿಬರುವ ನೀನು ಮಹಾ ಮಹಿಮನಲ್ಲವೇ ! ॥೪೫-೪೬॥

॥ ಶ್ರೀ ಸ್ಕಂದ ಉವಾಚ ॥

ಇತ್ಥಂ ಸ್ತುತ್ವಾ ತದಾ ವಿಷ್ಣುರ್ಮಹಾದೇವಂ ತದಾವದತ್ ।
ಪ್ರಣಮ್ಯ ಭಸ್ಮಫಾಲೋ ಹಿ ಭವಪ್ರಣವಮಾನಸಃ ॥೪೭॥

॥ ಶ್ರೀ ವಿಷ್ಣುರುವಾಚ ॥

ನ ಶಕ್ತ್ರಂ ಭಸ್ಮನೋ ಜಾನೇ ಪ್ರಭಾವಂ ತೇ ಕುತೋ ವಿಭೋ ।
ನಮಸ್ತೇಸ್ತು ಮಹಾದೇವ ತ್ವಾಮೇವ ಶರಣಂ ಗತಃ ॥೪೮॥

ತ್ವತ್ಪಾದಯುಗಲೇ ಶಂಭೋ ಭಕ್ತಿರಸ್ತು ಸದಾ ಮಮ ।
ತತ್ರ ವಿಷ್ಣೋರ್ವಚಶ್ಶ್ರುತ್ವಾ ತತ್ಸ್ತುತ್ಯಾ ತುಷ್ಟ ಈಶ್ವರಃ ॥೪೯॥

ಸ್ಪೃಷ್ಟ್ವಾ ವಿಷ್ಣೋಶ್ಶಿರಸ್ತತ್ರ ಭಸ್ಮನಾ ಪಾಣಿಗೇನ ಹಿ ।
ಉವಾಚ ಘನಘೋಷೇಣ ಉಚ್ಚೈರ್ಘೋಷೋ ಮಹೇಶ್ವರಃ ॥೫೦॥

॥ ಶ್ರೀ ಈಶ್ವರ ಉವಾಚ ॥

ಭಸ್ಮಧಾರಣಸಂಪನ್ನೋ ಮಮ ಭಕ್ತೋ ಭವಿಷ್ಯಸಿ ।
ತ್ವಂ ಭಸ್ಮನಿಷ್ಠೋ ನಿತರಾಂ ಪಾಲಯೇದಂ ಚರಾಚರಂ ॥೫೧॥

---

ಹೀಗೆ ಹಣೆಯಲ್ಲಿ ಭಸ್ಮವಿಟ್ಟಿದ್ದ ಮಹಾವಿಷ್ಣುವು ಶಿವಭಕ್ತಿಯುತನಾಗಿ ಈಶ್ವರನನ್ನು ಸ್ತುತಿಸಿ ವಂದಿಸಿ, ಈರೀತಿ ಪ್ರಾರ್ಥಿಸಿಕೊಂಡನು. ‘ ಮಹಾತ್ಮನೇ, ಭಸ್ಮಮಹಿಮೆಯು ನನಗೆ ಸರಿಯಾಗಿ ತಿಳಿಯದು. ಮಹಾದೇವನೇ, ನಿನ್ನನ್ನೇ ಮೊರೆಹೊಕ್ಕಿರುವ ನನಗೆ ಅದನ್ನು ತಿಳಿಸಿ ಕಾಪಾಡು. ॥೪೭-೪೮॥

ಮಹಾದೇವನೇ, ನನಗೆ ಮತ್ತಾವ ವರವೂಬೇಡ. ಸರ್ವದಾ ನಿನ್ನ ಪಾದಪದ್ಮಗತವಾದ ಸ್ಥಿರಭಕ್ತಿಯು ನನ್ನಲ್ಲಿರಲಿ. ಅಷ್ಟನ್ನು ಮಾತ್ರ ಕರುಣಿಸು’ ಎಂದು ಪ್ರಾರ್ಥಿಸಿದ ವಿಷ್ಣುವನ್ನು ನೋಡಿ ಶಂಭುವು, ತನ್ನ ಕೈಯಲ್ಲಿದ್ದ ಭಸ್ಮದಿಂದ ವಿಷ್ಣು ಶಿರವನ್ನು ಸ್ಪರ್ಶಿಸುತ್ತಾ ಭಯಂಕರವಾದ ಧ್ವನಿಯಿಂದ ಎಲ್ಲ ಕಡೆಗೂ ಕೇಳು ವಂತೆ ಹೀಗೆ ವಿಷ್ಣುವಿಗೆ ಆಶ್ವಾಸನವಿತ್ತನು. ॥೪೯-೫೦॥

“ ಮಹಾವಿಷ್ಣುವೇ, ನೀನು ಭಸ್ಮಧಾರಣೆಮಾಡಿಕೊಂಡಿರುವುದರಿಂದ ನನಗೆ ಬಹಳ ಪ್ರಿಯನಾಗಿರುವೆ. ಇದೇ ರೀತಿ ಭಕ್ತನಾಗಿದ್ದು, ಈ ಚರಾಚರಾತ್ಮಕವಾದ

ಪುನಸ್ತೇ ಭಸ್ಮನೋ ವಕ್ಷ್ಯೇ ಮಹಿಮಾನಂ ಶೃಣುಷ್ವ ಮೇ ।
ಉಮಾನಾಥೋ ರಮಾನಾಥಂ ವೀಕ್ಷ್ಯತಾಪುಗಜಾಂ ತದಾ ॥೫೨॥

ಏವಮಾಹ ವಿರೂಪಾಕ್ಷಃ ಪದ್ಮಾಕ್ಷಂ ವೀಕ್ಷ್ಯಸಾದರಂ ॥೫೩॥

॥ ಈಶ್ವರ ಉವಾಚ ॥

ಮಾನಸ್ತೋಕೇತಿ ಶಸ್ತಂ ಭಸಿತಮತಿಸಿತಂ ಹಸ್ತಮಧ್ಯಾಂಗುಲೀಭಿಃ
ನ್ಯಸ್ತಂ ಫಾಲತಲೇ ತ್ರಿಪುಂಡ್ರರಚನಾದ್ವಿಧ್ವಸ್ತಪಾಪೋ ಭವೇತ್ ।
ಶಸ್ತಂ ತಸ್ಯ ಮಹೇಶಪಾದಕಮಲೋದಾರಪ್ರಭೂತಂ ಮಧು
ನ್ಯಸ್ತಂ ಪಾಪಗಣೇನ ಗ್ರಸ್ತಭಸಿತೇನಾಧ್ಯಸ್ತಮಸ್ತೇ ಶಿವೇ ॥೫೪॥

ತ್ರಿಪುಂಡ್ರವಿಧೃತಿಶ್ಶಿವೇ ಕಿಲ ಮಹಾಘಶೈಲಾತುಲಂ
ಕುಲಾಚಲವಿಲೋಪನೇ ಮುದಿರವೃಷ್ಟಿಸೃಷ್ಟಿಪ್ರಭಃ ।
ಭವಾಖಿಲವಿಭಾವರೀ ಪರಮಚಾತುರೀ ಸೀಮಭೂ
ರ್ಭವೇತ ವಿಭವಾಧಿಕಃ ಪರಮಕಾಲಕಾಲಪ್ರಿಯಃ ॥೫೫॥

---

ಜಗತ್ತನ್ನು ರಕ್ಷಿಸಿಕೊಂಡಿರು. ಈಗ ಭಸ್ಮಮಹಿಮೆಯನ್ನು ನಿನಗೆ ವಿವರಿಸಿ ಹೇಳುವೆನು ಕೇಳು" ಎನ್ನುತ್ತಾ ಪಾರ್ಶ್ವವರ್ತಿನಿಯಾಗಿದ್ದ ಪಾರ್ವತಿಯನ್ನು ನೋಡಿ ವಿಷ್ಣುವಿಗೆ ಹೀಗೆ ಉಪದೇಶಮಾಡಿದನು. ॥೫೧-೫೨-೫೩॥

ಅತ್ಯಂತ ಶುಭ್ರವಾದ ಭಸ್ಮವನ್ನು ಯಾರು "ಮಾನಸ್ತೋಕೆ" ಎಂಬ ಮಂತ್ರದಿಂದ ಕೈಯ್ಯಮಧ್ಯದ ಮೂರು ಬೆರಳುಗಳಿಂದ ತ್ರಿಪುಂಡ್ರಾಕಾರದಲ್ಲಿ ಹಣೆಯಲ್ಲಿ ಧರಿಸಿಕೊಳ್ಳುವರೋ, ಅವರು ಸಮಸ್ತ ಪಾಪಮುಕ್ತರಾಗುವರು. ಮತ್ತು ಅವರಿಗೆ ಈಶ್ವರಪಾದಕಮಲದಿಂದ ಉದ್ಭವಿಸಿದ ಮಕರಂದವು ಭಸ್ಮದೊಡಗೂಡಿ, ಪಾಪರಾಶಿಯನ್ನೆಲ್ಲಾ ನಿರ್ಮೂಲಗೊಳಿಸುತ್ತಾ ಸರ್ವದಾ ಶಿವಪಾದದಲ್ಲಿಯೇ ಆಸಕ್ತರಾಗಿರುವಂತೆ ಮಾಡುತ್ತದೆ. ॥೫೪॥

ಮಾನವರಿಗೆ ಭಸ್ಮತ್ರಿಪುಂಡ್ರಧಾರಣೆಯೆಂಬುದು ಮಹಾಪಾಪವೆಂಬ ದೊಡ್ಡ ಪರ್ವತವನ್ನು ಮುಳುಗಿಸುವ ವೃಷ್ಟಿಪ್ರದವಾದ ಸೃಷ್ಟಿಗೆ ಸಮಾನವಾದುದು ; ಮತ್ತು ಸಮಸ್ತ ದುಃಖಮಯವಾದ ಸಂಸಾರವೆಂಬ ರಾತ್ರಿಯ ಕೊನೆಯನ್ನು ತೋರ್ಪಡಿಸುವಂತಹ ಸಾಮರ್ಥ್ಯವು ಆ ಭಸ್ಮಧಾರಣೆಗಿರುವುದು. ಈ ರೀತಿ ಭಸ್ಮವನ್ನು ಧರಿಸು

ಅಭಾವಭವಭಾವಕೃದ್ಭವಪದಾಬ್ಜಭಾವೋದ್ಭವೋ
ಭವೇತ ವಿಭವಾದಿಕಂ ಪ್ರತಿಭವೇಪಿ ಭಾವಸ್ಯ ಹಿ ।
ಶಿವೇ ಭಸಿತಧಾರಣಂ ಸಿತಹಿತಾಮಿತಾರ್ಥಿಹರ
ತ್ರಿಪುಂಡ್ರಮಿದಮೇವ ಮೇ ಪ್ರಬಲಪಾಪತೂಲಾನಲಂ ॥೫೬॥

ಕ್ಷಾರಂ ತ್ವಿದಂ ನಿಖಿಲಪಾಪಹರಂ ಪ್ರದೋಷೇ
ಸಾರಂ ಧೃತಂ ಭಸಿತಮೇವ ಭವೈಕಸಾರಂ ।
ಪಾರಂ ಭವೇತ ಭವಸಾಗರತಾರಣಾಯ
ಹಾರಂ ವರಂ ಶ್ರುತಿಶಿರೋಗತಬೋಧಕಾರಂ ॥೫೭॥

ಅಕಾರ್ಯಕರಣಾಘಹೃತ್ಕರಣಜಾತಮುಷ್ಯಂತತೋ
ವಿಶೇಷಶರಣೇನ ವೈ ಭಸಿತಧಾರಣೇ ನಾದ್ರಿಜೇ ।

---

ವವನು ಕಾಲಕಾಲನೆನಿಸಿದ ಮಹಾದೇವನಿಗೆ ಪ್ರಿಯನೆನಿಸಿ, ಅಷ್ಟೈಶ್ವರ್ಯಶಾಲಿಯಾಗಿ ವಿರಾಜಿಸುವನು. ॥೫೫॥

ಈಶ್ವರನಿಗೆ ಭಸ್ಮಧಾರಣೆಮಾಡಿ ತಾನೂ ಭಸ್ಮವನ್ನು ಹೊಂದುವ ಈಶ್ವರ ಭಕ್ತರಿಗೆ, ಈಶ್ವರಧ್ಯಾನವಿಲ್ಲದ ಸಂಸಾರಿಗಳನ್ನು ಈಶ್ವರಾರಾಧಕರನ್ನಾಗಿ ಮಾಡಿಸಿ ಅವರನ್ನು ಉದ್ಧರಿಸುವ ಶಕ್ತಿ ಈ ಭಸ್ಮದಿಂದ ಬರುವುದು. ಮತ್ತು ಭಸ್ಮಧಾರಣೆಯ ಫಲವಾಗಿ ಈಶ್ವರಭಕ್ತರು ಸರ್ವದಾ ಶಿವಾರಾಧಕರಾಗಿದ್ದು ಪ್ರತಿಜನ್ಮದಲ್ಲಿಯೂ ಐಶ್ವರ್ಯಾದಿ ಸಕಲ ವೈಭವಗಳನ್ನೂ ಪಡೆಯುವರು. ಪಾರ್ವತಿಯೇ, ಒಟ್ಟಿನಲ್ಲಿ ಈ ಭಸ್ಮತ್ರಿಪುಂಡ್ರಧಾರಣೆಯೆಂಬುದು ಪ್ರಬಲವಾದ ಪಾಪರಾಶಿಯೆಂಬ ಹತ್ತಿಗೆ ಅಗ್ನಿ ಪ್ರಾಯವಾಗಿದೆ ಎಂಬುದನ್ನು ತಿಳಿ. ॥೫೬॥

ಈ ಭಸ್ಮವು ಪ್ರದೋಷಕಾಲದಲ್ಲಿ ಧರಿಸಲ್ಪಟ್ಟರೆ ಸಕಲಪಾಪ ನಾಶವಾಗುವುದು. ಸಂಸಾರದ ಮುಖ್ಯ ಸುಖವನ್ನು ಒದಗಿಸುವುದೆಂದರೆ ಈ ಭಸ್ಮವೊಂದೇ. ಈ ಸಂಸಾರಸಾಗರದಿಂದ ಪಾರುಮಾಡಿಸುವ ಶಕ್ತಿಯುಳ್ಳದ್ದೂ, ಉಪನಿಷತ್ತಿನ ಮುಖ್ಯಸಾರವನ್ನು ಸುಲಭವಾಗಿ ತಿಳಿಯಪಡಿಸತಕ್ಕದ್ದೂ, ಈಶ್ವರಭಕ್ತನಿಗೆ ಪ್ರಿಯವೆನಿಸಿದುದೂ ಈ ಭಸ್ಮವೇ. ಇದರಿಂದಲೇ ಮಾನವರು ಸಕಲ ದುಃಖಗಳಿಂದಲೂ ಮುಕ್ತರಾಗುವರು. ॥೫೭॥

ಭಗದೇವತೆಯ ಕಣ್ಣುಗಳನ್ನು ದಕ್ಷಬ್ರಹ್ಮನ ಯಾಗದಲ್ಲಿ ನಾಶಗೊಳಿಸಿದ ಪರಶಿವನ ಪೂಜೆಗೆ ಮುಖ್ಯಕಾರಣವಾಗಿರುವ ಈ ಭಸ್ಮಧಾರಣೆಯು, ಅಕಾರ್ಯವನ್ನಾ

ಶಿರಃ ಕರ ಉರೋದರೇ ಕರಪದೋರುಭಾಗೇ ಧೃತಂ
ಭಗಾಕ್ಷಿಹರಪೂಜನಪ್ರಕರಣೈಕಹೃತ್ಪೂರಣಂ ॥೫೮॥

ದ್ವಿಜಾಂತ್ಯಜವಧಾಚ್ಛಿವೇ ತ್ಯಜತಿ ಪಾತಕಂ ಯತ್ಕೃತಂ
ಕ್ಷರತ್ಯಜಲಿಪೀಗತಂ ಶಿರಸಿ ಧಾರ್ಯಮೇತತ್ಸದಾ ।
ಭಜೇತ ಭಸಿತಂ ಸಿತಂ ದ್ವಿಜವರೋ ನರೋ ವಾಂತ್ಯಜೋ
ಮಮ ಪ್ರಿಯತರೋಂಬಿಕೇ ಭವತಿ ಭಾಗ್ಯಪೂರ್ಣೋಜನಃ ॥೫೯॥

ಇತಿ ಶ್ರೀ ಶಿವರಹಸ್ಯೇ ಈಶ್ವರಾಖ್ಯೇ ದಶಮಾಂಶೇ ಪೂರ್ವಾರ್ಧೇ
ವಿಭೂತಿತ್ರಿಪುಂಡ್ರಧಾರಣಮಹಿಮೇತಿಹಾಸವರ್ಣನಂ ನಾಮ
ಸಪ್ತಮೋಽಧ್ಯಾಯಃ

---

ಚರಿಸಿದುದರಿಂದ ಒದಗಿದ ಮಹಾಪಾಪವನ್ನು ನಾಶಮಾಡುವುದರಲ್ಲಿ ಅತ್ಯಂತ ಸಮರ್ಥವಾದೀತು. ಶಿರಸ್ಸು, ಕೈ, ಹೊಟ್ಟೆ, ಭುಜ, ತೊಡೆ ಇವುಗಳಲ್ಲಿ ಭಸ್ಮವನ್ನು ಧರಿಸುವುದು ಅತ್ಯಂತ ಶ್ರೇಯಸ್ಕರವಾದುದು. ॥೫೮॥

ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ, ಚಂಡಾಲ ಮುಂತಾದವರ ವಧೆಯಿಂದ ಒದಗುವ ಮಹಾಪಾಪವೂ, ಜನ್ಮಾಂತರ ಕರ್ಮಾನುಗುಣವಾಗಿ ಬ್ರಹ್ಮನಿಂದ ಬರೆಯಲ್ಪಟ್ಟ ಹಣೇಬರಹವೂ, ಈ ಭಸ್ಮಧಾರಣೆಯಿಂದ ಮಾಯವಾಗುವುವು. ಒಟ್ಟಿನಲ್ಲಿ ಪಾರ್ವತಿಯೇ, ಮಾನವನು ಜಾತಿಯಲ್ಲಿ ಬ್ರಾಹ್ಮಣನೇ ಆಗಲಿ, ಚಂಡಾಲನೇ ಆಗಲಿ, ಶುಭ್ರವಾದ ಭಸ್ಮವನ್ನು ಯಾವನು ಹಣೆಯಲ್ಲಿ ಧರಿಸುವನೋ ಅವನು ನನಗೆ ಅತ್ಯಂತ ಪ್ರಿಯನೆನಿಸುವನು. ಮತ್ತು ಅವನು ಸಕಲೈಶ್ವರ್ಯಪರಿಪೂರ್ಣನಾಗಿ, ಸದಾ ನನ್ನಲ್ಲಿ ಭಕ್ತಿನಿಷ್ಠನಾಗಿರುವನೆಂಬುದರಲ್ಲಿ ಸಂಶಯವಿಲ್ಲ, ಎಂದು ಪರಶಿವನು ಪಾರ್ವತಿಗೆ ಭಸ್ಮಮಹಿಮೆಯನ್ನು ತಿಳಿಸಿದನು. ॥೫೯॥

ಇಲ್ಲಿಗೆ ಶ್ರೀಶಿವರಹಸ್ಯದ ಹತ್ತನೆಯ ಅಂಶದಲ್ಲಿ ತ್ರಿಪುಂಡ್ರಧಾರಣೆಯ ಮಹಿಮೆಯನ್ನು ವಿವರಿಸುವ ಏಳನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ಶ್ರೀ ಶಿವಾಯನಮಃ ॥

# ಅಥ ಶ್ರೀಶಿವರಹಸ್ಯೇ

## ಈಶಾನಾಖ್ಯೇ

## ದಶಮಾಂಶಪೂರ್ವಾರ್ಧೇ

## ಅಷ್ಟಮೋಽಧ್ಯಾಯಃ

॥ ಶ್ರೀ ಸ್ಕಂದ ಉವಾಚ ॥

ಪುರಾ ಮಂಕಣಕಃ ಸಿದ್ಧಃ ಫಣಿಭೂಷಣಸಾದಧೀಃ ।
ಭಸ್ಮನಿಷ್ಠಸ್ತದಾ ಶಂಭುಂ ತಪಸಾರಾಧ್ಯ ವೈ ಮುನೇ ॥೧॥

ಲೇಭೇ ಸಿದ್ಧ್ಯಷ್ಟಕಂ ವಿಪ್ರ ಅಷ್ಟಮೂರ್ತಿಕೃಪಾರಸೈಃ ।
ಲೇಖಾಲಭ್ಯಂ ಪದಂ ಶಂಭೋರ್ಲಾಸ್ಯಾತ್ಕೈಲಾಸಮಾಪ್ತವಾನ್ ॥೨॥

ಶಿವಪಾದೈಕನಿಷ್ಠೇನ ಮನಸಾ ಸ ಮಹಾಮನಾಃ ।
ಹಾರೋ ಹರೈಕಮನಸಾ ಯೋಗಂ ಮಾಹೇಶ್ವರಂ ಪರಂ ॥೩॥

---

## ಎಂಟನೆಯ ಅಧ್ಯಾಯ

ಶಿವಮಹಿಮೆಯನ್ನೇ ಮುಂದುವರಿಸುತ್ತಾ ಕುಮಾರಸ್ವಾಮಿಯು ಜೈಗೀಷವ್ಯ ನೊಡನೆ ಹೀಗೆಂದನು.—ಹಿಂದೆ ಮಂಕಣಕನೆಂಬೊಬ್ಬ ಸಿದ್ಧಪುರುಷನಿದ್ದನು. ಆತನು ಸದಾ ನಾಗಭೂಷಣನೆನಿಸಿದ ಪರಶಿವನಲ್ಲಿಯೇ ಸ್ಥಿರಬುದ್ಧಿಯುಳ್ಳವನಾಗಿ ತಪಸ್ಸುಮಾಡಿ, ಭಸ್ಮಧಾರಿಯಾಗಿ, ಅಷ್ಟಮೂರ್ತಿಯ ಆರಾಧನೆಯಿಂದ ಅಷ್ಟಸಿದ್ಧಿಗಳನ್ನೂ ಪಡೆದು, ಕೊನೆಗೆ ದೇವತೆಗಳಿಗೂ ಅಲಭ್ಯವಾದ ಶಿವಸನ್ನಿಧಿಯನ್ನು ಸುಲಭವಾಗಿ ಪಡೆದನು. ॥೧-೨॥

ಆತನು ಸದಾಶಿವನ ಪಾದವನ್ನೇ ಭಜಿಸುತ್ತಾ, ಮಾಹೇಶ್ವರಯೋಗವನ್ನೇ ಅಭ್ಯಾಸಮಾಡುತ್ತಾ, ಕಾಮಕ್ರೋಧಾದಿಗಳನ್ನು ದೂರಮಾಡಿ ಅಥರ್ವಶೀರ್ಷೋಪ

ಯುಯೋಜ ವಿಜಿತಕ್ರೋಧಃ ಕಾಮಜಿಚ್ಛಾಂಭವೋತ್ತಮಃ ।
ಶಿವೋಕ್ತೇನೈವ ಮಾರ್ಗೇಣ ಪುಣ್ಯಮಾಥರ್ವಣೋದಿತಂ ॥೪॥

ಚಕ್ರೇ ಶಿರೋವ್ರತಂ ಶ್ರೌತಮಶ್ರಾಂತಮನಸಾ ಮುನಿಃ ।
ಭಸ್ಮನಿಷ್ಠೋ ಭವದ್ವಿಪ್ರೋ ಭಸ್ಮಾಂಗೋ ಭಸ್ಮಭಾವನಃ ॥೫॥

ಶತಂ ವರ್ಷಾಣಿ ಸ ಮುನಿಸ್ತದಾ ಚಕ್ರೇ ಶಿರೋವ್ರತಂ ।
ಸದಾ ತ್ರಿಷವಣಸ್ನಾಯೀ ತ್ರಿವಾರಂ ಭಸ್ಮಭೂಷಣಃ ॥೬॥

ವೈರಾಜಮಗ್ನಿಸಂಧಾನೋ ವಿರಜಾಃ ಸ ರರಾಜ ಹಿ ।
ದ್ವಿಜರಾಜಕಲಾಮೌಳಿಪಾದಾಬ್ಜಭ್ರಮರೋಪಮಃ ॥೭॥

ರುದ್ರಮಾವರ್ತಯನ್ ಭಕ್ತ್ಯಾ ಯುಕ್ತಃ ಸ ಮುನಿರಾಸ ಹಿ ।
ಹಿಮಾಂಶುಪಾಂಡರಂ ಭಸ್ಮ ತಸ್ಯಾಂಗಾತ್ಸುಸ್ರುವೇ ತದಾ ॥೮॥

॥ ಜೈಗೀಷವ್ಯ ಉವಾಚ ॥

ಕ್ರೌಂಚದಾರಣ ಸರ್ವಜ್ಞ ವಿಸ್ಮಯೋ ಮೇ ಮಹಾನಭೂತ್ ।
ಕಥಂ ಮಂಕಣಕಸ್ಸಿದ್ಧಃ ಶಾಂಭವೇ ಭಸ್ಮಭಾವನಃ ॥೯॥

---

ನಿಷತ್ತಿನಲ್ಲಿ ಹೇಳಿದ ಕ್ರಮದಿಂದ ಶಿವಧ್ಯಾನವನ್ನು ಮುಂದುವರಿಸುತ್ತಲಿದ್ದನು. ॥೩-೪॥

ಹಾಗಿರಲು ಮಂಕಣನು ಒಂದುಸಾರಿ ದೃಢಮನಸ್ಸಿನಿಂದ ಭಸ್ಮಧಾರಣಾದಿಗಳನ್ನು ನೆರವೇರಿಸಿಕೊಂಡು ಶಿರೋವ್ರತವನ್ನು ನಡೆಸಿದನು. ಅದನ್ನು ಆತನು ನೂರುವರ್ಷ ಪರ್ಯಂತ ಆಚರಿಸಿ, ತ್ರಿಕಾಲದಲ್ಲಿಯೂ ಸ್ನಾನಮಾಡಿ, ತ್ರಿಕಾಲದಲ್ಲಿಯೂ ಭಸ್ಮಧಾರಣೆಮಾಡಿಕೊಂಡು ಸದಾ ಶುಚಿಯಾಗಿದ್ದನು. ॥೫-೬॥

ವೈರಾಜನಾಮಕವಾದ ಅಗ್ನಿಯನ್ನು ಆರಾಧಿಸಿ ಆತನು ಪಾಪರಹಿತ (ರಜೋಗುಣರಹಿತ) ನಾದನು. ಮತ್ತು ಚಂದ್ರಶೇಖರನೆನಿಸಿದ ಪರಶಿವನ ಪಾದಕಮಲದಲ್ಲಿ ಭ್ರಮರದಂತೆ ಹಾರಾಡುತ್ತಾ, ರುದ್ರಾಧ್ಯಾಯವನ್ನು ಆವರ್ತನೆಮಾಡುತ್ತಾ, ಶಿವಧ್ಯಾನತತ್ಪರನಾಗಿದ್ದನು. ಹೀಗಿರಲು ಆತನ ಮೈಯಿಂದ ಶುಭ್ರವಾದ ಭಸ್ಮವು ಉದ್ಭವಿಸಲಾರಂಭಿಸಿತು. ॥೭-೮॥

ಹಾಗೆ ಹೇಳಿದ ಕುಮಾರಸ್ವಾಮಿಯನ್ನು ನೋಡಿ, ಜೈಗೀಷವ್ಯನು " ಸ್ವಾಮಿ,

ಲೇಭೇ ಸ ಪರಮಾಂ ಸಿದ್ಧಿಮಿತ್ಯವೋದಿ ತ್ವಯಾದ್ಯ ಹಿ ।
ಸರ್ವಾರ್ಥರ್ವಮಹಾಸಾರಂ ಪಾಪಗರ್ವನಿವಾರಣಂ ॥೧೦॥

ಶಿರೋವ್ರತಂ ಕಥಂ ಚಕ್ರೇ ತನ್ಮೇವದ ವಿಶೇಷತಃ ।
ಶಿವಪ್ರಸಾದಪಾತ್ರಂ ವೈ ಮುನಿಃ ಕೇನಾಭವತ್ತದಾ ॥೧೧॥

॥ ಶ್ರೀ ಸೂತ ಉವಾಚ ॥

ಶಿಪಿವಿಷ್ಟೋಪದೇಶೇನ ಕಥಂ ಚಕ್ರೇ ಶಿರೋವ್ರತಂ ।
ತನ್ಮೇ ವದ ವಿಶೇಷೇಣ ಚರಿತಂ ಮಂಕಣಸ್ಯ ಹಿ ॥೧೨॥

ಜೈಗೀಷವ್ಯೇನ ಮುನಿನಾ ಪೃಷ್ಟಸ್ತುಷ್ಟೋಥ ಷಣ್ಮುಖಃ ।
ಸನ್ಮುಖಾಯಾಥ ಮುನಯೇ ಬಭಾಷೇ ಮಾಂಕಣೀಂ ಕಥಾಂ ॥೧೩॥

॥ ಸುಬ್ರಹ್ಮಣ್ಯ ಉವಾಚ ॥

ಶೃಣು ತ್ವಂ ಮುನಿಭಿಸ್ಸಾರ್ಧಂ ಬೃಂದಾರಕಗಣೈರ್ಮುನೇ ।
ಯಥೋಪದಿಷ್ಟೋ ದೇವೇನ ಮುನಿರ್ಮಂಕಣಕಃ ಪುರಾ ॥೧೪॥

---

ಕ್ರೌಂಚಪರ್ವತಭೇದಕನೇ, ಸರ್ವಜ್ಞನೇ, ಮಂಕಣಋಷಿಯು ಶಾಂಭವನಾಗಿದ್ದು ತಪಸ್ಸಿನಿಂದ ಶಂಕರನನ್ನು ಮೆಚ್ಚಿಸಿ ಅಷ್ಟಸಿದ್ಧಿಗಳನ್ನೂ ಪಡೆದನೆಂದು ಹೇಳಿದೆಯಲ್ಲವೆ? ಅವನು ಮಾಡಿದ ತಪಸ್ಸಿನ ಕ್ರಮವೆಂತು? ಮತ್ತು ಅವನಿಂದ ಆಚರಿತವಾದ ಶಿರೋವ್ರತವಿಧಾನವನ್ನೂ ನನಗೆ ತಿಳಿಸುವವನಾಗು. ಅಲ್ಲಪೆ ಅಷ್ಟು ಬೇಗ ಆತನು ಶಿವಾನುಗ್ರಹಕ್ಕೆ ಪಾತ್ರನಾದ ಕ್ರಮವನ್ನೂ ಅರುಹು. ॥೯-೧೦-೧೧॥

ಶಂಕರನು ಶಿರೋವ್ರತವನ್ನು ಮಂಕಣನಿಗೆ ಯಾವ ರೀತಿ ಉಪದೇಶಿಸಿದನು. ಅದನ್ನು ದಯೆಯಿಂದ ನನಗೆ ಈಗಲೇ ಬೋಧಿಸು'' ಎಂದು ವಿನಯದಿಂದ ಜೈಗೀಷವ್ಯನು ಪ್ರಾರ್ಥಿಸಲು ಪ್ರಸನ್ನಮುಖನಾದ ಕುಮಾರಸ್ವಾಮಿಯು ಜೈಗೀಷವ್ಯನ ಮೇಲಿನ ಅಭಿಮಾನದಿಂದ ಮಂಕಣಋಷಿಯ ಇತಿಹಾಸವನ್ನು ಈರೀತಿ ಹೇಳಲುಪಕ್ರಮಿಸಿದನು. ॥೧೨-೧೩॥

“ಜೈಗೀಷವ್ಯನೇ, ಮತ್ತು ಇಲ್ಲಿ ನೆರೆದಿರುವ ಸಕಲ ದೇವತೆಗಳೇ, ನಾನು ಈಗ ಮಂಕಣನಿಗೆ ಈಶ್ವರನು ಉಪದೇಶಿಸಿದ ಶಿರೋವ್ರತವಿಷಯವನ್ನು ವಿವರಿಸುವೆನು, ಸಾವಧಾನದಿಂದ ಕೇಳಿರಿ. ವಿಷಕಂಠನೆನಿಸಿದ ಮಹಾದೇವನ ಪಾದಪದ್ಮಾ

ಗರಭೂಷಣಪಾದಾಬ್ಜೇ ಸದಾ ಪ್ರವಣಮಾನಸಃ ।
ಹಿಮವಚ್ಛಿಖರೇ ರಮ್ಯೇ ಪುಣ್ಯವೃಕ್ಷೋಪಶೋಭಿತೇ ॥೧೫॥

ರಸಾಲತಾಲಹಿಂತಾಲತಮಾಲಾಮಲಕೈರ್ಯುತೇ ।
ಸಾಲಜಾಲ ಮಹಾಬಿಲ್ವವನಸಾಮ್ರಾತಕೈರ್ಯುತೇ ॥೧೬॥

ಪುನ್ನಾಗನಾಗಪೀತಾಮ್ರಲಿಕುಚೈರ್ಬಕುಲೈರ್ಧವೈಃ ।
ಕೇತಕೀಸರ್ಜಭೂರ್ಜಾದ್ಯೈರರ್ಜುನೈಶ್ಚಂದನೈರ್ಯುತೇ ॥೧೭॥

ಕ್ರಮುಕಾಕ್ರಾಮಿತದ್ರಾಕ್ಷಾವಲ್ಲೀ ಗುಚ್ಛವಿರಾಜಿತೇ ।
ಏಲಾಂದೋಲಿತವಲ್ಲೀಜಮಲ್ಲಿಕಾಕುಸುಮೋತ್ಕರಂ ॥೧೮॥

ಕದಂಬವೃಂದಪುಷ್ಪೌಘಾದ್ರಜಸಾಚ್ಛಾದಿ ಭೂತಲೇ ।
ವನಾವನೀರಣನ್ಮಂದ ಸಮೀರಣವಿರಾಜಿತೇ ॥೧೯॥

ತತ್ಪುಷ್ಪಮಕರಂದೋದ್ಯದ್ಗಂಧಬಂಧುರತರ್ಪಿತೇ ।
ಸರೋದ್ಭವಸರೋಜಶ್ರೀವಿರಾಜತ್ಫುಲ್ಲಹಲ್ಲಕೇ ॥೨೦॥

---

ರಾಧಕನಾದ ಮಂಕಣಕನು ಹಿಮಾಲಯಪರ್ವತಶಿಖರದ ಪುಣ್ಯವೃಕ್ಷಗಳಿಂದ ಅಲಂಕೃತವಾದ ಒಂದು ಪುಣ್ಯಭೂಮಿಯಲ್ಲಿ ಕುಳಿತು ತಪಸ್ಸುಮಾಡುತ್ತಿದ್ದನು. ॥೧೪-೧೫॥

ಆ ಪವಿತ್ರಸ್ಥಳವು ಮಾವು, ತಾಳೆ, ಹಿಂತಾಲ, ಹೊಂಗೆ, ನೆಲ್ಲಿ, ಸಾಲ, ಬಿಲ್ವ, ಹಲಸು, ಮಾದಳ, ಮುಂತಾದ ಫಲವೃಕ್ಷಗಳಿಂದ ನಿಬಿಡವಾಗಿದ್ದಿತು. ಸುರಗಿ, ನಾಗಲಿಂಗಪುಷ್ಪ, ಹೊಂಬಣ್ಣದ ಮಾವು, ಗಜನಿಂಬೆ, ಬಕುಲ, ಕಗ್ಗಲಿ, ಕೇತಕೀ, ಸರ್ಜ, ಭೂರ್ಜ, ಮತ್ತಿ, ಚಂದನ ಮುಂತಾದ ನಾನಾಜಾತಿಯ ಮರಗಳು ಹೇರಳ ವಾಗಿದ್ದುವು. ದ್ರಾಕ್ಷಾಗೊಂಚಲುಗಳಿಂದ ತುಂಬಿದ ಬಳ್ಳಿಗಳು ಅಡಕೆಯ ಮರಕ್ಕೆ ಸುತ್ತಿಕೊಂಡಿದ್ದುವು. ಏಲಕ್ಕಿಯ ಗಿಡಗಳಿಗೆ ಹಬ್ಬಿಕೊಂಡಿದ್ದ ಮಲ್ಲಿಗೆಯ ಬಳ್ಳಿಗಳು ಸುಗಂಧಮಯವಾದ ಪುಷ್ಪಗಳಿಂದ ಸುವಾಸನೆಯನ್ನು ಬೀರುತ್ತಿದ್ದುವು. ಕದಂಬ ಪುಷ್ಪಗಳ ಮಕರಂದದಿಂದ ಭೂಮಿಯೆಲ್ಲಾ ಸುವಾಸಿತವಾಗಿದ್ದಿತು. ಮರಗಳ ಮೇಲೆ ಬೀಸುವ ಬೀರುಗಾಳಿಯಿಂದ ವನವಲ್ಲಾ ಧ್ವನಿಗೊಡುತ್ತಿದ್ದಿತು. ಮತ್ತು ಪುಷ್ಪಗಳ ಸುವಾಸನೆಯು ಸರ್ವತ್ರ ಹರಡುತ್ತಿದ್ದಿತು. ಕಮಲಾಕರಗಳಲ್ಲಿ ಅರಳಿರುವ

ಪುಷ್ಪಗುಚ್ಛಫಲದಾನೋದಸಪ್ತಚ್ಛದವಿರಾಜಿತೇ ।
ರಾಜತ್ಕೋಕನದಾನೋದಸಮುದ್ಯನ್ಮಂದಮಾರುತೇ ॥೨೦॥

ಶಾರಿಕಾವಿರತೋಡ್ಡೀನ ಶಾಖಂಡಿಜ ವಿರಾಜಿತೇ ।
ಪುಂಸ್ಕೋಕಿಲಕುಲಾರಾವಕೇಕೀಕೂಜನಸಂಜಿತೇ ॥೨೨॥

ಗಂಧರ್ವಗೀತಬಹುಳಮೃದಂಗಧ್ವನಿಸಂಯುತೇ ।
ಹರಿಣೀಗಣಸಂಚಾರಪಂಕಾಕ್ತಖುರಭೂತಲೇ ॥೨೩॥

ಕರಟೀಕರಸಂಸ್ರಾವಿಮದಾನೋದಿತಭೂತಲೇ ।
ಮಹಾಮಹಿಷಹುಂಕಾರ ಪ್ರತಿಧ್ವನಿತಕಂದರೇ ॥೨೪॥

ಸುಂದರೇ ತದ್ವನೇ ತತ್ರ ಚಚಾರ ಸ ಮಹತ್ತಪಃ ।
ಸ ಹಿ ಮಂಕಣಕಃ ಸಿದ್ಧಃ ಫಣಿಕಂಕಣಪೂಜಕಃ ॥೨೫॥

---

ತಾವರೆಗಳಿಂದಲೂ, ಕಲ್ಹಾರಪುಷ್ಪಗಳಿಂದಲೂ ಆ ವನವು ಮನೋಹರವಾಗಿದ್ದಿತು. ॥೧೬-೧೭-೧೮-೧೯-೨೦॥

ಹೂವುಗಳಿಂದ ತುಂಬಿದ ಏಳಿಲೆ ಬಾಳೆಗಿಡಗಳೂ, ಮಂದಮಾರುತಕ್ಕೆ ಸುಗಂಧವನ್ನೊದಗಿಸುವ ರಕ್ತಕಮಲಗಳೂ, ಶಾರಿಕಾಪಕ್ಷಿಗಳಿಂದ ತುಂಬಿ, ನವಿಲುಗಳಿಗೆ ಆಶ್ರಯವಿತ್ತ ಅನೇಕ ಮರಗಳೂ, ಅಲ್ಲಿ ಸುಂದರತರವಾಗಿದ್ದುವು. ಪುಂಸ್ಕೋಗಿಲೆಗಳ ಗುಂಪು ಕೇಕಾಧ್ವನಿಯನ್ನು ಬೀರುತ್ತಿದ್ದುವು. ಅಲ್ಲಿ ಗಂಧರ್ವರ ಗಾನವೂ ಮೃದಂಗಧ್ವನಿಯೂ ಕೇಳಬರುತ್ತಿದ್ದಿತು. ಹೆಣ್ಣುಜಿಂಕೆಗಳ ಓಡಾಟದಿಂದ ಕೆಸರಿನಲ್ಲಿ ಅವುಗಳ ಗೊರಸುಗಳ ಗುರುತು ಎಲ್ಲೆಲ್ಲೂ ಕಂಡುಬರುತ್ತಿದ್ದಿತು. ಮದ್ದಾನೆಗಳ ಕಪೋಲಪ್ರದೇಶದಿಂದ ಸುರಿಯುವ ಮದೋದಕದ ವಾಸನೆಯು ಅರಣ್ಯವನ್ನೆಲ್ಲಾ ಸುಗಂಧಮಯವನ್ನಾಗಿ ಮಾಡಿದ್ದಿತು. ಕಾಡೆಮ್ಮೆಗಳ ಗರ್ಜನೆಯು ಗುಹೆಯಿಂದ ಪ್ರತಿಧ್ವನಿತವಾಗುತ್ತಿದ್ದಿತು. ಹೀಗೆ ಪ್ರಕೃತಿಸೌಂದರ್ಯದಿಂದ ತುಂಬಿ ತುಳುಕಾಡುವ ಅರಣ್ಯದಲ್ಲಿ ನಾಗಭೂಷಣಪೂಜಕನಾದ ಮಂಕಣಋಷಿಯು ಆನಂದದಿಂದ ತಪಸ್ಸು ಮಾಡುತ್ತಿದ್ದನು. ॥೨೧-೨೨-೨೩-೨೪-೨೫॥

ಮಹಾಲಿಂಗಂ ತತ್ರಮುನಿಃ ಪ್ರತಿಷ್ಠಾಪ್ಯಾರ್ಚಯಚ್ಛಿವಂ ।
ತ್ರಿಕಾಲಂ ಭಸ್ಮನಿರತೋ ವಿರತೋ ವಿಷಯೇಷು ಸಃ ॥೨೬॥

ತ್ಯಕ್ತ್ವೈಷಣಸ್ತ್ರಿಷವಣಂ ಭಸ್ಮಸ್ನಾನರತಸ್ಸದಾ ।
ಅಗ್ನಿರಿತ್ಯಾದಿಭಿರ್ಮಂತ್ರೈರ್ಯಂತ್ರಿತಾಂಗಃ ಸ ಭಸ್ಮನಾ ॥೨೭॥

ತ್ರಿಯಾಯುಷಸ್ತ್ರಿಪುಂಡ್ರಾಂಕೋ ಶಶಾಂಕಾಂಕಿತಮೌಲಿಧೀಃ ।
ಶಂಕಾತಂಕಾದಿರಹಿತಃ ಕಾಲಾಂತಕಸಮರ್ಚಕಃ ॥೨೮॥

ಭಸ್ಮಚ್ಛನ್ನೋ ಭಸ್ಮಸಂಸ್ಥಃ ಸ್ವಸ್ಥೋ ರುದ್ರಮಜೀಜಪತ್ ।
ಶತಂ ವರ್ಷಾಣಿ ಹೃಷ್ಟಾತ್ಮಾ ವರ್ಷಾಸ್ವಭ್ರಾವಕಾಶಕಃ ॥೨೯॥

ಅದಭ್ರಭಕ್ತಿರಭ್ರೇಷ್ವೈಶ್ಛನ್ನೋಽಪಿ ಸ್ವಸ್ಥಮಾನಸಃ ।
ನಿರಿಚ್ಛೋಽನ್ಯಸುರಾರ್ಚಾಯಾಂ ಹೃಚ್ಛಾಯಾದಿವಿವರ್ಜಿತಃ ॥೩೦॥

ಪಂಚಾಗ್ನಿಮಧ್ಯನಿರತೋ ಭಸ್ಮಾಭ್ಯಕ್ತೋ ಭವಾಶ್ರಯಃ ।
ಭವಭಾವಸಮಾಸಕ್ತೋ ಭಾವೋ ಭವಪದಾಶ್ರಯಃ ॥೩೧॥

ಶಾಂತಿದಾಂತ್ಯಾದಿನಿರತೋ ಮುಕ್ತಿಮಾರ್ಗೈಕತತ್ಪರಃ ।
ತಂ ತಾದೃಶಂ ತಪಸ್ಯಂತಂ ಪಶ್ಯಂತಿ ತ್ರಿದಶಾಮುನೇ ॥೩೨॥

---

ಮತ್ತು ಅಲ್ಲಿಯೇ ಒಂದು ಶಿವಲಿಂಗವನ್ನು ಪ್ರತಿಷ್ಠೆಮಾಡಿ, ತ್ರಿಕಾಲದಲ್ಲಿಯೂ, ಸ್ನಾನ, ಭಸ್ಮತ್ರಿಪುಂಡ್ರಧಾರಣೆ ಇವುಗಳಲ್ಲಿ ನಿರತನಾಗಿ, ವಿಷಯಸುಖಗಳನ್ನು ತೊರೆದು ಕಾಲಾಂತಕನನ್ನು ಪೂಜಿಸುತ್ತಿದ್ದನು. ತ್ರಿಕಾಲದಲ್ಲಿಯೂ ಸ್ನಾನಾನಂತರ, 'ಅಗ್ನಿರಿತಿಭಸ್ಮ' ಎಂಬ ಮಂತ್ರದಿಂದಲೂ, ತ್ರ್ಯಾಯುಷಮಿತ್ಯಾದಿ ಮಂತ್ರಗಳಿಂದಲೂ ಭಸ್ಮತ್ರಿಪುಂಡ್ರಧಾರಣೆ ಮಾಡಿಕೊಳ್ಳುತ್ತಿದ್ದನು. ॥೨೬-೨೭-೨೮॥

ಭಸ್ಮವನ್ನು ಮೈಗೆಲ್ಲಾ ಬಳಿದುಕೊಂಡು, ಭಸ್ಮರಾಶಿಯಲ್ಲಿ ಕುಳಿತು ರುದ್ರಮಂತ್ರವನ್ನು ಜಪಿಸುತ್ತಿದ್ದನು. ಹೀಗೆ ಬಯಲಿನಲ್ಲಿ ನೂರು ವರ್ಷಪರ್ಯಂತ ಕುಳಿತು, ಅತಿಶಯವಾದ ಭಕ್ತಿಸಂಪನ್ನನೆನಿಸಿ, ಇತರ ದೇವತಾರಾಧನೆಯಲ್ಲಿ ಮನಸ್ಸಿಡದೆ ಶುದ್ಧಮನಸ್ಸಿನಿಂದ ಶಂಕರನನ್ನು ಪೂಜಿಸುತ್ತಿದ್ದನು. ॥೨೯-೩೦॥

ನಾಲ್ಕುದಿಕ್ಕಿನಲ್ಲಿಯೂ ಅಗ್ನಿಯನ್ನು ಪ್ರತಿಷ್ಠಿಸಿ ತಾನು ಮಧ್ಯೆ ನಿಂತು ಭಸ್ಮಭೂಷಿತಗಾತ್ರನಾಗಿ, ಸೂರ್ಯನನ್ನೇ ನೋಡುತ್ತಾ ಶಿವಪದಧ್ಯಾನಮಗ್ನನಾಗುತ್ತಿದ್ದನು.

ಸರೋಜಾಸನ ಆಗತ್ಯ ತಂ ತದಾ ಪ್ರಾಹ ವಿಸ್ಮಿತಃ ॥೩೩॥
ಬ್ರಹ್ಮನ್ ಬ್ರಹ್ಮಾಹಮಾಗತ್ಯ ತ್ವದಗ್ರೇ ಸಂಸ್ಥಿತೋ ಮುನೇ ।

॥ ಬ್ರಹ್ಮೋವಾಚ ॥

ಸಹೈಭಿಶ್ಚ ಸುರೈಃ ಸಾರ್ಧಂ ವೃಣು ಮತ್ತೋ ವರಂ ವರಂ ॥೩೪॥
ತದಾ ಪದ್ಮಾಸನವಚಃ ಶ್ರುತ್ವಾ ನತ್ವಾ ತಮಬ್ರವೀತ್ ॥೩೫॥

॥ ಮಂಕಣ ಉವಾಚ ॥

ಧನ್ಯೋ ಮಾನ್ಯೋದ್ಯ ತೇ ಬ್ರಹ್ಮನ್ ದರ್ಶನಾದೇವಮೇ ಮನಃ ।
ನಾಹಂ ತ್ವತ್ತೋವರಂ ಯಾಚೇ ಯಾಚೇ ಭಕ್ತಿಂ ಶಿವಸ್ಥಿತಾಂ ॥೩೬॥

ತ್ವಮೇವೇಶಪ್ರಸಾದೇನ ಪ್ರಾಪ್ತೋಸಿ ಪರಮಂ ಪದಂ ।
ವೇದಜಾಲಂ ಸೃಷ್ಟಿಬಲಂ ಬಲಪ್ರಮಥನಾರ್ಚನಾತ್ ॥೩೭॥

ಯಾಹಿ ತ್ವಂ ವೈ ಸುರೈಃ ಸಾರ್ಧಂ ತವ ಲೋಕಂ ಪಿತಾಮಹ ।
ಇತ್ಯುಕ್ತಸ್ತಂ ತದಾ ಪ್ರಾಹ ಮುನಿಂ ಪದ್ಮಾಸನಸ್ತದಾ ॥೩೮॥

---

ಶಾಂತಿ, ತಾಳ್ಮೆ, ತೃಪ್ತಿ ಮೊದಲಾದ ಸದ್ಗುಣಗಳಿಂದ ತುಂಬಿದವನಾಗಿ, ಮೋಕ್ಷ ಮಾರ್ಗದಲ್ಲಿಯೇ ಗುರಿಯಿಟ್ಟು ಘೋರವಾಗಿ ತಪಸ್ಸನ್ನು ಮುಂದುವರಿಸುತ್ತಿದ್ದನು. ಇದನ್ನು ನೋಡಲು ದೇವತೆಗಳು ಬ್ರಹ್ಮನೊಡನೆ ಅಲ್ಲಿಗೆ ಬಂದರು. ಬ್ರಹ್ಮನು ಈ ಮಹರ್ಷಿಯನ್ನು ಕಂಡು ಹೀಗೆಂದನು. ॥೩೧-೩೨-೩೩॥

"ಮಹರ್ಷಿಯೇ, ನಿನ್ನ ತಪಸ್ಸಿಗೆ ಮೆಚ್ಚಿ ಬ್ರಹ್ಮನೆನಿಸಿದ ನಾನು ನಿನ್ನ ಮುಂದೆ ಬಂದು ದೇವತೆಗಳೊಡನೆ ನಿಂತಿರುವೆನು. ನಿನಗೆ ಬೇಕಾದ ವರಗಳನ್ನು ಕೇಳಿಕೊ" ಎಂದು ಬ್ರಹ್ಮದೇವನು ಹೇಳಲು, ಮಂಕಣನು "ಅಯ್ಯಾ ಬ್ರಹ್ಮ ದೇವನೇ, ನಿನ್ನ ದರ್ಶನದಿಂದ ನಾನು ಧನ್ಯನಾದೆನು. ನನ್ನ ಮನಸ್ಸು ಹರ್ಷ ಗೊಂಡಿತು. ಆದರೆ ನಿನ್ನಿಂದ ಯಾವ ವರವೂ ನನಗೆ ಬೇಕಿಲ್ಲ. ಶಿವನಲ್ಲಿ ಸ್ಥಿರವಾದ ಭಕ್ತಿಯುದಯಿಸುವಂತೆ ಪ್ರಾರ್ಥಿಸುವೆನು. ॥೩೪-೩೫-೩೬॥

ಬಲಪ್ರಮಥನೆನಿಸಿದ ಶಂಕರನ ವರಬಲದಿಂದಲ್ಲವೇ ನೀನು ವೇದರಾಶಿಯನ್ನು ಪಡೆದು ಸೃಷ್ಟಿಸಾಮರ್ಥ್ಯವನ್ನು ಹೊಂದಿರುವೆ. ಹೀಗಿರುವಾಗ ನೀನು ನನಗೆ ಯಾವವರವನ್ನು ಕೊಡಬಲ್ಲೆ? ಹೋಗು, ದೇವತೆಗಳೊಡನೆ ನೀನು ನಿನ್ನ

॥ ಬ್ರಹ್ಮೋವಾಚ ॥

ತ್ವಂ ಮಂಕಣಸ್ತಪಸ್ಸಿದ್ಧೋ ಭವ ಭಕ್ತೋಽಸಿ ಸತ್ತಮ ।
ಉತ್ತಮೋಽಸಿ ಮುನೀಂದ್ರಾಣಾಂ ಪ್ರಸನ್ನೋಽಸ್ತು ಭವಸ್ತ್ವಯಿ ॥೩೯॥

ಭವತಾಂ ಭವಶಾಂತಿರ್ಹಿ ಭವಾದೇವ ಭವಿಷ್ಯತಿ ॥೪೦॥

ಭವಿಷ್ಯತಿ ತ್ವಯಿ ಪ್ರೀತೋ ಭವ ಏವ ನ ಸಂಶಯಃ ।
ಭಸ್ಮಚ್ಛನ್ನೋಽಸಿ ನಿರತಾಂ ಸಿದ್ಧೋಽಸಿ ತ್ವಂ ನ ಸಂಶಯಃ ॥೪೧॥

ತಮಾಮಂತ್ರ್ಯ ಮುನಿಂ ತತ್ರ ಯಯೌ ಲೋಕಂ ವಿಧಿಸ್ಸುರೈಃ ।
ಪುನಸ್ತತಾಪ ಸಿದ್ಧೋಽಸೌ ಮಂಕಣೋ ಭಸ್ಮಭೂಷಣಃ ॥೪೨॥

ಫಣಿಭೂಷಣಪಾದಾಬ್ಜಚರಣಸ್ಮರಣಾದರಃ ।
ತಂ ವಿಷ್ಣುರ್ಗರುಡಾರೂಢಃ ಶಂಖಚಕ್ರಗದಾಧರಃ ॥೪೩॥

---

ಲೋಕಕ್ಕೆ ಪ್ರಯಾಣಮಾಡು' ಎಂದು ಹೇಳಲು ಆಗ ಬ್ರಹ್ಮನು ನಗುತ್ತಾ ಮತ್ತಿಂತೆಂದನು ॥೩೭-೩೮॥

'ಮಂಕಣ ಮುನಿಯೇ, ನೀನು ನಿಜವಾಗಿಯೂ ಈಶ್ವರಭಕ್ತನು. ಸಿದ್ಧ ಪುರುಷನು. ಋಷಿಜನರಲ್ಲಿ ನೀನು ಉತ್ತಮೋತ್ತಮನು. ನಿನ್ನಲ್ಲಿ ಶಂಕರನು ಪ್ರಸನ್ನನಾಗುವನು. ನಿನ್ನ ತಪಸ್ಸು ಫಲಪ್ರದವಾಗಲಿ. ಶಿವಭಕ್ತಿಯುದಯಿಸಲಿ. ನಿನ್ನ ಸಂಸಾರದುಃಖವು ಶಮನವಾಗಲಿ. ಶಿವಾನುಗ್ರಹವು ನಿನಗೆ ಜಾಗ್ರತೆ ಲಭಿಸಲಿ. ॥೩೯-೪೦॥

ನೀನು ಭಸ್ಮಭೂಷಿತಗಾತ್ರನಾಗಿ ಶಿವಭಕ್ತಿಯುತನಾಗಿರುವುದರಿಂದ ನಿಜವಾಗಿಯೂ ಶಿವಾನುಗ್ರಹವು ನಿನಗೆ ಒದಗುವುದು' ಎಂದು ಸಮಾಧಾನಮಾಡಿ, ಆ ಋಷಿಯನ್ನು ಬೀಳ್ಕೊಂಡು ಬ್ರಹ್ಮನು ತನ್ನ ಲೋಕಕ್ಕೆ ದೇವತೆಗಳೊಡನೆ ಹೊರಟುಹೋದನು. ಇತ್ತ ಮಂಕಣಮುನಿಯು ಮತ್ತೆ ಉಗ್ರತಪಸ್ಸಿಗೆ ಆರಂಭಿಸಿದನು. ॥೪೧-೪೨॥

ಇದನ್ನು ನೋಡಿ, ಶಿವಪಾದಸ್ಮರಣೆಯಲ್ಲಿಯೇ ನಿರತನಾದ ಮಹಾವಿಷ್ಣುವು ಆತುರದಿಂದ ಶಂಖಚಕ್ರಗದಾಧರನಾಗಿ ಗರುಡನ ಮೇಲೆ ಕುಳಿತು ಅಲ್ಲಿಗೆ ಬಂದನು. ಜೊತೆಯಲ್ಲಿ ಅವನ ಗಣವೆಲ್ಲವೂ ಬಂದಿದ್ದಿತು. ತ್ರಿಲೋಚನನೆನಿಸಿದ ಮಹಾದೇವನ

ಸ್ವಪಾರ್ಷದೈಃ ಪರಿವೃತೋ ಯಯೌ ತಂ ಮುನಿಪುಂಗವಮ್ ।
ತಮಾಭಾಷ್ಯ ಬಭಾಷೈವಂ ವಿಷಮಾಕ್ಷಾರ್ಚನೇ ರತಮ್ ॥೪೪॥

॥ ಶ್ರೀ ವಿಷ್ಣುರುವಾಚ ॥

ಶಾಂಭವೋಽಸಿ ಮುನಿಶ್ರೇಷ್ಠ ಶಿಪಿವಿಷ್ಟಪದಾರ್ಚಕ ।
ನಿಷ್ಠಾಂ ತವೇದೃಶೀಂ ದೃಷ್ಟ್ವಾ ವಿಸ್ಮಯೋ ಮೇ ಮಹಾನಭೂತ್ ॥೪೫॥

॥ ಸೂತ ಉವಾಚ ॥

ತಯಾ ವೀಕ್ಷಿತುಮಾಯಾತಃ ಶಿವಭಕ್ತಿಂ ತವೇದೃಶೀಮ್ ॥೪೬॥

ಇತ್ಥಂ ವಿಷ್ಣುವಚಶ್ಶ್ರುತ್ವಾ ನಿಮೀಲ್ಯ ನಯನೇ ಸ್ವಕೇ ।
ಅಶಾಂಭವಂ ಚ ತಚ್ಚಿಹ್ನಂ ದೃಷ್ಟ್ವಾ ವಿಷ್ಣುಂ ತದಾಬ್ರವೀತ್ ॥೪೭॥

॥ ಮುನಿರುವಾಚ ॥

ನಾಹಂ ತ್ವತ್ತೋ ವರಂ ಯಾಚೇ ಯಾಚೇ ಭಕ್ತಿಂ ಮಹೇಶ್ವರೇ ।
ಅಶಾಂಭವಂ ತ್ವಾಂ ದೃಷ್ಟ್ವೈವ ನಾಹಂ ವೀಕ್ಷ್ಯೇ ಜನಾರ್ದನ ॥೪೮॥

ಯಸ್ಯ ಲಿಂಗಾರ್ಚನೇನೈವ ವಿಷ್ಣುತ್ವಂ ಪ್ರಾಪ್ತವಾನಸಿ ।
ತ್ವಂ ಪಾಲಕೋ ಜಗತ್ಯಸ್ಮಿನ್ ವೈಕುಂಠಸ್ಯಾಧಿಪಃ ಕೃತಃ ॥೪೯॥

---

ಅರ್ಚನೆಯಲ್ಲಿಯೇ ತೊಡಗಿದ್ದ ಮಂಕಣಮಹರ್ಷಿಯನ್ನು ಕುರಿತು ವಿಷ್ಣುವು ಹೀಗೆಂದನು. ॥೪೩-೪೪॥

'ಮುನಿಶ್ರೇಷ್ಠನೇ, ನೀನು ಪರಮಶಾಂಭವನು. ಶಿವಪದಾರ್ಚಕನು. ನಿನ್ನ ಈ ದೃಢವಾದ ಶಿವಭಕ್ತಿಯನ್ನು ನೋಡಿ ಅಚ್ಚರಿಗೊಂಡಿರುವೆನು. ಅಂತಹ ನಿನ್ನ ಭಕ್ತಿಸ್ವರೂಪವನ್ನು ನೋಡಬೇಕೆಂದು ನಾನು ಇಲ್ಲಿಗೆ ಬಂದಿರುವೆನು' ಎಂದ ವಿಷ್ಣುವನ್ನು ನೋಡಿ ಮಂಕಣನು, ಕೂಡಲೇ ಕಣ್ಣುಮುಚ್ಚಿಕೊಂಡನು. ವಿಷ್ಣುವಿನ ಮೈಮೇಲಿದ್ದ ಈಶ್ವರಚಿಹ್ನೆಗೆ ವಿರೋಧವಾಗಿರುವ ಊರ್ಧ್ವತ್ರಿಪುಂಡ್ರಾದಿಗಳನ್ನು ನೋಡಲಾರದೆ ವಿಷ್ಣುವಿನೊಡನೆ ಹೀಗೆಂದನು. ॥೪೫-೪೬-೪೭॥

"ಮಹಾವಿಷ್ಣುವೇ, ನಿನ್ನಿಂದ ನನಗೆ ಯಾವ ವರವೂ ಬೇಡ. ಸರ್ವಾರ್ಥಪ್ರದವಾದ ಈಶ್ವರಭಕ್ತಿಯೊಂದಿದ್ದರೆ ಸಾಕು. ಶಾಂಭವನಲ್ಲದ ನಿನ್ನನ್ನು ನಾನು

ಮಹೇಶೇನ ಪ್ರಸನ್ನೇನ ನ ತ್ವತ್ತೋ ಕಾಂಕ್ಷಯೇ ವರಂ।
ಯಾಹಿ ಯಾಹಿ ಯಥಾ ಜೋಷಂ ವಿಶೇಷೋ ನಾಸ್ತಿತೇ ಮಯಿ ॥೫೦॥

ನಾಹಂ ತ್ವತ್ತೋಭಿಯಾಚೇ ವರಮಮರಧುನೀಧನ್ಯಮೂರ್ಧನ್ಯಮೌಳೇ
ರ್ನಾಹಂ ಚಾನ್ಯಂ ಸುರಂ ವಾ ಶತಮುಖಮುಮರಂ ಶಂಕರಾನ್ಯಂ ನ ವೀಕ್ಷೇ।
ಯತ್ತ್ರ್ಯಕ್ಷಾಕ್ಷತಪಾದಪಂಕಜರಜೋಲೇಶಾಂಶಲೇಶಾಂಶತೋ
ಯಾಚೇಹಂ ವರಮೇವ ನಾವರಮಹಂ ವಿಷ್ಣೋರ್ನ ಈಷ್ಟೇ ಮನಾಕ್॥೫೧॥

ಇತ್ಯುಕ್ತಂ ಮುನಿವಚನಂ ನಿಶಮ್ಯ ಧಾರ್ಷ್ಟ್ಯಂ
ವಿಷ್ಣುಸ್ತಂ ಮುರರಿಪುರಾಬಭಾಷೇ।
ಭೀತೋ ಭಾವಮನೋ ನಿರೀಕ್ಷ್ಯವಿಷ್ಣುಃ
ಜ್ಞಾತ್ವಾ ಭಸಿತಪ್ರೋದ್ಭೂತಪಾಪಂ ತದಾ ॥೫೨॥

---

ಕಣ್ಣೆತ್ತಿಯೂ ನೋಡುವುದಿಲ್ಲ. ಅಶಾಂಭವನ ದರ್ಶನವು ಪಾಪಪ್ರದವಾದದ್ದು. ಹಿಂದೆ ನೀನು ಶಿವಲಿಂಗಾರ್ಚನೆ ಮಾಡಿಯೇ ಈ ವಿಷ್ಣುಪದವಿಯನ್ನೂ, ವೈಕುಂಠ ವಾಸವನ್ನೂ, ಜಗತ್ಪಾಲಕತ್ವವನ್ನೂ ಹೊಂದಿರುವೆ. ಪರಮೇಶ್ವರನು ಪ್ರಸನ್ನನಾಗಿ ಭಕ್ತನಾದ ನನ್ನಲ್ಲಿ ಪ್ರೀತಿಯಿಂದಿರುವುದಾದರೆ ನನಗೆ ನಿನ್ನಿಂದ ಯಾವ ವರವೂ ಬೇಕಿಲ್ಲ. ಮೌನದಿಂದ ನೀನು ನಿನ್ನ ಲೋಕಕ್ಕೆ ಹಿಂದಿರುಗು. ಇಲ್ಲಿ ನಿನಗೆ ವಿಶೇಷ ಕಾರ್ಯವಾವುದೂ ಕಾಣುವುದಿಲ್ಲ. ॥೪೮-೪೯-೫೦॥

ನಿನ್ನಿಂದಾಗಲಿ, ಮತ್ತಾವ ದೇವತೆಗಳಿಂದಾಗಲಿ ನನಗೆ ಯಾವ ವರವೂ ಬೇಡ. ಏಕೆಂದರೆ ನಾನು ದೇವಗಂಗಾಧರನಾದ ಶಂಕರನನ್ನು ಬಿಟ್ಟು ಮತ್ತಾರನ್ನೂ ನಾನು ನೋಡುವುದೂ ಇಲ್ಲ. ಪೂಜಿಸುವುದೂ ಇಲ್ಲ. ಶಿವನನ್ನು ಬಿಟ್ಟು ಯಾರಲ್ಲಿಯೂ ನಾನು ಯಾವ ವರವನ್ನೂ ಕೇಳುವುದಿಲ್ಲ. ದೇವೇಂದ್ರಾದಿಗಳೂ ನನಗೆ ಪೂಜ್ಯರಲ್ಲ. ಮಹಾವಿಷ್ಣುವೇ, ನನಗೆ ಯಾವ ವರವೂ ನಿನ್ನಿಂದ ಬೇಕಿಲ್ಲ. ॥೫೧॥

ಹೀಗೆ ಮಂಕಣಮುನಿಯು ಹೇಳಿದ ಮಾತುಗಳನ್ನು ಕೇಳಿ ವಿಷ್ಣುವು, ಆಶ್ಚರ್ಯಚಕಿತನಾಗಿ, ಸರ್ವಲೋಕಾಧಿಪತಿಯಾದ ಈಶ್ವರನಲ್ಲಿ ಮಂಕಣಮುನಿಯು ಸ್ಥಿರಭಕ್ತಿಯಿಟ್ಟಿರುವುದನ್ನು ನೋಡಿ, ಭಸ್ಮಧಾರಣೆಯಿಂದ ಮುನಿಯು ಪಾಪರಹಿತ ನಾಗಿರುವನೆಂದು ಭಾವಿಸಿ ಅವನಿಗೆ ಹೆದರಿ ಹೀಗೆಂದನು. ॥೫೨॥

|| ಶ್ರೀ ವಿಷ್ಣುರುವಾಚ ||

ತ್ವಂ ಭಾವೋಽಸಿ ಭವೋತ್ತಮಾಂಬುಜಪದಧ್ಯಾನೈಕಸನ್ಮಾನಸೋ
ಭಸ್ಮೋದ್ಧೂಲಿತದಿವ್ಯಭಾಸುರ ಮಹಾದಿವ್ಯ ತ್ರಿಪುಂಡ್ರಾಂಕಿತಃ ।
ತ್ವದ್ಭಾವಂ ವಿಮಲಂ ವಿಲೋಕ್ಯ ತವ ಹೃತ್ ಜ್ಞಾತುಂ ಪ್ರವೃತ್ತಸ್ತ್ವಯಿ
ಭಾವೇಷ್ವೇವ ಭವಾಂತಕೋ ಹಿ ಭಗವಾಂಛೀಘ್ರಂ ಪ್ರಸನ್ನೋಽಭವೇತ್ ||೫೩||

ಇತ್ಯುಕ್ತ್ವಾ ಸ ಯಯೌ ಹರಿರ್ಹರಮಹಾಭಕ್ತಂ ಚ ಯುಕ್ತಂ ಮುನಿಂ
ಸಕ್ತಂ ಶಂಭುಪದಾಂಬುಜಾರ್ಚನರತಂ ಸಂವೀಕ್ಷ್ಯ ಹೃಷ್ಟೋಽಭವತ್ ।
ಲಕ್ಷ್ಮ್ಯಾ ವೈ ಗರುಡೇನ ಪಾರ್ಷದಗಣೈ ರುದ್ರಾಭಿಷಿಕ್ತೋತ್ತಮೈ
ರ್ನೀರೈಸ್ತೈಃ ಸ್ವಶಿರಸ್ಯಹೋಽಭಿಷಿಷಿಚೇ ಧನ್ಯಂ ಅಮನ್ಯನ್ಮುನಿಂ ||೫೪||

|| ಶ್ರೀ ಈಶ್ವರ ಉವಾಚ ||

ಲೇಖಾಶಾಖಾಮುಖಮುಖ ಶಿಖೀನಾಮಾಖ್ಯಯಾ ಪ್ರೋಕ್ತಾಃ
ಸ್ತವ್ಯೈಃ ನಖಶಿಖರಹಿತಾ ಕುರ್ಯುರ್ಗರಂಗುಷ್ಠತೋ ಹಿ ।

---

" ಮುನಿಶ್ರೇಷ್ಠನೇ, ನೀನು ನಿಜವಾಗಿಯೂ ಶಾಂಭವನೆನಿಸಿರುವೆ. ಪರಶಿವನ ಪಾದಕಮಲಧ್ಯಾನದಲ್ಲಿ ನೆಟ್ಟ ಮನಸ್ಸುಳ್ಳವನಾಗಿರುವೆ. ದಿವ್ಯವೂ ಶುಭ್ರವೂ ಆದ ಭಸ್ಮದಿಂದ ತ್ರಿಪುಂಡ್ರವನ್ನು ಧರಿಸಿ ನಿನ್ನ ಪರಿಶುದ್ಧಭಾವವನ್ನು ಪ್ರಕಾಶಗೊಳಿಸಿರುವೆ. ಈ ನಿನ್ನ ಸ್ಥಿರವಾದ ಶಿವಭಕ್ತಿಯನ್ನು ನೋಡುವುದಕ್ಕಾಗಿಯೇ ನಾನು ಇಲ್ಲಿಗೆ ಬಂದೆನು. ನಿಜವಾಗಿಯೂ ನಿನ್ನ ಭಕ್ತಿಗೆ ಈಗ ಪರಶಿವನು ಮೆಚ್ಚಿ ಪ್ರಸನ್ನನಾಗುವನು. ಇದು ನಿಜ." ||೫೩||

ಈರೀತಿ ಮಂಕಣಮುನಿಯನ್ನು ಮಹಾವಿಷ್ಣುವು ಬಹಳವಾಗಿ ಹೊಗಳಿ, ಆ ಮುನಿಯು ಈಶ್ವರಪದಾರ್ಚನೆಯಲ್ಲಿ ನಿರತನಾಗಿಯೂ, ಹರಮಹಾಭಕ್ತನಾಗಿಯೂ ಇರುವುದನ್ನು ನೋಡಿ ಬಹುವಾಗಿ ಸಂತೋಷಪಟ್ಟನು. ಅನಂತರ ವಿಷ್ಣುವು ಲಕ್ಷ್ಮೀ, ಗರುಡ ಮತ್ತು ತನ್ನ ಅನುಚರರು, ಇವರೊಡಗೂಡಿ, ಪರಶಿವನ ಅಭಿಷೇಕದ ನೀರನ್ನು ತಲೆಗೆ ಪ್ರೋಕ್ಷಿಸಿಕೊಂಡು ಮಂಕಣಮುನಿಯು ಪವಿತ್ರನಾದವನೆಂದು ತಿಳಿದು ಮುಂದಕ್ಕೆ ಪ್ರಯಾಣಮಾಡಿದನು. ||೫೪||

ಪಾರ್ವತಿಯೇ, ಯಾರು ವಿಧಿವತ್ತಾದ ಶಿವಾಗ್ನಿಯಿಂದ ಉಪಲಬ್ಧವಾದ ಭಸ್ಮವನ್ನು ಲೇಖಾರೂಪದಲ್ಲಿ ತನ್ನ ಬೆರಳುಗಳಿಂದ ಉಗುರು ಮತ್ತು ಕೂದಲು ಇವನ್ನು

ತೇ ಸರ್ವೇ ಸುಖಿನೋ ಭವಂತಿ ಗಿರಿಜೇ ತೇ ಷಣ್ಮುಖಾಸ್ಯೋಪಮಾ
ಅನ್ಯೇ ತದ್ರಹಿತಾಶ್ಚ ದುಃಖಪರಮಾ ಮತ್ಸಂಮುಖೇ ವರ್ಜಿತಾಃ ॥೫೫॥

ಕತಿ ಕತಿ ಮತಿಹೀನಾ ದುರ್ಹೃದಾಂಗಾ ವಿಹೀನಾ
ಹೀನಾದೀನಾತಿಮೀನಾ ಇವ ಭುವಿ ತರಲಾಸೂರಘರ್ಮಾನುತಪ್ತಾಃ ।
ಭಾಲೇ ಭಸ್ಮಾದಿಹೀನಾ ಕೃತಿಮತಿವಿಮುಖಾ ಮಯ್ಯನಂತೇ ಕೃತಾಂತ
ಶ್ರಾಂತಾ ವಾತಾ ಇವೇತಿ ಪ್ರತಿಜನಿವಿನುತಾ ಬಾಲವಾರೇಯತುಲ್ಯಾಃ ॥೫೬॥

ಇತಿ ಶ್ರೀಶಿವರಹಸ್ಯೇ ದಶಮಾಂಶೇ ಪೂರ್ವಾರ್ಧೇ ಮಂಕಣೋಪಾಖ್ಯಾನ
ಕಥನೇ ಮಂಕಣತಪಶ್ಚರ್ಯಾ ವರ್ಣನಂ ನಾಮ ಅಷ್ಟಮೋಽಧ್ಯಾಯಃ

---

ಮಾತ್ರ ಬಿಟ್ಟು ಮಿಕ್ಕ ಸರ್ವಾಂಗಗಳಿಗೂ ಬಳಿದುಕೊಳ್ಳುವರೋ, ಅವರು ನಿಜವಾಗಿಯೂ ಸುಖಿಗಳೆನಿಸುವರು. ಅವರ ಮುಖವು ಸಾಕ್ಷಾತ್ಕುಮಾರಸ್ವಾಮಿಯ ಮುಖದಂತೆ ಕಾಂತಿಯಿಂದ ಪ್ರಜ್ವಲಿಸುವುದು. ಹಾಗೆ ಭಸ್ಮರಹಿತರಾದವರಿಗೆ ಎಂದಿಗೂ ದುಃಖ ತಪ್ಪದು. ಮತ್ತು ಅವರಿಗೆ ಯಾವಾಗಲೂ ನನ್ನ ಸಾನ್ನಿಧ್ಯವು ದೊರಕಲಾರದು. ॥೫೫॥

ಪಾರ್ವತಿಯೇ, ಲೋಕದಲ್ಲಿ ದುರದೃಷ್ಟಶಾಲಿಗಳಾದವರು, ವಿವೇಕಶೂನ್ಯರಾಗಿ ಭಸ್ಮವಿಲ್ಲದ ಹಣೆಯಿಂದ ವಿಹರಿಸುವರು. ನಿಜವಾಗಿಯೂ ಅವರು ನೀರಿನಿಂದ ಈಚೆಗೆ ಬಿದ್ದು, ಬಿಸಿಲಿನ ಬೇಗೆಯಿಂದ ಬೇಯುವ ಮೀನುಗಳಂತೆ ನರಕಭಾಗಿಗಳಾಗಿ ವ್ಯಥೆಪಡುವರು. ಮತ್ತು ಅವರಿಗೆ ಎಂದೂ ಯಮಭಯವಾಗಲಿ, ಜನ್ಮಾಂತರಗಳನ್ನು ಹೊಂದುವ ಕಷ್ಟವಾಗಲಿ ತಪ್ಪುವುದಿಲ್ಲ. ಬಿರುಗಾಳಿಗೆ ಸಿಕ್ಕಿದ ಎಳಗರುಕೆಯಂತೆ ಅವರ ಜೀವನವು ಸರ್ವದಾ ಪರಿತಪಿಸುತ್ತಾ ಬಳುಕುತ್ತಿರುವುದು. ಅವರಿಗೆ ಎಂದಿಗೂ ಈಶ್ವರಸಾನ್ನಿಧ್ಯವು ದೊರಕಲಾರದು ಎಂದು ಶಂಕರನು ಪಾರ್ವತಿಗೆ ಹೇಳಿದುದನ್ನು ಜೈಗೀಷವ್ಯಮಹರ್ಷಿಗೆ ಕುಮಾರಸ್ವಾಮಿಯು ತಿಳಿಸಿದನು. ॥೫೬॥

ಇಲ್ಲಿಗೆ ಶ್ರೀಶಿವರಹಸ್ಯದ ದಶಮಾಂಶದಲ್ಲಿ ಎಂಟನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

॥ ಶ್ರೀ ಶಿವಾಯ ನಮಃ ॥

# ಅಥ ಶ್ರೀಶಿವರಹಸ್ಯೇ

## ಈಶಾನಾಖ್ಯೇ

## ದಶಮಾಂಶಪೂರ್ವಾರ್ಧೇ

## ನವಮೋಽಧ್ಯಾಯಃ

॥ ಶ್ರೀಸ್ಕಂದ ಉವಾಚ ॥

ಏವಂ ತಪಸ್ಯತಸ್ತಸ್ಯ ಮಂಕಣಸ್ಯ ಮಹಾಮುನೇಃ ।
ಭಸ್ಮಾಭ್ಯಕ್ತಸ್ಯ ನಿಯತಂ ತ್ರಿಪುಂಡ್ರಾಲಂಕೃತಸ್ಯ ಚ ॥೧॥

ಶರತ್ಸುಧಾಂಶುಧವಳಂ ಭಸ್ಮಾಂಗಾನ್ನಿರ್ಗತಂ ಮುನೇ ।
ತತಸ್ಸ್ವಾಂಗಂ ಸಮುದ್ವೀಕ್ಷ್ಯ ತ್ರ್ಯಕ್ಷಲಿಂಗಾರ್ಚನಪ್ರಿಯಃ ॥೨॥

ಭಸ್ಮನಿಷ್ಠೋ ಮುದಂ ಪ್ರಾಪ ಶಿಪಿವಿಷ್ಟನಿವಿಷ್ಟಧೀಃ ।
ಜಪಂಚ್ಛ್ರೀಶತರುದ್ರೀಯಂ ಹರ್ಷವರ್ಷೇಣ ತರ್ಷಿತಃ ॥೩॥

ಪುಲಕೈರುಲ್ಲಸದ್ಗಾತ್ರಸ್ತ್ರಿನೇತ್ರಪದಭಾವನಃ ।
ತತಸ್ತುಷ್ಟಾವ ಹೃಷ್ಟಾತ್ಮಾ ಮಂಕಣಃ ಫಣಿಕಂಕಣಂ ॥೪॥

---

## ಒಂಬತ್ತನೆಯ ಅಧ್ಯಾಯವು

ಮಂಕಣಮುನಿಯು ಹಾಗೆಭಸ್ಮಲಿಪ್ತಗಾತ್ರನಾಗಿ, ತ್ರಿಪುಂಡ್ರಾಲಂಕೃತನಾಗಿ ಪರಶಿವನ ಅರ್ಚನೆಯಲ್ಲಿಯೇ ಮಗ್ನನಾಗಿ ಉಗ್ರತಪಸ್ಸನ್ನಾಚರಿಸುತ್ತಿರಲು ಅವನ ದೇಹದಿಂದ ಶರಚ್ಚಂದ್ರನಂತೆ ಶುಭ್ರವಾದ ಭಸ್ಮವು ಉದ್ಭವಿಸತೊಡಗಿತು. ॥೧-೨॥

ಅದನ್ನು ನೋಡಿ ಮಂಕಣನು ಬಹಳವಾಗಿ ಹರ್ಷಗೊಂಡನು. ಮೈಯಲ್ಲಿ ರೋಮಾಂಚವೊದಗಿತು. ಅತಿಶಯವಾದ ಸಂತೋಷದಿಂದ ತುಷ್ಟಾಂತರಂಗವುಳ್ಳವ

॥ ಮಂಕಣ ಉವಾಚ ॥

ಅಹೋ ಮೇ ತಪಸಸ್ಸಿದ್ಧಿಃ ಸಿದ್ಧಾ ಶಂಭೋಃ ಪ್ರಸಾದತಃ ।
ಮಂದಗೇಭ್ಯೋ ಭಸ್ಮಧಾರಾಃ ಶರದ್ರಾಕಾಕರಾಸ್ಸದಾ ॥೫॥

ವಿನಿರ್ಗತಾ ಮಮಾತೀವ ಪ್ರಮೋದಾಮೋದತೇ ಮನಃ ।
ಇತ್ಥಂ ಸ ಮಂಕಣಸ್ತತ್ರ ವಿಕಥನ್ ಮೇರುಮಸ್ತಕೇ ॥೬॥

ನನರ್ತಾನಂದವಿವಶೋ ಮಹೇಶಂ ಸಂಸ್ತುವಂಸ್ತದಾ ।
ಶತಂ ವರ್ಷಾಣಿ ಮುದಿತೋ ಭಸ್ಮ ಸ್ವಾಂಗೇಭಿವೀಕ್ಷ್ಯಸಃ ॥೭॥

ಹೇ ಶಂಭೋ ಭಗವನ್ ಮಹೇಶ ಗಿರಿಜಾಜಾನೇ ನ ಜಾನೇ ವಿಭೋ
ತ್ವತ್ತೋಽಹಂ ಶಶಿಸಂಗರಂಗಿತಮಹಾಗಂಗಾತರಂಗೋದ್ಯತ ।
ವಿದ್ಯುತ್ಪುಂಜಸಮಾಧಿಕಾವೃತಜಟಾಜೂಟಂ ನಿಟಾಲೇಕ್ಷಣಂ
ವಂದೇ ದೇವಶಿಖಾಮಣಿಂ ಗರಗಲೋದಾರಂ ಹರಂ ಶಂಕರಂ ॥೮॥

---

ನಾಗಿ ಶಂಕರನನ್ನೇ ಮನಸ್ಸಿನಲ್ಲಿ ಸ್ಮರಿಸುತ್ತಾ, ಶತರುದ್ರೀಯಾನುವಾಕಗಳನ್ನು ಪಠಿಸುತ್ತಾ ಈರೀತಿ ಪರಶಿವನನ್ನು ಹೊಗಳತೊಡಗಿದನು. ॥೩-೪॥

"ಆಹಾ! ಪರಶಿವಾನುಗ್ರಹದಿಂದ ನನ್ನ ತಪಸ್ಸು ಇಂದಿಗೆ ಸಫಲವಾಯಿತು. ನನ್ನ ಅಂಗದಿಂದ ಶರಚ್ಚಂದ್ರನಂತೆ ಶುಭ್ರವಾದ ಭಸ್ಮಧಾರೆಯು ಹೊರಹೊರಡುತ್ತಿದೆ. ಇದರಿಂದ ನನಗೆ ಬಹು ಆನಂದವೊದಗುತ್ತಿದೆ." ಎಂದು ಆಹ್ಲಾದಪಡುತ್ತಾ, ಸಂತೋಷಪರವಶನಾಗಿ ನೂರುವರ್ಷ ಪರ್ಯಂತ ಅದೇ ರೀತಿ ಭಸ್ಮಧಾರಾವಿಶಿಷ್ಟನಾಗಿ ಮೇರುಪರ್ವತದ ಶಿಖರಭಾಗದಲ್ಲಿ ನೆಲಸಿ ಪ್ರತಿನಿತ್ಯವೂ ಸಂತೋಷದಿಂದ ಕುಣಿಯುತ್ತಾ ಹೀಗೆ ದೇವದೇವನಾದ ಶಂಕರನನ್ನು ಸ್ತುತಿಸಿದನು. ॥೫-೬-೭॥

ಶಂಕರನೇ, ಷಡ್ಗುಣೈಶ್ವರ್ಯಸಂಪನ್ನನೇ, ಗಿರಿಜಾರಮಣನೇ, ಸರ್ವವ್ಯಾಪಿಯೇ, ನಿನ್ನ ಶಿರಸ್ಸಿನಲ್ಲಿರುವ ಚಂದ್ರಕಲೆಯಿಂದಲೂ, ಗಂಗಾತರಂಗದಿಂದಲೂ, ಪ್ರಪಂಚವೇ ಬೆಳಗುತ್ತಿದೆ. ನಿನ್ನ ಜಟಾಕಲಾಪವಾದರೋ ಮಿಂಚಿನಂತೆ ಪ್ರಜ್ವಲಿಸುತ್ತಿರುವುದು. ಹಣೆಗಣ್ಣಿನಿಂದಲೂ, ವಿಷಕಂಠದಿಂದಲೂ ವಿರಾಜಿಸುವ ಮಹಾದೇವನೇ, ನಿನ್ನ ಮಹಿಮೆಯನ್ನು ನಾನು ಪೂರ್ಣವಾಗಿ ತಿಳಿಯಲಾರೆ. ॥೮॥

ಮಾರಾಪಾರಶರಾದಿಭೀಕರಕಣಾಸಾರೇಣ ಸಂಹಾರಿಣಂ
ಭೋ ಭರ್ಗ ತ್ರಿಜಗಚ್ಛರಣ್ಯ ಚರಣಾಂಭೋಜಪ್ರಭಾಭಾವತಃ ।
ಭಸ್ಮೋದ್ಧೂಲಿತ ಕಾಮಿನೀ ವರಧೃತಾರ್ಧಾಂಗಾಂಗಸಂಗಪ್ರಭೋ
ತ್ವತ್ತೋ ವೇದ್ಮಿ ನ ಚೈವ ಕುತ್ಸಿತಸುರೋದಾರಂ ವರಂ ಪಾಮರಂ ॥೯॥

ಹಾರಂ ಧೀರತರಂ ಮಮೈವ ಹೃದಯಂ ಜಾನಾಸಿ ಶಂಭೋಧುನಾ
ವೀಕ್ಷಾಶಿಕ್ಷಿತಮನ್ಮಥಾಂತಕಪುರಂ ದಕ್ಷಾದಿದೀಕ್ಷಾಪಹಂ ।
ತ್ರ್ಯಕ್ಷಂ ಭಿಕ್ಷಿತಮೌನಿಯೋಷಿತ ಮುಮಾಕಾಂತಂ ಕ್ಷಪೇಶಾಂಕಿತಂ
ಉಕ್ಷಾಂಗಸ್ಥಿತಮಪ್ರಮೇಯವಿಭವಾಧ್ಯಕ್ಷಂ ಹಿ ವೀಕ್ಷ್ಯೇ ಕದಾ ॥೧೦॥

ಭಕ್ಷೀಭೂತಗರಂ ಭವಾರ್ಣವಹರಂ ಪಕ್ಷೀಂದ್ರವಾಹಾರ್ಚಿತಂ ॥೧೧॥

---

ಮಹಾದೇವನೇ, ಮನ್ಮಥನ ಕ್ರೂರವಾದ ಬಾಣಪರಂಪರೆಗಳಿಗೆ ಸಿಕ್ಕಿ ನಾನಾರೀತಿ ನರಳುವ ಕ್ಷುದ್ರದೇವತೆಗಳ ವಿಷಯವನ್ನೇ ನಾನರಿಯೆ. ತ್ರಿಜಗತ್ಪಾಲಕನಾದ ನಿನ್ನ ಪಾದಪದ್ಮಾರಾಧನೆಯಿಂದಲೂ, ಭಸ್ಮಲಿಪ್ತಗಾತ್ರನಾಗಿ, ಅರ್ಧನಾರೀಶ್ವರನಾಗಿ ಶೋಭಿಸುವ ನಿನ್ನ ಧ್ಯಾನದಿಂದಲೂ ನನಗೆ ನಿಜವಾದ ತಿಳಿವಳಿಕೆಯು ಬಂದಿರುವುದು. ನಿನ್ನನ್ನು ಬಿಟ್ಟು ಮತ್ತಾವ ವಿಷಯಜ್ಞಾನವೂ ನನಗೆ ತೋರುವುದಿಲ್ಲ. ॥೯॥

ಶಂಭೋ, ನನ್ನ ಮನಸ್ಸು ಸರ್ವದಾ ಶಿವಧ್ಯಾನವಿಶಿಷ್ಟವಾಗಿ ಧೀರಸ್ವಭಾವದಿಂದಿರುವುದನ್ನು ನೀನು ತಿಳಿದಿರುವೆ. ಕೇವಲ ದೃಷ್ಟಿಯಿಂದಲೇ ಮನ್ಮಥನನ್ನೂ, ಯಮನನ್ನೂ, ತ್ರಿಪುರಗಳನ್ನೂ ದಕ್ಷಬ್ರಹ್ಮನ ದೀಕ್ಷಾಯಾಗವನ್ನೂ ನಾಶಮಾಡಿದ, ನೇತ್ರತ್ರಯವಿಶಿಷ್ಟವಾದ ನಿನ್ನ ಸ್ವರೂಪವನ್ನೇ ನಾನು ಸರ್ವದಾ ಧ್ಯಾನಮಾಡುವೆನು. ಋಷಿಸ್ತ್ರೀಯರಿಂದ ಪ್ರಾರ್ಥಿಸಲ್ಪಟ್ಟವನೂ, ಗೌರೀಪತಿಯೂ, ಚಂದ್ರಶೇಖರನೂ, ವೃಷಭವಾಹನನೂ, ಅತಿಶಯವಾದ ವೈಭವಕ್ಕೆ ಅಧಿಪತಿಯೂ ಆದ, ವಿಷಭಕ್ಷಕನೆನಿಸಿದ ನಿನ್ನ ಸ್ವರೂಪವೇ ನಮ್ಮನ್ನು ಸಂಸಾರ ಸಮುದ್ರದಿಂದ ಪಾರುಗಾಣಿಸುವುದು. ವಿಷ್ಣುವಿನಿಂದ ಅರ್ಚಿತವಾದುದೂ ನಿನ್ನ ಮೂರ್ತಿಯೇ. ಅಂತಹ ಸುಂದರತಮಸ್ವರೂಪವನ್ನು ನಾನು ಸರ್ವದಾ ಧ್ಯಾನಮಾಡುವೆನು. ॥೧೦-೧೧॥

ಸೋಮಾವತಂಸ ವರಸಾಮಸುಗೀತ ಶಂಭೋ
ನಿರ್ಧೂತಕಾಮ ಗಿರಿಜಾಪರಿಪೂರ್ಣಕಾಮ ।
ನಿಸ್ಸೀಮಭೂಮ ಮಹಿಮನ್ ಭಗವನ್ನಮಸ್ತೇ
ತ್ವಂ ವ್ಯೋಮ ಧಾಮ ಗರಿಮಾ ಲಘಿಮಾ ಸಮಶ್ಚ ॥೧೨॥

ತ್ವಚ್ಛಾಸನಂ ಭಸಿತಮೇವ ಭವಾದಿರೋಗ
ಸಂಶಾಮನಂ ಶಮನಭೇದನಮೇವ ಶಂಭೋ ।
ತದ್ಭೇಷಜಂ ಭವತಿ ಭೂತಿಕರಂ ಮಹೇಶ
ಪಾರಂ ಭವೇಶ ಭವಸಾಗರತಾರಣಾಯ ॥೧೩॥

ಲಿಂಪನ್ನಿಲಿಂಪಪದವೀಮದವೀಯಸೀಂ ವೈ
ಯಾತ್ಯೇವ ತದ್ಭಸಿತಫಾಲತಲಂ ಸಿತೇನ ।
ಮೃತ್ಸ್ನಮಲೀಕತಿಲಕಂ ತ್ವಲಿಕೇ ಹಿ ಬಿಭ್ರನ್
ಕೃತ್ಸ್ನಂ ಮಹಾಘನಿಚಯಂ ಸ ಲಭೇತ ಶಂಭೋ ॥೧೪॥

---

ಚಂದ್ರಶೇಖರನೇ, ಸಾಮಗಾನದಿಂದ ಸ್ತುತನಾದವನೇ, ಕಾಮನಾಶಕನೇ, ಪಾರ್ವತೀಮನೋಹರನೇ, ನೀನು ಅಪ್ರತಿಮ ವೀರನು. ಅಸದೃಶಮಹಿಮನು. ಅಪ್ರಮೇಯರೂಪನು. ಲಘುರೂಪದಿಂದಲೂ ಬೃಹದ್ರೂಪದಿಂದಲೂ ವಿರಾಜಿಸುವ ಪರಮಪುರುಷನು ನೀನು. ಇಂತಹ ನಿನ್ನನ್ನು ನಾನು ಸರ್ವದಾ ಧ್ಯಾನಿಸುವೆನು. ॥೧೨॥

ಮಹಾದೇವನೇ, ಈ ಭಸ್ಮವು ಸಂಸಾರವೆಂಬ ರೋಗವನ್ನು ನಾಶಮಾಡಬಲ್ಲದು. ಯಮನನ್ನು ನಿಗ್ರಹಿಸುವ ದಿವ್ಯೌಷಧವೆಂದರೆ ಈ ಭಸ್ಮವೇ. ಇದೇ ನಿನ್ನ ಭಕ್ತರಿಗೆ ಒಂದು ಐಶ್ವರ್ಯರೂಪವು. ಸಂಸಾರಸಾಗರದಿಂದ ಉದ್ಧರಿಸಬಲ್ಲ ವಸ್ತುವೆಂದರೆ ಇದೊಂದೇ ಅಲ್ಲವೆ! ಅದೂ ನಿನ್ನಪ್ಪಣೆ ತಾನೆ! ॥೧೩॥

ಪರಶಿವನೇ, ಶುಭ್ರವಾದ ಈ ಭಸ್ಮವನ್ನು ಯಾರು ಭಕ್ತಿಯಿಂದ ಹಣೆಯಲ್ಲಿ ತ್ರಿಪುಂಡ್ರಾಕಾರವಾಗಿ ಧರಿಸುವರೋ, ಅವರು ಬಹುದೂರವೆನಿಸಿದ ದೇವಮಾರ್ಗದಲ್ಲಿ ಸುಲಭವಾಗಿ ಸಂಚರಿಸುವರು. ಅದನ್ನು ಬಿಟ್ಟು, ಮಿಥ್ಯಾಭೂತವಾದ ಮಣ್ಣಿನ ತಿಲಕವನ್ನು ಹಣೆಯಲ್ಲಿಟ್ಟು ತಿರುಗುವವರು, ಮಹಾಪಾಪಾನ್ವಿತರಾಗಿ ಘೋರವಾದ ನರಕವನ್ನು ಹೊಂದುವರು. ॥೧೪॥

ಯೋ ನಿತ್ಯಂ ಭಸಿತತ್ರಿಪುಂಡ್ರರಹಿತೋ ಹಾ ಆಹಿತೋಗ್ನಾವಥೋ
ಮಗ್ನೋ ಯಾತ್ಯನುವಾಸರಂ ಸ ನಿತರಾಂ ನಗ್ನೋ ವಿಭೂತಿಂ ವಿನಾ ।
ಶಾವಾಸ್ಪೃಶ್ಯಸಮಂ ತದೀಯಮಧುನಾ ದೇಹಂ ಹಿ ದಾಹೋಪಮಂ
ಹಾ ಹಾ ಹಂತ ಭವೇತ ಪಾತಕಕರಂ ತ್ರ್ಯಕ್ಷ್ನಾಧುನಾ ನೇಕ್ಷಯೇ ॥೧೫॥

ತಸ್ಯಾನುಕ್ಷಣದುರ್ಮುಖಾಧಮಮುಖಂ ದೃಷ್ಟಂ ಚ ದುಃಖಾಸ್ಪದಂ
ಯಾತ್ಯೇವಾನುದಿನಂ ಸಶಾವಜಮಹಾಸ್ಪೃಶ್ಯೋಪಮಃ ಸೂತಕೀ ।
ಘೋರಂ ಯಾತಿ ಚ ಯಾತನಾಂ ಯಮಕೃತಾಂ ನಿಸ್ಸೀಮಕಾಮಾತಿಗಾಂ
ತಸ್ಯೋದ್ಧಾರಪರಂಪರಾಸು ನ ಹರಿರ್ವಾ ಚಾಂಪತಿರ್ನೋ ಸುರಾಃ ॥೧೬॥

ಭಂಡಾಸ್ತರ್ಕವಿತರ್ಕಕರ್ಕಶಧಿಯೋ ಭಸ್ಮತ್ರಿಪುಂಡ್ರೋಜ್ಝಿತಾ
ಸ್ತೇ ಸೌರ್ಯೋದ್ಧತಬಾಹುದಂಡ ವಿಧೃತಪ್ರೋಚ್ಚಂಡದಂಡಾಹತಾಃ ।
ಧಾರಾಖಡ್ಗನಿಪಾತಿತಾಧಮಮಹಾಮುಂಡಾದಿಷಂಡಾಕುಲಾ
ಕೋದಂಡೋರುಶರಾಭಿಘಾತಸುಮಹಾದೇಹಾ ದ್ರವಂತ್ಯಾರ್ತವತ್ ॥೧೭॥

---

ವಿಭೂತಿತ್ರಿಪುಂಡ್ರಧಾರಣೆಯಿಲ್ಲದೆ ಆಹಿತಾಗ್ನಿಯಾದರೂ, ಅವಧೂತನಾದರೂ ಆತನು ಪರಿಶುದ್ಧನೆನಿಸುವುದಿಲ್ಲ. ಅವನ ದೇಹವು ಮೃತಾಶೌಚದಿಂದ ಕೂಡಿದವನ ಶರೀರದಂತೆ ಸರ್ವದಾ ಅಸ್ಪೃಶ್ಯವಾದುದು. ಮತ್ತು ಅಪವಿತ್ರವಾದುದು. ಅವನ ದರ್ಶನಸ್ಪರ್ಶನಾದಿಗಳು ಮಹಾಪಾಪವನ್ನುಂಟುಮಾಡುತ್ತವೆ. ಆದ್ದರಿಂದ ನಾನು ಎಂದೂ ಅಂತಹವನನ್ನು ನೋಡಲಾರೆನು. ಇದು ನನ್ನ ಸಂಕಲ್ಪ. ॥೧೫॥

ಹಣೆಯಲ್ಲಿ ಭಸ್ಮತ್ರಿಪುಂಡ್ರವಿಡದ ಅಧಮಾಧಮನೆನಿಸಿದ ಮಾನವನ ಮುಖ ದರ್ಶನವು ದುಃಖಕ್ಕೆ ಕಾರಣವಾಗುವುದು. ಅವನು ಸದಾ ಮೃತಾಶೌಚವಿಶಿಷ್ಟನಂತೆ ಅಸ್ಪೃಶ್ಯನೆನಿಸುವನು. ಕೊನೆಗೆ ಆತನಿಗೆ ಭಯಂಕರವಾದ ನರಕವೂ ಯಮ ಬಾಧೆಯೂ ತಪ್ಪಲಾರದು. ಅಂತಹವನನ್ನು ಉದ್ಧರಿಸಲು ವಿಷ್ಣುವಾಗಲಿ, ಇತರ ಯಾವ ದೇವತೆಗಳಾಗಲಿ ಸಮರ್ಥರೆನಿಸುವುದಿಲ್ಲ. ಪರಶಿವನಲ್ಲದೆ ಅವನನ್ನು ಮತ್ತಾರೂ ರಕ್ಷಿಸಲಾರರು. ॥೧೬॥

ತರ್ಕವಿತರ್ಕಾದಿಗಳಿಂದ ಕ್ರೂರಸ್ವಭಾವದವರಾಗಿ, ಭಕ್ತಿವಿರಹಿತರಾಗಿ, ಭಸ್ಮತ್ರಿಪುಂಡ್ರವಿಲ್ಲದೆ ತಿರುಗುವ ಭಂಡರು, ಯಮನ ಉದ್ಧತವಾದ ಬಾಹುದಂಡ ಗಳಿಗೆ ಸಿಲುಕಿ ಯಮದಂಡದಿಂದ ಆಹತರಾಗಿ, ಯಮದೂತರ ನಿಶಿತವಾದ

ಯಾದೃಕ್ಷಾ ದಕ್ಷಶಿಕ್ಷಾ ಕ್ಷುಭಿತಸುರಗಣಾಧ್ಯಕ್ಷಸಂಧುಕ್ಷಿತಾಕ್ಷಾ
ಧ್ವಾಂಕ್ಷಾ ವೀಕ್ಷಾ ಭುಜೋತ್ರಕ್ಷಿತಿಧರಶರಣಾವಾರಣಾಃ ಕಕ್ಷಮುಖ್ಯಾಃ।
ತಾದೃಕ್ಷಾ ಕ್ಷಾರಹೀನಾ ವಿಧಿಹಿತನಿಹಿತಾಗಾಧಗೋಧಾನುಯೋಧಾ
ನಾ ಧಾವಂತಿ ದ್ರುತಂ ತೇ ಶರವರಗತಿದಾಃ ತ್ರ್ಯಕ್ಷರೂಕ್ಷಾಃ ಕಟಾಕ್ಷಾಃ॥೧೮॥

॥ ಮಂಕಣ ಉವಾಚ ॥

ಶಿವಾರ್ಚನಪರೌ ಕರೌ ಶಿವವಿಲೋಕನೇ ಲೋಚನೇ
ಶಿವಧ್ವನಿಪರೇ ಶ್ರುತೀ ಶಿವನವೋವಿನೋದಂ ಶಿರಃ।
ಅಹೋ ಪರಮದುರ್ಲಭಂ ಕಿಮಪಿ ಭಾಗ್ಯಮಸ್ಮಾದೃಶಂ
ಶಿವೈಕವಿಷಯಂ ಮನಃ ಶಿವಪತಿವ್ರತಾ ಭಾರತೀ ॥೧೯॥

॥ ಶ್ರೀಸ್ಕಂದ ಉವಾಚ ॥

ಏವಂ ಸ್ತುವಂತಂ ನೃತ್ಯಂತಂ ಮಂಕಣಂ ಶಿವತತ್ಪರಂ।
ಶಾಂಭವಂ ತೇ ಸುರಾ ದೃಷ್ಟ್ವಾ ವಿಸ್ಮಯೋತ್ಫುಲ್ಲಲೋಚನಾಃ ॥೨೦॥

---

ಕತ್ತಿಯ ಅಲಗುಗಳಿಗೆ ತಮ್ಮ ಮುಂಡವನ್ನು ಕೊಟ್ಟು ಅವರ ಧನುರ್ಬಾಣಗಳ ಹೊಡೆತದಿಂದ ಕರಗಿ ನೀರಾಗಿ ಹೆಂಗಸರ ಆರ್ತವದಂತೆ ಅಪವಿತ್ರರೆನಿಸುವರು. ॥೧೭॥

ದಕ್ಷಬ್ರಹ್ಮನ ಯಾಗದಲ್ಲಿ ದೇವೇಂದ್ರನೇ ಮೊದಲಾದವರನ್ನು ಯಾವ ದೃಷ್ಟಿಯಿಂದ ಪರಶಿವನು ಓಡಿಸಿದನೋ, ಯಾವ ದೃಷ್ಟಿಗೆ ಪಾತ್ರರಾಗಿ, ಆದಿಶೇಷ, ಆದಿಕೂರ್ಮ, ಅಷ್ಟದಿಗ್ಗಜಗಳು ಶಿವರಕ್ಷಣೆಯನ್ನು ಪಡೆದವೋ, ಮತ್ತು ಬ್ರಹ್ಮಾದಿ ದೇವತೆಗಳು ಯಾವ ಮಧುರವಾದ ಕಟಾಕ್ಷದಿಂದ ರಕ್ಷಿತರಾದರೋ, ಅಂತಹ ದಿವ್ಯ ವಾದ ಪರಶಿವನ ಕರುಣಾಪಾಂಗವು ಭಸ್ಮಭೂಷಿತರಲ್ಲದವರಿಗೆ ಎಂದಿಗೂ ಲಭಿಸ ಲಾರದು. ಮತ್ತು ಅವರನ್ನು ಯಾವಾಗಲೂ ರಕ್ಷಿಸಲಾರದು. ॥೧೮॥

ಶಿವಪೂಜೆಮಾಡುವ ಕೈಗಳು, ಶಿವಸ್ವರೂಪವನ್ನು ನೋಡುವ ಕಣ್ಣುಗಳು ಶಿವನಾಮಗಳನ್ನುಕೇಳುವ ಕಿವಿಗಳು, ಶಿವನಿಗೆ ಎರಗುವ ತಲೆ, ಶಿವಚಿಂತನೆಮಾಡುವ ಮನಸ್ಸು, ಶಿವನನ್ನೇ ನಂಬಿ ಸೇವಿಸುವ ಮಾತು, ಇವು ಜನಸಾಮಾನ್ಯರಿಗೆ ಎಂದೂ ಲಭಿಸಲಾರವು. ನಮ್ಮ ಅದೃಷ್ಟವಿಶೇಷದಿಂದ ಈಗ ಇವೆಲ್ಲಾ ಪ್ರಾಪ್ತವಾಗಿವೆ. ॥೧೯॥

ಹೀಗೆ ಸ್ತೋತ್ರಮಾಡುತ್ತಾ ನರ್ತನಮಾಡುತ್ತಿರುವ ಮಂಕಣ ಮಹರ್ಷಿ ಯನ್ನು ನೋಡಿ ದೇವತೆಗಳೆಲ್ಲರೂ ದಿಗ್ಭ್ರಾಂತರಾದರು. ಅವರ ಕಣ್ಣಿಗೆ ದೇವ

ನೃತ್ಯಮಾನಂ ಜಗಚ್ಚಾಪಿ ಸಸುರಾಸುರಮಾನವಂ ।
ಅಧರೋತ್ತರಮುದ್ಭ್ರಾಂತಂ ಶಾಂಭವಸ್ಯ ತಪಸ್ಯಯಾ ॥೨೧॥

ನಾನರ್ಥೀದಂ ಜಗತ್ಕಿಂ ವಾ ಇತಿ ಚಿಂತಾಕುಲಾಂತರಾಃ ।
ಪದ್ಮಯೋನೇಃ ಸದ್ಮ ಗತ್ವಾ ಪ್ರೋಚುರ್ವೃತ್ತಂ ಮುನೇಸ್ಸುರಾಃ॥೨೨॥

॥ ಸುರಾ ಊಚುಃ ॥

ಪದ್ಮಯೋನೇ ನಮಸ್ತೇಽಸ್ತು ಲೋಕಸರ್ಜಕ ಪಾಹಿ ನಃ ।
ತರ್ಜಮಾನಾನ್ ಗರ್ಜಮಾನಾನ್ ವಯಂ ಭೀತ್ಯಾ ಪ್ರಜಾಪತೇ॥೨೩॥

ಶಾಂಭವೋ ಮಂಕಣೋ ನಾಮ ಫಣಿಭೂಷಣಪಾದಧೀಃ ।
ಸ ಭಸ್ಮಧಾರಣಾತ್ ಹೃಷ್ಟೋ ನಿಷ್ಠಾಮಾತ್ಯಂತಿಕೀಂ ಗತಃ ॥೨೪॥

ಮೇರುಮೌಲೌ ಸಲಿಂಗಾಗ್ರೇ ನೃತ್ಯತ್ಯುನ್ಮತ್ತವನ್ಮುನಿಃ ।
ತೇನೇದಂ ಭ್ರಾಮ್ಯತೇ ಬ್ರಹ್ಮನ್ ಜಗತ್ಸ್ಥಾವರಜಂಗಮಂ ॥೨೫॥

ಅಕಾಂಡಮೇವ ಬ್ರಹ್ಮಾಂಡಂ ನಾನರ್ಥೀದಂ ನಿವಾರಯ ।
ಇತ್ಯುಕ್ತಃ ಸ ಸುರೈರ್ಬ್ರಹ್ಮಾ ವಿಚಿಂತ್ಯ ಮನಸಾ ಚಿರಂ ॥೨೬॥

---

ಮಾನವರಾಕ್ಷಸರಿಂದ ತುಂಬಿದ ಈ ಜಗತ್ತೇ ಕುಣಿಯುತ್ತಿರುವಂತೆ ಕಂಡುಬಂದಿತು. ಇದರಿಂದ ಭಯಪಟ್ಟು ಚಿಂತಾಕ್ರಾಂತರಾಗಿ ದೇವತೆಗಳೆಲ್ಲರೂ ಬ್ರಹ್ಮನ ಮನೆಗೆ ಹೋದರು. ॥೨೦-೨೧-೨೨॥

ಅಲ್ಲಿ ಬ್ರಹ್ಮನನ್ನು ಕುರಿತು "ಪದ್ಮಸಂಭವನೇ, ನಿನಗೆ ನಮಸ್ಕಾರ. ಲೋಕ ಸೃಷ್ಟಿಕಾರಕನೇ, ನಮ್ಮನ್ನು ಸಲಹು. ಬಹಳವಾಗಿ ಹೆದರಿಬಂದಿರುವ ನಮಗೆ ಈಗ ಪ್ರಸನ್ನನಾಗು. ಪ್ರಕೃತ ಮಂಕಣನೆಂಬ ಮುನಿಯೊಬ್ಬನು ಸರ್ವದಾ ಪರಶಿವನ ಪಾದವನ್ನೇ ಸ್ಮರಿಸುತ್ತಾ ಭಸ್ಮಧಾರಣೆಯಿಂದ ಶಿವಧರ್ಮವನ್ನು ಬಹಳವಾಗಿ ಆಶ್ರಯಿಸಿರುವನು. ॥೨೩-೨೪॥

ಮೇರುಶಿಖರದಲ್ಲಿ ನಿಂತು ಶಿವಲಿಂಗದ ಮುಂದೆ ಶಿವಸ್ತೋತ್ರವನ್ನು ಪಠಿಸುತ್ತಾ ಅವನು ಹುಚ್ಚನಂತೆ ಕುಣಿಯುತ್ತಿರುವನು. ಅದರ ಫಲವಾಗಿ ಸ್ಥಾವರ ಜಂಗಮಾತ್ಮಕವಾದ ಈ ಜಗತ್ತೇ ಸುತ್ತುತ್ತಿರುವಂತೆ ನಮಗೆ ಕಾಣುತ್ತಿದೆ. ಈ

ಸುರಾನ್ ಬ್ರಹ್ಮಾ ತದಾ ಪ್ರಾಹ ಭಕ್ತಿಂ ವೀಕ್ಷ್ಯ ಮುನೇಸ್ತದಾ ॥೨೭॥

॥ ಶ್ರೀ ಬ್ರಹ್ಮೋವಾಚ ॥

ಶಾಂಭವೋಽಯಂ ಮುನಿಶ್ರೇಷ್ಠಃ ಪೂರ್ವಂ ಮದ್ವರವಾರಕಃ ।
ಮಯಾ ನಿವಾರಿತುಂ ಶಕ್ಯೋ ನಾಸೌ ಮುನಿರಯಂ ಸುರಾಃ ॥೨೮॥

ನ ಶಾಂಭವೇಷು ಧಾರ್ಷ್ಟ್ಯಂ ಮೇ ನ ವಿಷ್ಣೋರ್ವಾಪಿವಾ ಸುರಾಃ ।
ತ್ರ್ಯಕ್ಷಂ ಪ್ರಸಾದ್ಯ ಯತ್ನೇನ ಭವವೈದ್ಯಂ ಮಹೇಶ್ವರಂ ॥೨೯॥

ತೇನೈವ ಶಮಯಿಷ್ಯೇಽಹಂ ವ್ಯೇತು ವೋ ಮಾನಸೋ ಜ್ವರಃ ।
ಇತ್ಯುಕ್ತ್ವಾ ಸ ಸುರೈಸ್ಸಾರ್ಧಂ ಕೈಲಾಸಂ ಶಂಕರಂ ಯಯೌ ॥೩೦॥

ಸುರೈಶ್ಚ ವಿಷ್ಣುನಾ ಚೈವ ನಿರುದ್ಧೋ ನಂದಿನಾ ತದಾ ।
ತದ್ದ್ವಾರಿ ಸ ಗಿರೇಸ್ತತ್ರ ಗಿರಾಂನಾಥಃ ಸುರೈಸ್ಸಹ ॥೩೧॥

ರಮಾನಾಥೇನ ಸ ತದಾ ಉಮಾನಾಥಂ ಪ್ರಸನ್ನಧೀಃ ।
ತುಷ್ಟಾವ ವಿಮಲೋದಾರವಚೋಭಿಃ ಶಿವಮೇವ ಹಿ ॥೩೨॥

---

ಜಗತ್ತಿನ ಅಕಾಂಡತಾಂಡವದಿಂದ ಹೆದರಿ ನಾವು ಇಲ್ಲಿಗೆ ಬಂದೆವು" ಎಂದು ದೇವತೆಗಳು ಮೊರೆಯಿಡಲು ಆಗ ಬ್ರಹ್ಮನು ಸ್ವಲ್ಪಹೊತ್ತು ಯೋಚಿಸಿ ಮಂಕಣಮುನಿಯ ಭಕ್ತಿಯವಿಷಯವಾಗಿ ದೇವತೆಗಳೊಡನೆ ಹೀಗೆಂದನು. ॥೨೫-೨೬-೨೭॥

"ದೇವತೆಗಳಿರಾ, ಆ ಮುನಿಯು ಪರಮಶಾಂಭವನು. ಹಿಂದೆ ಅವನು ನನ್ನ ವರವನ್ನೇ ನಿರ್ಲಕ್ಷಿಸಿದನು. ಇಂತಹವನನ್ನು ತಡೆಯಲು ನನ್ನಿಂದಾಗಲಾರದು. ಈಶ್ವರಭಕ್ತರ ವಿಷಯದಲ್ಲಿ ನನಗಾಗಲಿ, ವಿಷ್ಣುವಿಗಾಗಲಿ, ಬಲಪ್ರಯೋಗಮಾಡಲು ಸಾಧ್ಯವಿಲ್ಲ. ಆದ್ದರಿಂದ ಭವರೋಗವೈದ್ಯನಾದ ಪರಶಿವನನ್ನು ಮೊದಲು ಪ್ರಸನ್ನಗೊಳಿಸಿ, ಅವನಿಂದಲೇ ನಿಮ್ಮ ಭಯವನ್ನು ಹೋಗಲಾಡಿಸುವೆನು. ಇನ್ನು ನಿಮ್ಮ ಮನೋವ್ಯಥೆಯನ್ನು ಬಿಡಿ" ಎಂದು ಬ್ರಹ್ಮನು ಸಮಾಧಾನಮಾಡಿ, ಆ ದೇವತೆಗಳೊಡನೆ ಶಿವಸ್ಥಾನವಾದ ಕೈಲಾಸವನ್ನು ಕುರಿತು ತೆರಳಿದನು. ॥೨೮-೨೯-೩೦॥

ಬ್ರಹ್ಮನು ಹಾಗೆ ವಿಷ್ಣುಸಮೇತನಾಗಿ ದೇವತೆಗಳೊಡನೆ ಕೈಲಾಸಗಿರಿಯ ಸಮೀಪಕ್ಕೆ ಹೋದೊಡನೆ ಆ ಗಿರಿಮುಖವನ್ನು ಕಾಯುತ್ತಿದ್ದ ನಂದಿಯು ದಾರಿ

॥ ಬ್ರಹ್ಮಾದ್ಯಾದೇವಾ ಊಚುಃ ॥

ಶಂಭೋ ಬಾಲಮೃಗಾಂಕಶೇಖರ ಜಟಾಜೂಟೋರುಘೋಟೀರಯು
ಸ್ಫಾರೋರ್ವೀಧರಧೈರ್ಯದಾರುಣಮಹಾಗಂಗಾತರಂಗೌಘಹೃತ್ ।
ಕಾಲಾಂಧಾಂತಕಕಾಮದಕ್ಷಭಗದೃಕ್ಸಂಹಾರ ಪಾಹ್ಯದ್ಯ ನೋ
ದೇವಾನ್ ಮಂಕಣನೃತ್ತಭೀತಿಪರಮಾನಾಶ್ವಾಸಯಾದ್ಯ ಪ್ರಭೋ ॥೩೩॥

ಪ್ರಾಲೇಯಾಚಲಕನ್ಯಕಾವಿಲಸಿತ ಶ್ರೀಮತ್ತ್ವದೇಹಪ್ರಭೋ
ಮನ್ಯುಂ ಸಂಹರ ದೈತ್ಯನಾಶಕ ಹರ ತ್ವತ್ತೋ ಹಿ ನಾನ್ಯಸ್ಸುರಃ ।
ಧನ್ಯಾನ್ನಃ ಕುರು ಪಾಪಜನ್ಯಸುರತಾದುಃಖಂ ವಿಹನ್ಯಪ್ರಭೋ
ಸ್ವರ್ಧುನ್ಯೇಂದುಕಲಾಲಲಾಮ ಭಗವನ್ ತ್ವಂ ಚಾಪ್ಯನನ್ಯಾಗತಿಃ ॥೩೪॥

---

ಯಲ್ಲಿಯೇ ಎಲ್ಲರನ್ನೂ ತಡೆದುಬಿಟ್ಟನು. ಆಗ ಮತ್ತೆ ಬ್ರಹ್ಮನು, ವಿಷ್ಣು ಮತ್ತು ಇತರ ದೇವತೆಗಳೊಡಗೂಡಿ, ಮೃದುಮಧುರವಾದ ವಚನಗಳಿಂದ ಶಂಕರನನ್ನು ಈ ರೀತಿ ಪ್ರಾರ್ಥನೆಮಾಡಿದನು. ॥೩೧-೩೨॥

" ಶಂಕರನೇ, ಚಂದ್ರಶೇಖರನೇ, ನಿನ್ನ ಜಟಾಜೂಟದಲ್ಲಿ ಬಂಧಿತನಾಗಿರುವ ಆದಿಶೇಷನ ಧೈರ್ಯವು ಗಂಗಾನದಿಯ ಭಯಂಕರವಾದ ಅಲೆಗಳ ಗರ್ಜನೆಯಿಂದ ಮಾಯವಾಗುತ್ತಿರುವುದು. ಯಮನನ್ನೂ ಅಂಧಕಾಸುರನನ್ನೂ, ಮನ್ಮಥ ಮತ್ತು ದಕ್ಷಬ್ರಹ್ಮರನ್ನೂ ಸೋಲಿಸಿ ಓಡಿಸಿ, ಭಗದೇವತೆಯ ಕಣ್ಣನ್ನು ಕಿತ್ತು, ತಾನೇ ತಾನಾಗಿ ನಲಿಯುವ ಮಹಾನುಭಾವನೇ, ಈಗ ನಮಗೆ ಮಂಕಣನ ನಾಟ್ಯವೇಗದಿಂದ ಒದಗಿರುವ ಭೀತಿಯನ್ನು ನಿವಾರಿಸು. ॥೩೩॥

ಗಿರಿರಾಜಕುಮಾರಿಯಿಂದ ಅತಿಶಯವಾದ ಕಾಂತಿಪಡೆದ ಮಹಾದೇವನೇ, ದೈತ್ಯನಾಶಕನೇ, ನಮ್ಮ ಮೇಲಿನ ಕೋಪವನ್ನು ಕಮ್ಮಿ ಮಾಡು. ನಮ್ಮನ್ನು ಧನ್ಯರೆನಿಸು. ಅನೇಕ ಪಾಪಫಲದ ಪರಿಣಾಮವಾಗಿ ಈ ದೇವತ್ವವನ್ನು ನಾವು ಹೊಂದಿರುವೆವು. ಗಂಗಾನದಿಯಿಂದಲೂ, ಚಂದ್ರಕಲೆಯಿಂದಲೂ ವಿರಾಜಿಸುವ ಮಹಾನುಭಾವನೇ, ನಮಗೆ ನಿನ್ನನ್ನು ಬಿಟ್ಟರೆ ಮತ್ತಾರು ರಕ್ಷಕರಿರುವರು ? ನೀನೇ ನಮಗೆ ಶರಣನು. ॥೩೪॥

ಭವ ಭೂತಪತೇ ಸುರೇಷು ಭಾವ್ಯಂ
ಭವದುಃಖಂ ಭುವಿ ನಾಶಯಾಶು ಭಾವ್ಯೈಃ ।
ಭವ ಭಾವೇನ ಭಯಂ ನ ಚೈವ ನೋ
ವಿಭವಂ ಚಾಪಿ ಭವೇ ಭವಾಯ ನಃ ॥೩೫॥

ಅಭ್ಯರ್ಣಂ ಭವ ತಾವಕೀನಚರಣಂ ಸಂತಾರ್ಣಮೇವಾದ್ಯ ನೋ
ಭಾವ್ಯೋದ್ಯಂ ಭವಕಾರ್ಣವೈಕತರಣೇ ಉದ್ಗೀರ್ಣಮೇವ ಪ್ರಭೋ ।
ಪಾಹ್ಯಸ್ಮಾಂಛರಣಾಯ ಪೂರ್ಣದಯಯಾ ದೀರ್ಣಂ ಸುರಾಣಾಂ ಗಣಂ
ತೂರ್ಣಂ ಘೂರ್ಣಿತಮೇತದದ್ಯ ಸುಮುನೇರ್ನೃತ್ತಂ ಹಿ ನಿರ್ವಾಪಯ ॥೩೬॥

ಹರಿಶ್ರುತಿಶಿಖಿಬಾಣಘೋಣಘೂರ್ಣ
ತ್ರಿಪುರವಿದಾರಣ ಶೇಷಭೂಷಣಾದ್ಯ ।
ಫಣಿಮಣಿಘೃಣಿಕಂಕಣೋರುಹಸ್ತ
ಪ್ರಮಥಾಧೀಶ ಸನಾಥಯಾಶು ನಃ ॥೩೭॥

---

ಸಕಲ ಜನ ರಕ್ಷಕನೇ, ಪಂಚಭೂತಗಳಿಗೂ ಒಡೆಯನೆನಿಸಿದವನೇ, ದೇವತೆಗಳಿಗೆ ಭೂಲೋಕದಿಂದ ಬರುತ್ತಿರುವ ಈ ದುಃಖವನ್ನು ನೀನೇ ನಿವಾರಣೆಮಾಡಬೇಕು. ನಿನ್ನನ್ನು ನಂಬುವುದರಿಂದ ನಮಗೆ ಯಾವ ಭಯವೂ ಇರುವುದಿಲ್ಲ. ನಿನ್ನ ಅನುಗ್ರಹದಿಂದ ನಮಗೆ ಸಕಲೈಶ್ವರ್ಯಗಳೂ, ಅನಾಯಾಸವಾಗಿ ಲಭಿಸುವುವು. ॥೩೫॥

ಮಹೇಶ್ವರನೇ, ನಿನ್ನ ಪಾದವೇ ಈಗ ನಮ್ಮನ್ನು ದುಃಖಸಮುದ್ರದಿಂದ ಪಾರುಗಾಣಿಸಬೇಕಾಗಿದೆ. ಪರಶಿವಭಕ್ತಿಯೆಂಬುದು ಸಂಸಾರಸಾಗರದಿಂದ ಉದ್ಧರಿಸಬಲ್ಲ ಶಕ್ತಿಯೆನ್ನುವ ಅಂಶವು ನಮಗೆ ತಿಳಿದಿರುವ ವಿಷಯ. ಈ ಮಂಕಣಮುನಿಯ ನಾಟ್ಯವೇಗಕ್ಕೆ ಹೆದರಿ ನಿನ್ನನ್ನೇ ಮೊರೆಹೊಕ್ಕಿರುವ ಈ ದೇವಗಣವನ್ನು ಜಾಗ್ರತೆ ನಿನ್ನ ಕರುಣಾಕಟಾಕ್ಷದಿಂದ ಉದ್ಧರಿಸಿ ರಕ್ಷಿಸು. ॥೩೬॥

ತ್ರಿಪುರವಿನಾಶಕಾಲದಲ್ಲಿ ಹರಿಯನ್ನು ಬಾಣವನ್ನಾಗಿಯೂ, ವೇದಗಳನ್ನು ಕುದುರೆಯನ್ನಾಗಿಯೂ ಅಗ್ನಿಯನ್ನು ಚಾವಟಿಯನ್ನಾಗಿಯೂ ಮಾಡಿಕೊಂಡ ನಾಗಭೂಷಣನೇ, ಪ್ರಮಥಾಧೀಶನೇ, ನಾಗರತ್ನಗಳಿಂದ ನಿರ್ಮಿತವಾದ ಹಸ್ತಾಭರಣವುಳ್ಳವನೇ, ನಮ್ಮನ್ನು ರಕ್ಷಿಸು. ನಮಗೆ ನೀನು ನಾಥನಾಗಿ ನಿಲ್ಲು. ॥೩೭॥

ಗರಗುರುವರ ಗೌರವೋರುಬಿಭ್ಯ
ತ್ರಿದಶಾನಾಂ ಶಿವ ದುರ್ದಶಾವಿನಾಶ ।
ಅವಿನಾಶಶರೀರವ್ಯೋಮಕೇಶ
ಜಗದಾಕಾಶಶರೀರಕೋಶಕಾಶ ॥೩೮॥

ಮುನಯಃ ಪ್ರಶಮಾಯನಾಃ ಸದಾ ತೇ
ಶಮನಾಘಾತಪದಂ ಹೃದಾಭಿಧಾಯ।
ಸ ಮುದಾಯಮಿಮಂ ಮುದಾ ತ್ವಘಾಣಂ
ಮದನಾರೇ ಕಿಲ ನಾಶಯಂತಿ ಶಂಭೋ ॥೩೯॥

ಶಂಭೋ ತ್ವದಂಕವಸತೇಃ ಕಿಲ ಮಂಕಣೋಯಂ
ತುಲ್ಯಪ್ರಭೋ ಭಸಿತಭಾಸಿತನುಃ ಸದ್ವೈಷಃ ।
ಕ್ರೌಂಚಾಂತಕಸ್ಯ ಸದೃಶಃ ಸುದೃಶಾ ತಮೀಕ್ಷ್ಯ
ಸಂವಾರಯಾಶು ನಟನಾಜ್ಜಗತೋಽವನಾಯ ॥೪೦॥

---

ವಿಷಕಂಠನೇ, ಶುಭ್ರವಾದ ದೇಹವುಳ್ಳವನೇ, ದೇವತೆಗಳಿಗೆ ಒದಗುವ ಭಯವನ್ನೂ ದುರವಸ್ಥೆಯನ್ನೂ ನಿವಾರಣೆಮಾಡುವವನೇ, ನೀನು ಸದಾ ನಾಶರಹಿತನು. ನಿನಗೆ ಅಂತರಿಕ್ಷವೇ ಒಂದು ಕೇಶಪಾಶ. ಈ ಜಗತ್ತೇ ನಿನ್ನ ದೇಹ. ಇದೇ ನಿನ್ನ ನಿಧಿ. ಇಂತಹ ಮಹಾಮಹಿಮನೆನಿಸಿದ ನೀನು ನಮ್ಮನ್ನು ತಪ್ಪದೆ ಸಲಹು. ॥೩೮॥

ಶಂಕರನೇ, ಮಹರ್ಷಿಗಳು ಶಾಂತರೀತಿಯಿಂದ ಪಾಪರಹಿತರಾಗಿ ಒಂದೇ ಕಡೆ ಕುಳಿತು, ಯಮಬಾಧಾವಿನಾಶಕವಾದ ನಿನ್ನ ಪಾದವನ್ನು ಸದಾ ಧ್ಯಾನ ಮಾಡುತ್ತಿರುವರು. ಪಾಪನಾಶಕನಾದ ನಿನ್ನ ಆ ಪಾದಧ್ಯಾನವು ಸಮಸ್ತಪಾಪ ರಾಶಿಯನ್ನೆಲ್ಲಾ ಕ್ಷಣಕಾಲದಲ್ಲಿ ನಾಶಗೊಳಿಸುವುದಲ್ಲವೇ ! ॥೩೯॥

ಪರಶಿವನೇ, ಈ ಮಂಕಣಮುನಿಯು ನಿನ್ನ ಸಾನ್ನಿಧ್ಯವನ್ನು ಪಡೆಯಲು ಭಸ್ಮಭೂಷಿತಗಾತ್ರನಾಗಿ ನಿನ್ನ ತೊಡೆಯ ಮೇಲೆ ಶೋಭಿಸುತ್ತಿರುವ ಷಣ್ಮುಖಸ್ವಾಮಿಯಂತೆ ನಿನ್ನ ಪ್ರೀತಿಗೆ ಪಾತ್ರನಾಗಿರುವನು. ಆದ್ದರಿಂದ ಈಗಲೇ ನೀನು ಅವನಿಗೆ ಪ್ರಸನ್ನನಾಗಿ ಅವನು ಆಡುವ ನರ್ತನವನ್ನು ತಪ್ಪಿಸಿ, ಈ ಜಗತ್ತನ್ನು ರಕ್ಷಿಸು. ನಮ್ಮನ್ನು ಕಾಪಾಡು.” ॥೪೦॥

ಗೀರ್ವಾಣವರ್ಗಕೃತಸಂಸ್ತುತಿಭಿಃ ಪ್ರಹೃಷ್ಟೋ
ಈಶ್ವೋ ಹರೋ ಮುನಿಮುಹೋಪ್ಯಭಿದ್ರಷ್ಟುಮೇವ ।
ಯಾತೋ ದಯಾಸುರಸಯಾ ಸುರವೃಂದವಂದ್ಯೋ
ಮೋದಾಯ ಪರ್ವತವರಾತ್ಮಜಯಾ ಸಮೇತಃ ॥೪೧॥

ಕೈಲಾಸಗೋಪುರವರಾನ್ನಿರಗಾತ್ಪುರಾರಿಃ
ಪಾದಾಂಬುಜಂ ತುರಗವೈರಿವಹಾಂತಕಸ್ತಂ ।
ಸಂದರ್ಶಯನ್ನುರಗವೈರಿವಹಾದಿದೇವಾ
ನಾಲೋಕಯನ್ ವೃಷಗತೋ ಮುನಿಲೋಕನಾಯ ॥೪೨॥

ಇತಿ ಶ್ರೀ ಶಿವರಹಸ್ಯೇ ದಶಮಾಂಶೇ ನವಮೋಽಧ್ಯಾಯಃ

---

ಹೀಗೆ ನಾನಾರೀತಿಯಲ್ಲಿ ಸ್ತುತಿಸಿದ ದೇವತೆಗಳ ವಾಣಿಯನ್ನು ಕೇಳಿ ಶಂಕರನು ಆ ಮಂಕಣಮುನಿಯನ್ನು ಅನುಗ್ರಹಿಸಲು ಮನಸ್ಸುಮಾಡಿ, ದಯಾ ಪೂರ್ಣನಾಗಿ, ಪಾರ್ವತಿಯೊಡಗೂಡಿ, ಆದೇ ದೇವತೆಗಳಿಂದ ಸ್ತುತಿಸಲ್ಪಡುತ್ತಾ ಮಂಕಣಮುನಿಯಿದ್ದೆಡೆಗೆ ಪ್ರಯಾಣಬೆಳೆಸಲು ಸಿದ್ಧನಾದನು. ॥೪೧॥

ಆ ಕೂಡಲೇ ಮಹೇಶ್ವರನು ವೃಷಭಾರೂಢನಾಗಿ, ಕೈಲಾಸಗಿರಿಯಿಂದ ಹೊರಟು ತನ್ನ ಭಕ್ತವೃಂದಕ್ಕೆಲ್ಲಾ, ಯಮನನ್ನು ಮೆಟ್ಟಿ ಧ್ವಂಸಮಾಡಿದ ತನ್ನ ಪಾದಕಮಲವನ್ನು ದರ್ಶನಮಾಡಿಸುತ್ತಾ, ಗರುಡವಾಹನನೆನಿಸಿದ ವಿಷ್ಣುವೇ ಮೊದಲಾದ ದೇವತೆಗಳನ್ನು ಪದೇ ಪದೇ ನೋಡುತ್ತಾ, ಮಂಕಣಮುನಿಗೆ ದರ್ಶನ ಭಾಗ್ಯವನ್ನೀಯಲು ಪ್ರಯಾಣಮಾಡಿದನು. ॥೪೨॥

ಇಲ್ಲಿಗೆ ಶ್ರೀಶಿವರಹಸ್ಯದ ಹತ್ತನೆಯ ಅಂಶದಲ್ಲಿ ಒಂಬತ್ತನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

॥ ಶ್ರೀ ಶಿವಾಯನಮಃ ॥

# ಅಥ ಶ್ರೀಶಿವರಹಸ್ಯೇ

ಈಶಾನಾಖ್ಯೇ

ದಶಮಾಂಶೇ ಪೂರ್ವಾರ್ಧೇ

## ದಶಮೋಽಧ್ಯಾಯಃ

॥ ಶ್ರೀಸ್ಕಂದ ಉವಾಚ ॥

ತತ್ಸ್ತುತ್ಯಾ ತುಷ್ಟಹೃದಯೋ ಭಗವಾನ್ ಗೋವೃಷಧ್ವಜಃ ।
ದ್ರಷ್ಟುಂ ಮಂಕಣಕಂ ಸಿದ್ಧಂ ಸ್ವಯಂ ಗೌರ್ಯಾ ವಿನಿರ್ಯಯೌ ॥೧॥

ಮಹಾಪಾಂಡರಮಾರುಹ್ಯ ವೃಷಂ ಕೈಲಾಸ ಸಪ್ರಭಂ ।
ತ್ರ್ಯಕ್ಷಃ ಶಂಬರಶೂಲೋದ್ಯತ್ಕರನೀಲಸುಕಂಧರಃ ॥೨॥

ಗಂಗಾತುಂಗಜಟಾಮೌಳಿಃ ಶಶಾಂಕಕೃತಶೇಖರಃ ।
ದಿವ್ಯಭಸ್ಮತ್ರಿಪುಂಡ್ರೋದ್ಯತ್ಫಾಲಾನಲವಿರಾಜಿತಃ ॥೩॥

---

## ಹತ್ತನೆಯ ಅಧ್ಯಾಯ

ಮಂಕಣಮುನಿಯ ಸ್ತುತಿಯಿಂದ ತೃಪ್ತನಾದ ಪರಮೇಶ್ವರನು, ಅವನನ್ನು ಅನುಗ್ರಹಿಸಲು, ಗೌರೀದೇವಿಯೊಡನೆ ಕೈಲಾಸದಿಂದ ಹೊರಟು, ಕೈಲಾಸದಂತೆ ಶುಭ್ರವಾಗಿ ಹೊಳೆಯುವ ವೃಷಭವನ್ನೇರಿ ತ್ರಿಶೂಲಾಯುಧವನ್ನು ಹಿಡಿದು, ವಿಷದ ನೀಲವರ್ಣದಿಂದ ವಿರಾಜಿಸುತ್ತಾ ಪ್ರಯಾಣಮಾಡಿದನು. ॥೧-೨॥

ಪರಶಿವನ ಶಿರೋಭಾಗದಲ್ಲಿ ಗಂಗಾತರಂಗವೂ, ಚಂದ್ರಕಲೆಯೂ ಪ್ರಕಾಶಿಸುತ್ತಿದ್ದುವು. ಹಣೆಯಲ್ಲಿ ಅಗ್ನಿನೇತ್ರವೂ, ಭಸ್ಮತ್ರಿಪುಂಡ್ರವೂ ಪ್ರಜ್ವಲಿಸುತ್ತಿದ್ದುವು. ಕಂಠದಲ್ಲಿ ನಾಗರತ್ನಮಾಲೆಗಳು ಹೊಳೆಯುತ್ತಿದ್ದುವು. ವಿಷದ ಕಪ್ಪುಕಾಂತಿಯು ಎಲ್ಲೆಲ್ಲೂ ಹರಡುತ್ತಿದ್ದಿತು. ಗಜಚರ್ಮವೂ ವ್ಯಾಘ್ರಾಜಿನವೂ ಶಿವನ ಶರೀರವನ್ನು

ಫಣೀಮಣಿಘೃಣಿಲಲದ್ಧೀರಹಾರಾದಿಸದ್ಗಲಃ ।
ಗುರುಣಾ ಗರಜಾತೇನ ನೀಲೀ ಭೂತಸುಕಂಧರಃ ॥೪॥

ದಂತಿತ್ವಕ್ಪರಿವೀತಾಂಗೋ ವ್ಯಾಘ್ರಚರ್ಮಾಂಬರಾವೃತಃ ।
ವಾಮಭಾಗಮಹಾದೇವೀವೀಕ್ಷಿತಾಪಾಂಗವಕ್ರಕಃ ॥೫॥

ನಂದಿಭೃಂಗೀಮಹಾಕಾಲಸ್ಕಂದವಿಘ್ನೇಶಸೇವಿತಃ ।
ವೃಂದಾರಮಕುಟೀಕೋಟೀಮಣಿನೀರಾಜಿತಾಂಘ್ರಿಕಃ ॥೬॥

ಗಣೇಂದ್ರವದನೋದ್ಭೂತಶಂಖಕಾಹಳನಿಸ್ವನೈಃ ।
ಮೃದಂಗಢಕ್ಕಾಭೇರೀಣಾಂ ಆರಾವೋದ್ಘೋಷಿತಾಂಬರಃ ॥೭॥

ಛತ್ರಚಾಮರಮಾಯೂರವ್ಯಜನಾತ್ತಕರೈರ್ಗಣೈಃ ।
ಪಾರ್ಶ್ವತಃ ಸೇವಿತಃ ಶಂಭುರಾಯಯೌ ಮಂಕಣಾಂತಿಕಂ ॥೮॥

ಸುನಿರ್ಝರಕರೋತ್ಸೃಷ್ಟಾ ಪುಷ್ಪವೃಷ್ಟಿರಭೂಚ್ಛಖಾತ್ ।
ನನೃತುಸ್ತಾಲಸಾಮ್ಯೇನ ಲಯೇನಾಪ್ಸರಸಾಂ ಗಣಾಃ ॥೯॥

---

ಆವರಿಸಿತ್ತು. ಎಡಭಾಗದಲ್ಲಿರುವ ಗೌರೀದೇವಿಯ ಕಟಾಕ್ಷಪಾತಕ್ಕೆ ಶಂಕರನು ಆಶ್ರಯ ವಿತ್ತಿದ್ದನು. ಅಕ್ಕಪಕ್ಕದಲ್ಲಿ ನಂದಿ, ಭೃಂಗಿ, ಮಹಾಕಾಲ, ಸ್ಕಂದ, ವಿಘ್ನೇಶ್ವರ ಇವರು ಬರುತ್ತಿದ್ದರು. ಪರಶಿವನ ಪಾದದಡಿಯಲ್ಲಿ ರತ್ನಕಿರೀಟಭೂಷಿತರಾದ ದೇವತೆಗಳು ತಮ್ಮ ಕಿರೀಟದ ಕಾಂತಿಯಿಂದ ಪರಶಿವನ ಪಾದವನ್ನು ಬೆಳಗಿಸುತ್ತಾ ಬರುತ್ತಿದ್ದರು. ॥೩-೪-೫-೬॥

ಗಣನಾಯಕರು ತಮ್ಮ ಬಾಯಿಂದಲೇ, ಶಂಖ, ತುತ್ತೂರಿ ಇವುಗಳನ್ನು ಊದುತ್ತಿದ್ದರು. ಅನೇಕರು ಮೃದಂಗ, ಢಕ್ಕ, ನಗಾರಿ ಇವುಗಳಿಂದ ಆಕಾಶವನ್ನು ಧ್ವನಿಮಯವನ್ನಾಗಿ ಮಾಡುತ್ತಿದ್ದರು. ಎರಡು ಕಡೆಗಳಲ್ಲಿಯೂ, ಛತ್ರಿ, ಚಾಮರ, ನವಿಲುಗರಿಯ ಬೀಸಣಿಗೆಗಳು ಇವುಗಳನ್ನು ಹಿಡಿದು ಪ್ರಮಥಗಣಗಳು ಬರುತ್ತಿದ್ದುವು. ಅಂತರಿಕ್ಷದಿಂದ ದೇವತೆಗಳು ಹೂಮಳೆಕರೆಯುತ್ತಿದ್ದರು. ಅಪ್ಸರಸ್ತ್ರೀಯರು ಆ ವಾದ್ಯಧ್ವನಿಗನುಸಾರವಾಗಿ ಪಾದವಿನ್ಯಾಸಮಾಡುತ್ತಾ ನರ್ತಿಸುತ್ತಿದ್ದರು. ನಾರದರೂ, ತುಂಬುರರೂ, ತಮ್ಮ ಇಂಪಾದ ಗಾನದಿಂದಲೂ, ವಾದ್ಯಗಳಿಂದಲೂ

ಪ್ರವಾದ್ಯಂತೋರುವಾದ್ಯಾನಿ ಗಂಧರ್ವಾಃ ಕಿನ್ನರಾಸ್ತದಾ ।
ಜಗುಃ ಶಿವಪದಾನಾಂ ಚ ನಾರದಾದ್ಯಾಃ ಸತುಂಬುರಾಃ ॥೧೦॥

ವಿಷ್ಣುಬ್ರಹ್ಮಾದಿಭಿರ್ದೇವೈರ್ಜಯೇಶೇತಿ ನತಸ್ತುತಃ ॥೧೧॥

ದೇವಾದಿಮಸ್ತ್ವಮಸಿ ಸೋಮಕಲಾಲಲಾಮಃ
ಸಾಮಾದಿಸಂಸ್ತುತಪದಃ ಶ್ರುತಿಸೀಮಭೂಮ ।
ವ್ಯೋಮಾವಕಾಶಮಹಿಮಾ ಗರಿಮಾ ತ್ವಮೀಶೋ
ಸರ್ವೇಷು ಹೃತ್ಸು ಲಘಿಮಾತ್ಮವ ನೋ ಮಹೇಶ ॥೧೨॥

ಹೇಮಾಚಲಾತ್ತಧನುಷಾ ಕರಮುತ್ಕಟಂ ತೇ
ಕಾಮಾದಿದರ್ಪವಿನಿವಾರಕಸತ್ಪದಂ ತೇ ।
ಭಾಮಾರ್ಧಕಾಯಮತಿಸುಂದರಮೀಕ್ಷಿತಂ ತೇ
ತ್ರ್ಯಕ್ಷಾಧುನಾ ಸುರಗಣೇಷು ಭವೇತ್ಕೃಪಾ ತೇ ॥೧೩॥

---

ಶಿವನಾಮಯುತವಾದ ಕೀರ್ತನೆಗಳನ್ನು ಹಾಡುತ್ತಿದ್ದರು. ಹೀಗಿರುವಾಗ ವಿಷ್ಣು, ಬ್ರಹ್ಮ ಮೊದಲಾದ ದೇವಶ್ರೇಷ್ಠರು ತಲೆಬಗ್ಗಿಸಿಕೊಂಡು ಜಯಶಬ್ದಮಾಡುತ್ತಾ ಪರಶಿವನನ್ನು ಹಿಂಬಾಲಿಸಿದರು. ॥೭-೮-೯-೧೦-೧೧॥

ಆಗ ದೇವತೆಗಳು ಈ ರೀತಿ ಪರಶಿವನನ್ನು ಸ್ತುತಿಸುತ್ತಿದ್ದರು. "ಮಹಾದೇವನೇ, ನೀನು ಆದಿದೇವನು. ಚಂದ್ರಶೇಖರನು. ಸಾಮವೇದವೇ ಮೊದಲಾದುವುಗಳು ಸದಾ ನಿನ್ನ ಪಾದವನ್ನೇ ಸ್ತುತಿಸುತ್ತಿರುವುವು. ವೇದಾಂತಪ್ರತಿಪಾದ್ಯನೂ, ವ್ಯೋಮಪರ್ಯಾಪ್ತವಾಗುವಷ್ಟು ಮಹಿಮೆಯುಳ್ಳವನೂ, ಸರ್ವರ ಹೃದಯಕುಹರದಲ್ಲಿಯೂ ಅಣುರೂಪದಿಂದಿರುವವನೂ ಆದ ನೀನು ನಮ್ಮನ್ನು ಕಾಪಾಡು, ಉದ್ಧರಿಸು. ॥೧೨॥

ನಿನ್ನ ಹಸ್ತವು ಮೇರುಪರ್ವತವನ್ನೇ ಧನುಸ್ಸನ್ನಾಗಿ ಮಾಡಿಕೊಂಡಿತು. ನಿನ್ನ ಪಾದವು ಮನ್ಮಥನೇ ಮೊದಲಾದವರ ದರ್ಪವನ್ನು ನಾಶಗೊಳಿಸಿತು. ನಿನ್ನ ಅರ್ಧದೇಹವು ಪಾರ್ವತಿಗೆ ಆಶ್ರಯವಿತ್ತು ಅತಿಸುಂದರವೆನಿಸಿತು. ನಿನ್ನ ಕೃಪಾಮಯವಾದ ದೃಷ್ಟಿಯು ಈಗ ದೇವತೆಗಳಾದ ನಮ್ಮಲ್ಲಿ ಪ್ರಸರಿಸಲಿ. ಇದೇ ನಮ್ಮ ಪ್ರಾರ್ಥನೆ. ॥೧೨-೧೩॥

ಇತ್ಥಂ ದೇವಸ್ತುತಿಂ ಶ್ರುತ್ವಾ ತಾನ್ವೀಕ್ಷ್ಯ ಕರುಣಾದೃಶಾ ।
ಹಿಮವಚ್ಛಿಖರಂ ಪ್ರಾಪ ಸೋಽಪಶ್ಯನ್ನೃತ್ತಮುದ್ಧತಂ ॥೧೪॥

ಮಂಕಣಸ್ಯ ಮಹಾದೇವಃ ಪ್ರಣತೋ ಮುನಿನಾ ಸ್ತುತಃ ।
ಪುಲಕಾಂಕುರಿತಾಂಗೋಽಥ ನೃತ್ಯಂಸ್ತುಷ್ಟಾವ ಶಂಕರಂ ॥೧೫॥

ಗಣದೇವೇಷು ಪಶ್ಯತ್ಸು ದೇವದೇವಂ ಸ ಮಂಕಣಃ ॥೧೬॥

॥ ಮಂಕಣ ಉವಾಚ ॥

ಶಂಭೋ ಭರ್ಗ ಭವೇಂದುಶೇಖರ ಮಹಾದೇವಾವ್ಯಯೇಶಾನ ತೇ ।
ಪಾದದ್ವಂದ್ವಸಮರ್ಚನಾರ್ಜಿತಮಹಾಭಕ್ತಿಪ್ರಭಾಭಾವಿತಃ ।
ಭಾವೋಽಹಂ ಭವಭಾವಪರಮಾನಂದಾಂಬುಧೌ ಮಗ್ನಧೀ ।
ರುನ್ಮತ್ತೋತ್ತಮ ಧನ್ಯ ಮಾನ್ಯ ಪದವೀ ಮಾಪಾದಿತಸ್ಸಾದರಂ ॥೧೭॥

ಹೇ ಶಂಭೋ ಶಶಿಖಂಡ ಸುಂದರ ಜಟಾಕಾಂಡೋರುವಿಶ್ರಾಣಿತ
ತ್ರುಟ್ಯತ್ತಾರ ಪತಂಗ ಸಂಗ ಸುಮಹಾದಿಗ್ವಕ್ತ್ರಭಾಭಾವಿತಃ ।

---

ಹಾಗೆ ಸ್ತುತಿಸಿದ ದೇವವಾಣಿಯನ್ನು ಕೇಳಿ ಕರುಣಾಮಯನಾದ ಶಂಕರನು ಅವರನ್ನು ದಯೆಯಿಂದ ನೋಡುತ್ತಾ ಹಿಮಗಿರಿಶಿಖರಕ್ಕೆ ಹೋಗಿ, ಮಂಕಣನ ಭಕ್ತಿಯುತವಾದ ನಾಟ್ಯವನ್ನು ನೋಡುತ್ತ ನಿಂತನು. ಈಶ್ವರನ ದರ್ಶನವಾದೊಡನೆಯೇ ಮಂಕಣನು ಪುಲಕಾಂಚಿತನಾಗಿ ಮೈಮರೆತು ಕುಣಿಯುತ್ತಾ ಗಣದೇವತೆಗಳು ನೋಡುತ್ತಿರುವಂತೆಯೇ ಪರಶಿವನನ್ನು ಈ ರೀತಿ ಸ್ತುತಿಸಲಾರಂಭಿಸಿದನು. ॥೧೪-೧೫-೧೬॥

ಸುಖಕರನೇ, ಭಕ್ತರಕ್ಷಕನೇ, ಚಂದ್ರಶೇಖರನೇ, ನಾಶರಹಿತನೇ, ನಾನು ನಿನ್ನ ಪಾದಕಮಲಗಳ ಅರ್ಚನೆಯಲ್ಲಿ ಸ್ಥಿರವಾದ ಭಕ್ತಿಯನ್ನಿಟ್ಟಿರುವೆನು. ಸಂಸಾರ ದುಃಖನಾಶಕನಾದ ನಿನ್ನ ಪ್ರಿಯಭಕ್ತನು ನಾನು. ಶಿವಾನಂದದಲ್ಲಿ ಮುಳುಗಿ, ಉತ್ತಮೋತ್ತಮನೆನಿಸಿ, ನಿನ್ನ ದಯೆಯಿಂದ ದಿವ್ಯಧಾಮವನ್ನು ಪಡೆಯಲು ಅರ್ಹನಾಗಿರುವೆನು. ॥೧೭॥

ಪರಮೇಶ್ವರನೇ, ನಿನ್ನ ಚಂದ್ರಕಲೆಯಿಂದ, ಸುಂದರವಾದ ಜಟಾಜೂಟದ ವೇಗದಿಂದ, ನಾಟ್ಯಕಾಲದಲ್ಲಿ ಸಕಲ ನಕ್ಷತ್ರಗಳೂ, ಸೂರ್ಯನೂ ಅಲ್ಲಾಡಿಹೋಗುವರು.

ಪಾಪಾಪಾರ ಮಹಾಂಬುಸಾಗರ ಮಹಾಪಾನೋರುಸದ್ವಾಡಬ
ದಿವ್ಯೇನಾಙ್ಘ್ರದೃಶಾಂಕುರೈಕಕರುಣಾಕೋಣೇನ ಸಂವೀಕ್ಷಯ ॥೧೮॥

ಮಾತಂಗತ್ವಗಲಂಕೃತಾಂಗ ಗಿರಿಜಾ ದೇಹಾರ್ಧಸಂಗ ಪ್ರಭೋ
ಹಸ್ತೇ ಬಾಲಕುರಂಗಸಂಗತಲಸನ್ನೇತ್ರೇ ಪತಂಗೋತ್ತಮ ।
ಲಿಂಗಸ್ಥಾಂಗ ಮಹೋತ್ತಮಾಂಗ ವಿಧೃತಾಂ ಗಂಗಾಶಶಾಂಕಾಂಕೆ ತೇ
ಪಾತಾ ವೈ ಶರಣಂ ಪ್ರಯಾಮಿ ಸತತಂ ಪಾಪೌಘಭಂಗಾಯ ಮೇ ॥೧೯॥

ಉಗ್ರ ಭೀಮ ಭವ ಭರ್ಗ ಶಂಕರ
ತ್ರ್ಯಕ್ಷ ರಕ್ಷ ಮಖಭಕ್ಷ ವೀಕ್ಷ ಮಾಂ ।
ಅಂಧಕಾಂತಕ ಕೃತಾಂತನಿಶೀಶಾ
ಮೋದ ವೇದ ಶಿಖರಾಶ್ರಯ ಪಾಹಿ ॥೨೦॥

---

ನಿನ್ನ ದೇಹಕಾಂತಿಯಿಂದ ಸಕಲ ದಿಕ್ಕುಗಳೂ ಬೆಳಗುವುವು. ಪಾಪರಾಶಿಯೆಂಬ ಮಹಾಸಮುದ್ರಕ್ಕೆ ಬಡಬಾಗ್ನಿಯಂತಿರುವವನು ನೀನು ಪರಮೇಶ್ವರನೇ ಅಲ್ಲವೆ! ಅಂತಹ ಸಂತೋಷಕಾಲದ ನಾಟ್ಯಸಮಯದ ಕರುಣಾಪಾಂಗದಿಂದ ನನ್ನನ್ನು ನೋಡಿ ಉದ್ಧರಿಸು. ॥೧೮॥

ಮಹೇಶ್ವರನೇ, ನೀನು ಗಜಚರ್ಮಾಂಬರಧಾರಿಯು ಉಮಾಶ್ರಿತಾರ್ಧ ದೇಹಿಯು. ಹಸ್ತದಲ್ಲಿ ಬಾಲಕುರಂಗವನ್ನೂ, ಕಣ್ಣುಗಳಲ್ಲಿ ಸೂರ್ಯದೇವನನ್ನೂ ಧರಿಸಿರುವೆ. ಸರ್ವದಾ ಶಿವಲಿಂಗದಲ್ಲಿ ನಿನ್ನ ಮಹಿಮೆಯನ್ನು ನಿಲ್ಲಿಸಿರುವೆ. ಗಂಗಾ ದೇವಿಯಿಂದಲೂ, ಚಂದ್ರಕಲೆಯಿಂದಲೂ ನಿನ್ನ ಮೌಳಿಯು ಪ್ರಕಾಶಿಸುತ್ತಿರುವುದು. ಮಹಾದೇವನೇ, ಪಾಪನಾಶಕ್ಕಾಗಿ ಸರ್ವದಾ ನಿನ್ನನ್ನು ಮೊರೆಹೊಗುವೆನು. ॥೧೯॥

ಉಗ್ರರೂಪಿಯೂ, ಭಯಂಕರಾಕಾರನೂ, ಸರ್ವಜನರಕ್ಷಕನೂ, ಸುಖ ಕರನೂ, ತ್ರಿಲೋಚನನೂ ಆದ ಮಹಾದೇವನೇ, ನೀನು ದಕ್ಷಯಜ್ಞವನ್ನು ನಾಶ ಗೊಳಿಸಿದೆಯಲ್ಲವೆ! ಅಂಧಕ, ಯಮ ಮೊದಲಾದ ದುಷ್ಟರನ್ನು ನಾಶಗೊಳಿಸಿ, ವೇದಶಿಖರದಲ್ಲಿ ವಿರಾಜಿಸುವ ಮಹಾತ್ಮನೇ, ನಮ್ಮನ್ನು ಸಲಹು. ॥೨೦॥

ತ್ವತ್ಪಾದರತ್ನಂ ಸುಮಹಾಧಿಕೆಯತ್ನಲಭ್ಯಂ
ಪುಣ್ಯಾ ಸಪತ್ನಮಘಹಾರಿವಿಶುದ್ಧನೂನಂ ।
ಹೃಷ್ಟೋ ವಿಶಿಷ್ಟಕರುಣಾರುಣಶಿಷ್ಟಮಿಷ್ಟ
ಮೋಜಿಷ್ಠಮಷ್ಟತನವೇ ಕರವೈ ನಮಸ್ತೇ ॥೨೧॥

ವಸ್ತುಸ್ವಸ್ತಿದಮಸ್ತು ಮೇ ಹೃದಿ ಸದಾ ವೇದೋರುಮಸ್ತಸ್ತುತಂ
ನಿಸ್ತೋಕಂ ವರಹಸ್ತಶಸ್ತಸುಮಹಾವಿಧ್ಯುತ್ತಮಾಂಗೋದ್ಧೃತಂ ।
ಶೂಲತ್ರಸ್ತಸಮಸ್ತದೈತ್ಯನಿಕರಾರಂಭೇಣ ಮಾತಂಗಹೃತ್
ಶಸ್ತಂ ನಿಸ್ತುಲಮಾವಿರಸ್ತು ಪುರತೋ ಧ್ವಸ್ತಾಘಸಂಘಂ ಪರಂ ॥೨೨॥

ಭದ್ರಾಕ್ಷತ್ರ್ಯಕ್ಷಪಾದಂ ಫಣಿಮಣಿಘೃಣಿಯುಕ್ ಸರ್ವಸಂಪತ್ಪ್ರದಂ ವೈ
ಲೇಖಾಮೌಲ್ಯುತ್ಥರೇಖಾಕಿಣಮಸೃಣಯುತಂ ಸಿದ್ಧಸಂಸಿದ್ಧವಂದ್ಯಂ ।
ಅರುಣಿಮ ಶರಣಾನಾಂ ಲೋಕಲೀಲಾವಿನೋದಂ
ಮುದಮುದಿತಭವಾನಾಂ ಭಾವನಾನಾಶಹೇತುಂ ॥೨೩॥

---

ಮಹೇಶ್ವರನೇ, ನಿನ್ನ ಪಾದವೆಂಬ ರತ್ನವು ಅನೇಕ ಪ್ರಯತ್ನದಿಂದ ಲಭಿಸ ತಕ್ಕುದು. ಪುಣ್ಯರಾಶಿಯನ್ನುಂಟುಮಾಡಿ ಪಾಪಸಮುದ್ರವನ್ನು ಒಣಗಿಸಬಲ್ಲುದು. ಅನೇಕ ರೀತಿಯಲ್ಲಿ ಕರುಣೆಯಿಂದ ಭಕ್ತರನ್ನು ಉದ್ಧರಿಸಬಲ್ಲುದು. ಹೀಗೆಂದು ತಿಳಿದೇ ನಾನು ಅಷ್ಟಮೂರ್ತಿಸ್ವರೂಪನಾದ ನಿನಗೆ ಮನಃಪೂರ್ವಕವಾಗಿ ಎರಗು ವೆನು. ॥೨೧॥

ವೇದಾಂತಗಳಿಂದ ಸ್ತುತ್ಯವಾದ, ಮತ್ತು ಶ್ರೇಷ್ಠವಾದ ಬ್ರಹ್ಮಕಪಾಲವನ್ನು ಕೈಯಲ್ಲಿ ಹಿಡಿದಿರುವ, ತ್ರಿಶೂಲಧಾರಿಯಾಗಿ ಸಮಸ್ತ ದೈತ್ಯವರ್ಗವನ್ನೂ ನಾಶಗೈದ, ಗಜಚರ್ಮಾಂಬರಧಾರಿಯಾದ, ಪಾಪನಾಶಕವಾದ ಶ್ರೀಶಂಕರನಾಮಕ ದಿವ್ಯವಸ್ತುವು ಸರ್ವದಾ ನನ್ನ ಹೃದಯದಲ್ಲಿದ್ದು ನನಗೆ ಸನ್ಮಂಗಳವನ್ನುಂಟುಮಾಡುತ್ತಿರಲಿ. ॥೨೨॥

ಮಂಗಳಕರವಾದ ಪರಶಿವನ ಪಾದವು ನಾಗರತ್ನಗಳ ಕಾಂತಿಯಿಂದ ಸದಾ ಶೋಭಿತವಾದುದು. ಭಕ್ತರಿಗೆ ಸರ್ವಸಂಪತ್ತನ್ನೂ ಅನುಗ್ರಹಿಸುವುದು. ದೇವತೆಗಳ ಕಿರೀಟದಲ್ಲಿರುವ ರತ್ನರಾಶಿಗಳ ಒತ್ತಡದಿಂದ ಜಡ್ಡುಕಟ್ಟಿಹೋಗಿರುವುದು. ಅದೇ ಪಾದವನ್ನು ಸಿದ್ಧರೂ, ಸಾಧ್ಯರೂ ಸರ್ವದಾ ವಂದಿಸುತ್ತಿರುವರು. ಅದು ನಿಜವಾದ ಪ್ರಕಾಶಕ್ಕೆ ಆಶ್ರಯವಿತ್ತಿರುವುದು. ಲೋಕದಲ್ಲಿ ನಡೆಯುವ ಎಲ್ಲಾ ವಿಧವಾದ

ಅಧೀಮಹಿ ಸದಾತ್ಮಹಂ ಸುಗಮಮುಕ್ತಿಮಾರ್ಗಪ್ರದಂ
ಶತಶ್ರುತಿಶಿರೋಗತಂ ವಿಮಲಮೇವ ರುದ್ರಂ ಸದಾ ।
ಅಲೇಪಿ ಭಸಿತಂ ಸಿತಂ ವಿಮಲಮೇವ ಪುಂಡ್ರಾಂಕಯುಕ್
ಭವೇನ ಸತತಂ ಭವೇ ಭವನವೈಕಭಾವಾಸ್ಸದಾ ॥೨೪॥

ಅಚಕ್ಮಮ ವರಿವಶ್ಯಾಂ ಗಾಂಗಲಿಂಗೋತ್ತಮಾಂಗೇ
ತವ ಸದಯ ಕಟಾಕ್ಷೈರ್ಮೋದಮಾನಾಸ್ಸದೈವ ।
ತವ ಶಿವಚರಣಾಬ್ಜಾಲೋಕನೇನಾಲಮೇತಂ
ನ ವರಸುರವರಾಣಾಂ ವಾರಣೇ ಕಾರಣಂ ಮೇ ॥೨೫॥

॥ ಸೂತ ಉವಾಚ ॥

ತದಾ ಸ ಫಣಿಕಂಕಣಸ್ತುತಿಪರಂ ತದಾ ಮಂಕಣಂ
ಮುದಾ ಭಸಿತಧಾರಿಣಂ ಮುನಿವರಂ ಪ್ರಣಂತಂ ಹರಃ ।

---

ಲೀಲೆಗಳಿಗೂ ಮೂಲಭೂತವೆನಿಸಿರುವುದು. ಆ ಪಾದಪದ್ಮಧ್ಯಾನದಿಂದ ಆನಂದ ಹೊಂದುತ್ತಿರುವವರಿಗೆ ಸಮಸ್ತ ದುಃಖಗಳೂ ನಿವಾರಣೆಯಾಗುವುವು. ಇಂತಹ ಪರಶಿವನ ಪಾದವನ್ನು ನಾನು ಸರ್ವದಾ ಸೇವಿಸುವೆನು. ॥೨೩॥

ಈಶ್ವರಭಕ್ತಿಯಲ್ಲಿಯೇ ನಿರತರಾಗಿರುವವರೊಡನೆ ನಾನೂ ಸಹ ಸುಲಭವಾಗಿ ಮುಕ್ತಿಯನ್ನು ಕರುಣಿಸುವ ಮತ್ತು ವೇದವೇದಾಂತಪ್ರತಿಪಾದ್ಯಮಾನವಾದ ಭೂತಿ ಭಸಿತಲಿಂಗಾತ್ಮಕವಾದ ರುದ್ರರೂಪವಾದ ಜ್ಯೋತಿಯನ್ನೇ ಸರ್ವದಾ ಆರಾಧಿಸುವೆನು. ಅದರ ಸೇವನೆಯಿಂದಲೇ ಈ ನಮ್ಮ ಸಕಲ ಸಾಂಸಾರಿಕದುಃಖಗಳೂ ಮಾಯವಾಗು ವುವು. ॥೨೪॥

ಮಹಾದೇವನೇ, ಗಂಗಾಜಲದಿಂದ ಅಭಿಷಿಕ್ತವಾದ ಶಿವಲಿಂಗವನ್ನು ನಾವು ಭಕ್ತಿಯಿಂದ ಪೂಜಿಸಲಿಲ್ಲ. ಆದರೂ ನಿನ್ನ ದಯಾಪೂರಿತವಾದ ಕಟಾಕ್ಷದಿಂದ ನಾವು ಅತ್ಯಾನಂದಪಡುತ್ತಿರುವೆವು. ಈಗ ಪರಶಿವನೆನಿಸಿದ ನಿನ್ನ ಪಾದಕಮಲಾ ಲೋಕನವೊಂದರಿಂದಲೇ ಇತರ ದೇವತೆಗಳನ್ನು ತಡೆಯುವ ಅಥವಾ ತಿರಸ್ಕರಿಸುವ ಸಾಮರ್ಥ್ಯವು ನನಗುಂಟಾಗಿದೆ." ॥೨೫॥

ಈ ರೀತಿ ಸರ್ವದಾ ತನ್ನನ್ನು ಸ್ತುತಿಸುವ ಮಂಕಣಋಷಿಯನ್ನು ಪರಶಿವನು ಕರುಣಾಪೂರ್ಣವಾದ ದೃಷ್ಟಿಯಿಂದ ನೋಡಿದನು. ಮಂಕಣನಾದರೋ ಭಸ್ಮಧಾರ

ಅಹಸ್ಕರ ವಿಲೋಚನ ಪ್ರಸ್ಫುರಚ್ಛೈಃ ಕರೋತ್ಫುಲ್ಲಿತಂ
ಗಿರೀಂದ್ರಜನಿತಾಸ್ಯಕ ವರಸರೋಜವೀಕ್ಷ್ಯಾಹ ಹಿ ॥೨೬॥

ಶಾಖಾಶಿಖಾದಿಸುನಿರುಕ್ತಪದಕ್ರಮಾದಿ
ಬೋಧಾರ್ಥವಾದ ವಿಧಯಃ ಸಕಲಾ ಅಧೀತಾಃ ।
ತೇನೇಶತೋಷಕರಣಾಯ ಮುಖಾದಿ ಸೇಷ್ಟಾ
ಅಷ್ಟಾಕೃತೇಃ ಪ್ರಿಯತರಾ ಸಕಲಾ ಅಪೀಷ್ಟಾಃ ॥೨೭॥

॥ ಶ್ರೀ ಈಶ್ವರ ಉವಾಚ ॥

ಸದ್ಯೋಜಾತೇನ ಸದ್ಯೋ ಭಸಿತಯುತತನುಃ ಪೂತ ಏವಾಭಿಜಾತಃ
ಪಾಪೌಘಂ ತಸ್ಯ ಭೇದ್ಯಂ ಭವತಿ ಭವಗದೇ ವೈದ್ಯ ಏವಾಯಮೀಶಃ ।
ವೇದ್ಯಂ ವೇದಾಂತಗದ್ಯಂ ಪದಮಭಿಭವತೇ ಪದ್ಯಮೇವಾಭಿಜಾತಂ
ಭಿದ್ಯತ್ಯೇನಾಧಿದುಃಖಂ ಹೃದುದರ ಭವಜಂ ಭಿದ್ಯತೇ ಗ್ರಂಥಿಜಾತಂ ॥೨೮॥

---

ಣೆಯಿಂದ ಪವಿತ್ರನಾಗಿ ಪರಶಿವನ ತೇಜೋಭೂಯಿಷ್ಠವಾದ ನೇತ್ರಕ್ಕೆ ಪಾತ್ರನಾಗಿದ್ದನು. ಇಂತಹ ಮುನಿಯನ್ನು ಕುರಿತು ಗಿರಿಜಾಪತಿಯಾದ ಪರಶಿವನು ಗಿರಿಜೆಯೊಡನೆ ಪ್ರಸನ್ನನಾಗಿ ಹೀಗೆ ಮಾತನಾಡಿದನು. ॥೨೬॥

ದೇವಿಯೇ, ಈ ಮುನಿಯು ಸಕಲ ವೇದವೇದಾಂಗಗಳನ್ನೂ, ಅರ್ಥಜ್ಞಾನಪುರಸ್ಸರವಾಗಿ ತಿಳಿದಿರುವನು. ಅಲ್ಲದೆ ನನ್ನ ಅನುಗ್ರಹವನ್ನು ಪಡೆಯಲು ನನಗೆ ಹಿತಕರವಾದ ಸಕಲ ಯಜ್ಞಾದಿಗಳನ್ನೂ ಸಂಪೂರ್ಣವಾಗಿ ವಿಧಿವತ್ತಾಗಿ ನೆರವೇರಿಸಿರುವನು. ॥೨೭॥

ಪಾರ್ವತಿಯೇ, ಈತನು ಜನಿಸುವಾಗಲೇ ಪವಿತ್ರವಾದ ಭಸ್ಮಲಿಪ್ತಗಾತ್ರನಾಗಿ ಹುಟ್ಟಿದನು. ಆದ್ದರಿಂದ ಇವನ ದೇಹವು ಅತಿ ಪವಿತ್ರವಾಗಿದೆ. ಇವನಿಗೆ ಯಾವ ಪಾಪಲೇಶವೂ ಅಂಟುವಂತಿಲ್ಲ. ಸಂಸಾರವೆಂಬ ವ್ಯಾಧಿಗೆ ನಿಜವಾದ ವೈದ್ಯನೇ ಈತನು. ವೇದಾಂತಗಳಲ್ಲಿ ಹೇಳಿರುವ ಸದ್ಧರ್ಮವೆಲ್ಲವೂ ಇವನಲ್ಲಿ ಕಂಡಬರುತ್ತಿದೆ. ಇವನ ಹೃದಯಕುಹರದಲ್ಲಿ ಉಂಟಾಗುವ ಜ್ಞಾನವು ಸಮಸ್ತವಾದ ಮನೋದುಃಖವನ್ನೆಲ್ಲಾ ಪೂರ್ಣವಾಗಿ ನಿವಾರಿಸ ಬಲ್ಲದು. ಪ್ರಾರಬ್ಧಕರ್ಮಗಳು ಈತನನ್ನು ಎಂದೂ ಪೀಡಿಸಲಾರವು. ॥೨೮॥

ಯೇನೈವ ಶಂಕರಗಿರಾ ಪ್ರಸೃತೋರುವೇದ
ಮೌಲ್ಯರ್ಥ ಸಾರನಿಹಿತಾಮೃತಭಸ್ಮಧೃಕ್ಸ್ಯಾತ್ ।
ತೇನೋರ್ವರಾದಿ ವಿಧಿ ಬೋಧಿತ ಷೋಡಶೋರು
ದಾನಾನಿ ಬಾಡವಕರೇ ವಿಹಿತಾನಿ ಗೌರಿ ॥೨೯॥

ನೀಚಾನಾಮಪಿ ಮೋಚನಾಯ ಗಿರಿಜೇ ವಾಚಃ ಶ್ರುತೇರಂಕಿತೋ
ಮಾರ್ಗೋಽಯಂ ಹಿ ವಿರಿಂಚಿವಂಚಿತಮಹಾಧರ್ಮಾಶ್ರಮೋತ್ಥಶ್ರಮೈಃ ।
ತಚ್ಚಿಂತಾಹತಿದುರ್ಧಿಯೋ ವಿಧಿಮಮುಂ ಮುಂಚಂತಿ ದುಃಖಾಶ್ರುಭಿಃ
ಸಿಂಚಂತಿ ಸ್ವತನುಂ ಯಮಾಲಯಗತಾಃ ಮದ್ಭಸ್ಮಸಂಗೋಜ್ಝಿತಾಃ ॥೩೦॥

ಇತಿ ಶ್ರೀಶಿವರಹಸ್ಯೇ ಈಶ್ವರಾಖ್ಯೇ ದಶಮಾಂಶೇ ಮಂಕಣಾಶ್ರಮಂ
ಪ್ರತಿ ಶಿವಾಗಮನಂ ಮಂಕಣಸ್ತುತಿವರ್ಣನಂ ನಾಮ
ದಶಮೋಽಧ್ಯಾಯಃ

---

ಎಲೌ ದೇವಿಯೇ, ನನ್ನ ಮಾತಿನಂತೆ ಯಾವನು ವೇದವೇದಾಂತಗಳಲ್ಲಿ ಉಕ್ತವಾದ ಪವಿತ್ರಭಸ್ಮವನ್ನು ಧರಿಸುವನೋ ಅವನು ಫಲವತ್ತಾದ ಭೂದಾನವೇ ಮೊದಲಾದ ಸಮಸ್ತ ಷೋಡಶಮಹಾದಾನಗಳನ್ನೂ ಮಾಡಿದಂತೆಯೇ ಆಗುವುದು. ಈ ಭಸ್ಮಧಾರಣೆಯ ಮುಂದೆ ಆ ಮಹಾದಾನಾಚರಣೆಯು ವ್ಯರ್ಥವೇ ಸರಿ. ॥೨೯॥

ಕೇವಲ ಅಲ್ಪಜನರ ಉದ್ಧಾರಕ್ಕಾಗಿಯೇ ವೇದವು ವಿಹಿತವಾಗಿದೆ. ವೈದಿಕ ಮಾರ್ಗವೂ, ವರ್ಣಾಶ್ರಮಾಚಾರಗಳೂ ಕೇವಲ ಮೂಢಜನರ ಉದ್ಧಾರಕ್ಕಾಗಿಯೇ ನಿರ್ಮಿತವಾಗಿವೆ. ಅದನ್ನೇ ಮುಖ್ಯಕರ್ಮವನ್ನಾಗಿ ತಿಳಿದು ಅನೇಕ ಅಜ್ಞಾನಿಗಳು ಪವಿತ್ರವಾದ ಭಸ್ಮಧಾರಣೆಯನ್ನು ತೊರೆದು, ಇತರ ಧರ್ಮಾಚರಣೆಗಾಗಿ ಸದಾ ದುಡಿಯುತ್ತಿರುವರು. ಶ್ರಮಪಡುವರು. ಹಾಗೆಯೇ ನರಕವನ್ನು ಹೊಂದುವರು. ಭಸ್ಮಧಾರಣೆಯಿಂದ ಅನಾಯಾಸವಾಗಿ ಸಕಲ ಸೌಖ್ಯಗಳೂ ಒದಗುವುವೆಂಬುದನ್ನು ಯಾರೂ ಗಮನಿಸುವುದಿಲ್ಲ. ಎಂದು ಶಂಕರನು ಪಾರ್ವತಿಗೆ ತಿಳಿಸಿದನು. ॥೩೦॥

ಇಲ್ಲಿಗೆ ಶ್ರೀಶಿವರಹಸ್ಯದ ದಶಮಾಂಶದಲ್ಲಿ ಹತ್ತನೆಯ ಅಧ್ಯಾಯವು ಮುಗಿದುದು.

|| ಶ್ರೀಃ ||

|| ಶ್ರೀ ಶಿವಾಯನಮಃ ||

# ಅಥ ಶ್ರೀಶಿವರಹಸ್ಯೇ

## ಈಶಾನಾಖ್ಯೇ

## ದಶಮಾಂಶಪೂರ್ವಾರ್ಧೇ

## ಏಕಾದಶೋಽಧ್ಯಾಯಃ

|| ಶ್ರೀಸ್ಕಂದ ಉವಾಚ ||

ತತಸ್ಸ್ತುತ್ವಾ ತುಷ್ಟಹೃದಯಃ ಶಿಪಿವಿಷ್ಟೋಽಂಬಿಕಾಸಖಃ ।
ತಮಾಹ ಶಾಂಭವಂ ವಿಪ್ರಂ ಮಂಕಣಂ ಭಸ್ಮಭೂಷಣಂ ॥೧॥

ಶೃಣ್ವತಾಂ ಬ್ರಹ್ಮವಿಷ್ಣೂನಾಂ ಸುರಾಣಾಂ ಶಶಿಶೇಖರಃ ॥೨॥

|| ಈಶ್ವರ ಉವಾಚ ||

ನೃತ್ತಾದುಪಾರಮಸ್ವಾಸ್ಮಾಜ್ಜಗತ್ಕ್ಷೋಭಕರಾನ್ಮುನೇ ।
ಭಸ್ಮಸಿದ್ಧೋಽಸಿ ಧನ್ಯೋಽಸಿ ತ್ವಂ ಮಾನ್ಯೋಽಸಿ ಮುನಿಷ್ವಪಿ ॥೩॥

ಶಾಂಭವೋಽಸಿ ವಿಶೇಷೇಣ ಭಸ್ಮನಿಷ್ಠೋ ವಿಶಿಷ್ಟಧೀಃ ।
ತ್ವತ್ತಪಸ್ತಾಪಿತಾಸ್ತೇ ವೈ ಬ್ರಹ್ಮವಿಷ್ಣ್ವಾದಯಸ್ಸುರಾಃ ॥೪॥

---

## ಹನ್ನೊಂದನೆಯ ಅಧ್ಯಾಯ

ಮಂಕಣಮುನಿಯು ಮಾಡಿದ ಸ್ತೋತ್ರಕ್ಕೆ ಮೆಚ್ಚಿ ಶಂಕರನು ಸಂತುಷ್ಟನಾಗಿ ಭಸ್ಮಭೂಷಿತನಾಗಿ ಪರಮಶಾಂಭವನೆನಿಸಿದ ಮಂಕಣಮುನಿಯನ್ನು ಕುರಿತು, ಬ್ರಹ್ಮ, ವಿಷ್ಣು ಮತ್ತು ಇತರ ದೇವತೆಗಳು ಕೇಳುವಂತೆಯೇ ಮುಂದೆ ಹೇಳುವಂತೆ ಕೆಲವು ಮಾತುಗಳನ್ನಾಡಿದನು. ||೧-೨||

"ಮಂಕಣಮುನಿಯೇ, ಈ ಜಗತ್ತನ್ನೇ ಕ್ಷೋಭೆಗೊಳಿಸುತ್ತಿರುವ ನಿನ್ನ ನಾಟ್ಯವನ್ನು ನಿಲ್ಲಿಸು. ನೀನು ಭಸ್ಮಧಾರಣೆಯ ಸಿದ್ಧಿಯನ್ನು ಪಡೆದಿರುವೆ. ಧನ್ಯನೂ

ಮಾಮೇವ ಶರಣಂ ಪ್ರಾಪ್ತಾಸ್ತಸ್ಮಾತ್ತೇ ಸನ್ನಿಧಿಂ ಗತಃ ।
ಶಿರೋವ್ರತಮಿದಂ ತೇದ್ಯ ಪ್ರವಕ್ಷ್ಯಾಮ್ಯಖಿಲಂ ತವ ॥೫॥

ಅಥರ್ವಶಿರಸಿ ಪ್ರೋಕ್ತಂ ಶೃಣ್ವೇಭಿಸ್ಸುರಸತ್ತಮೈಃ ।
ಹೃತ್ತಮೋನಾಶಕಂ ಪುಣ್ಯಂ ಮಮ ಜ್ಞಾನಪ್ರದಂ ಮುನೇ ॥೬॥

ಅಜ್ಞಾನಧ್ವಂಸನಾರ್ಕಂ ತೇ ವಿತರ್ಕಮತಿದೂರಗಂ ।
ತ್ವಯಿ ಗುಹ್ಯಂ ನ ಮೇ ಕಿಂಚಿದ್ಭಕ್ತಸ್ತ್ವಂ ಮತ್ಪದಾಂಬುಜೇ ॥೭॥

ತದ್ಭಕ್ತಿಭಾವಿತೋಽಹಂ ತೇ ದೇವ್ಯಾ ದೃಗ್ಗೋಚರೀಕೃತಃ ।
ಮಯಾ ಕೈಲಾಸಶಿಖರೇ ಭವಾನ್ಯೈ ಭವನಾಶಕಂ ॥೮॥

ಶಿರೋವ್ರತಮಿದಂ ಪ್ರೋಕ್ತಂ ನಾನ್ಯೇಷೂಕ್ತಂ ಮುನಿಷ್ವಪಿ ।
ತತ್ತೇಽಹಂ ಸಂಪ್ರವಕ್ಷ್ಯಾಮಿ ಸಾಕ್ಷಾತ್ತ್ರ್ಯಕ್ಷ ಪ್ರಸಾದಕೃತ್ ॥೯॥

ಕೃತ್ವೇದಂ ಪಾವನಂ ವಿಪ್ರ ವ್ರತಂ ಸರ್ವಂ ಕೃತಂ ಭವೇತ್ ।
ಅಧೀತಾಸ್ತೇನ ವೇದಾ ಹಿ ಸಾಂಗೋಪನಿಷದಃ ಸಹ ॥೧೦॥

---

ಮಾನ್ಯನೂ ಎನಿಸಿರುವೆ. ಭಸ್ಮನಿಷ್ಠನಾಗಿ ಶಾಂಭವನೆನಿಸಿದ ನಿನ್ನ ತಪಃಪ್ರಭಾವದಿಂದ ಈ ಬ್ರಹ್ಮಾದಿದೇವತೆಗಳೆಲ್ಲರೂ ಕಂಗೆಟ್ಟಿರುವರು. ॥೩-೪॥

ಇವರೆಲ್ಲರೂ ವ್ಯಥೆಪಟ್ಟು ನನ್ನಲ್ಲಿಗೆ ಬಂದು ಮೊರೆಹೊಕ್ಕರು. ಅದರಿಂದಲೇ ಈಗ ನಾನು ನಿನ್ನಲ್ಲಿಗೆ ಬಂದಿರುವೆನು. ಈಗ ನಿನಗೆ ಶ್ರೇಷ್ಠವಾದ ಶಿರೋವ್ರತವೊಂದನ್ನು ಉಪದೇಶಿಸುವೆನು. ಈ ವ್ರತವು ಅಥರ್ವಶೀರ್ಷೋಪನಿಷತ್ತಿನಲ್ಲಿ ಉಕ್ತವಾಗಿರುವುದು. ಇದು ಮಾನವರ ಅಜ್ಞಾನವನ್ನು ನಿವಾರಿಸಿ, ಪುಣ್ಯವನ್ನೂ ಜ್ಞಾನವನ್ನೂ ವೃದ್ಧಿಗೊಳಿಸುವುದು. ॥೬॥

ಇದು ಭಕ್ತರ ಅಜ್ಞಾನವನ್ನು ನಾಶಗೊಳಿಸುವುದರಲ್ಲಿ ಸೂರ್ಯನಂತಿರುವುದು. ಅದು ಅಷ್ಟು ರಹಸ್ಯವಾದುದಾದರೂ ಭಕ್ತವರ್ಯನಾದ ನಿನ್ನಲ್ಲಿ ಹೇಳಬಾರದ ವಿಷಯವು ನನಗೆ ಯಾವುದೂ ಇಲ್ಲ. ನಿನ್ನ ಭಕ್ತಿಗೆ ಮೆಚ್ಚಿ ನಾನು ಈಗ ದೇವಿಯೊಡನೆ ಪ್ರತ್ಯಕ್ಷನಾಗಿರುವೆನು. ॥೭-೮॥

ಹಿಂದೆ ನಾನು ಕೈಲಾಸಗಿರಿಯಲ್ಲಿ ಗೌರೀದೇವಿಗೆ ಸಂಸಾರದುಃಖನಾಶಕರವಾದ ಈ ಶಿರೋವ್ರತವನ್ನು ಉಪದೇಶಿಸಿದೆನು. ಇದನ್ನು ಮತ್ತಾವ ಮುನಿಗೂ

ತೇನೇಷ್ಟಾಃ ಸಕಲಾ ಯೋಗಾ ದತ್ತದಾನಃ ಸ ಏವ ಹಿ
ಬ್ರಹ್ಮವಿಷ್ಣ್ವಾದಿಭಿರ್ವಂದ್ಯೋ ಸ ಹಿ ಮದ್ಗಣಪೋ ಭವೇತ್ ।
ಸ್ಕಂದವಿಘ್ನೇಶತುಲ್ಯೋಽಸೌ ಸೈವಮೇತ್ಯಾಶ್ರಮೀ ಭವೇತ್
ಶಿರೋವ್ರತವಿಧಿಂ ತ್ವೇತದಾಶ್ರಮೇ ಶ್ರಮಮಾಪ್ನುಯಾತ್ ॥೧೨॥

ಬ್ರಹ್ಮಕ್ಷತ್ರಿಯವೈಶ್ಯೋ ವಾ ಬ್ರಹ್ಮಚಾರೀ ಗೃಹೀ ವನೀ ।
ಸಂನ್ಯಾಸೀ ವಾ ಮುನಿಶ್ರೇಷ್ಠ ಶಿರೋವ್ರತವಿವರ್ಜಿತಃ ॥೧೩॥

ವೇದಾಂತೋತ್ಥಂ ಮಮ ಜ್ಞಾನಂ ನ ಸಂವಿಂದಂತಿ ಜಾತುಚಿತ್ ।
ನೈತಾಂ ಶಾಂತಿಮವಾಪ್ನೋತಿ ಶಾಶ್ವತೀಮಿತಿ ಮೇ ಶ್ರುತಿಃ ॥೧೪॥

ಅಭ್ಯಸ್ಯಾಪಿ ಚ ವೇದಾಂತಾನ್ ಶಿರೋವ್ರತವಿವರ್ಜಿತಃ ।
ಶಬ್ದಾರ್ಥವಿಪ್ಲವೇದೇವ ನ ಸಾಕ್ಷಾತ್ಕೃತಿಮಾಪ್ನುಯಾತ್ ॥೧೫॥

ಗುರುರ್ವಾಪಿ ತಥಾ ಶಿಷ್ಯೋ ವಿಶಿಷ್ಯ ಮುನಿಸತ್ತಮ ।
ಶಿರೋವ್ರತಮಯೈಶ್ಚೀರ್ಣಂ ತೇ ತೀರ್ಣಾ ಭವಸಾಗರಾತ್ ॥೧೬॥

---

ಇಲ್ಲಿನ ವರೆಗೆ ತಿಳಿಯಪಡಿಸಿಲ್ಲ. ಈ ವ್ರತವೊಂದನ್ನು ಆಚರಿಸಿದರೆ ನಿಖಿಲ ವ್ರತವನ್ನೂ ಅನುಷ್ಠಾನ ಮಾಡಿದಂತೆಯೇ ಆಗುವುದು. ಈ ವ್ರತಾಚರಣೆಯಿಂದ ಸಾಂಗವಾದ ವೇದಾಧ್ಯಯನದ ಫಲವು ದೊರೆಯುವುದು. ॥೯-೧೦॥

ಶಿರೋವ್ರತವನ್ನು ಮಾಡಿದರೆ ಸಕಲ ಯಾಗಗಳನ್ನು ಮಾಡಿದ ಮತ್ತು ಅನೇಕ ದಾನಗಳನ್ನು ನಡೆಸಿದ ಪುಣ್ಯವೊದಗುವುದು ಬ್ರಹ್ಮ, ವಿಷ್ಣು ಮೊದಲಾದ ದೇವತೆಗಳಿಗೂ ಪೂಜ್ಯನಾಗಿ ನನ್ನ ಗಣಕ್ಕೆ ಆಧಿಪತಿಯಾಗುವನು. ಮತ್ತು ಸ್ಕಂದ ಗಣಪತಿಯರಂತೆ ನನಗೂ ಪ್ರೀತಿಪಾತ್ರನೆನಿಸುವನು. ಕೊನೆಗೆ ಸಕಲಾಶ್ರಮಧರ್ಮಗಳನ್ನೂ ಮೀರಿದ ಅತ್ಯಾಶ್ರಮಿಯೆನಿಸಿ ನನ್ನ ಸಾನ್ನಿಧ್ಯವನ್ನು ಪಡೆಯುವನು. ॥೧೧-೧೨॥

ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಬ್ರಹ್ಮಚಾರೀ, ಗೃಹಸ್ಥ, ವಾನಪ್ರಸ್ಥ, ಸಂನ್ಯಾಸಿ ಇವರು ಯಾರೇ ಆಗಲಿ ಶಿರೋವ್ರತವನ್ನಾಚರಿಸದಿದ್ದರೆ ವೇದಾಂತ ಪ್ರತಿಪಾದ್ಯಮಾನವಾದ ಸುಜ್ಞಾನವನ್ನು ಎಂದಿಗೂ ಪಡೆಯಲಾರರು. ಅಂತಹವರಿಗೆ ಶಾಶ್ವತವಾದ ಶಾಂತಿಯು ಎಂದೂ ದೊರಕಲಾರದು. ॥೧೩-೧೪॥

ಉಪನಿಷತ್ತುಗಳನ್ನು ಅಭ್ಯಾಸಮಾಡಿದರೂ ಶಿರೋವ್ರತಾನುಷ್ಠಾನ ಮಾಡದಿದ್ದರೆ ಅಂತಹವರಿಗೆ ಕೇವಲ ಉಪನಿಷತ್ತಿನ ಶಬ್ದಗಳು ಅರ್ಥವಾಗುವುವೇ ಹೊರತು

ಅನ್ಯೇ ಸತ್ಯಂ ನಿಮಜ್ಜಂತಿ ಮತ್ಪ್ರಸಾದಪರಾಙ್ಮುಖಾಃ ।
ತಸ್ಮಾಚ್ಛಿರೋವ್ರತಂ ಪುಣ್ಯಂ ಯೈಸ್ಸಮಾಚರಿತಂ ಮುದಾ ೧೭॥

ತೇಷಾಂ ಚೋಪನಿಷದ್ವಿದ್ಯಾಂ ವದೇತ್ಯೈವಮಿತಿಶ್ರುತಿಃ ।
ತೇಷಾಂ ವೈ ಹೃದಯಗ್ರಂಥಿರ್ಭಿಂದ್ಯಾಚ್ಛಿಂದ್ಯಾತ್ಸವಶ್ಯತಃ ॥೧೮॥

ಸ ಏವ ಮುಕ್ತೋ ಭಕ್ತೋ ಮೇ ನಾನ್ಯಸ್ಸಂಸಾರವಾರಿಧೇಃ ।
ಬ್ರಹ್ಮಚಾರೀ ಗೃಹಸ್ಥೋವಾ ವನಸ್ಥೋ ವಾಥ ಮಸ್ಕರೀ ॥೧೯॥

ಶಿರೋವ್ರತಮಿದಂ ಕೃತ್ವಾ ಸೋತಿವರ್ಣಾಶ್ರಮೋ ಭವೇತ್ ।
ನ ಪುಣ್ಯಪಾಪೈರ್ಬಧ್ನಾತಿ ಬ್ರಧ್ನವದ್ಭಾಸಕೋ ಭವೇತ್ ॥೨೦॥

॥ ಶ್ರೀ ಈಶ್ವರ ಉವಾಚ ॥

ಮರ್ತ್ಯಾ ಅಮರ್ತ್ಯಪದವೀಮಪಿ ತೇ ಲಭಂತಿ
ಸುಪ್ತಾ ವಿಹೀನಮತಯೋಽಪಿ ಮಮೇಶಿ ಕಾಂತ್ಯಾ ।
ವ್ರಾತ್ಯಾ ಅಪೀಂದ್ರಸದೃಶೋತ್ತಮಭೋಗಜಾತ್ಯಾ
ವಾತ್ಯಾ ಗತಾಂಗಪರಿಶೋಭಾ ಭಜಂತಿ ಭೂತ್ಯಾ ॥೨೧॥

---

ಅದರ ಫಲವಾದ ಆತ್ಮಸಾಕ್ಷಾತ್ಕಾರವಾಗುವುದಿಲ್ಲ. ಗುರುವಾಗಲಿ, ಶಿಷ್ಯನಾಗಲಿ ಸಂಸಾರ ಸಾಗರದಿಂದ ಪಾರಾಗಬೇಕಾದರೆ ಶಿರೋವ್ರತವನ್ನೇ ಆಚರಿಸಬೇಕು. ॥೧೫-೧೭॥

ಶಿರೋವ್ರತಮಾಡದವರಿಗೆ ನಿಜವಾಗಿಯೂ ಭವಸಾಗರದಿಂದ ಉದ್ಧಾರ ವಿರುವುದಿಲ್ಲ. ಶಿರೋವ್ರತಾನುಷ್ಠಾನಪರರಿಗೇ ಉಪನಿಷದ್ವಿದ್ಯೆಯನ್ನು ಬೋಧಿಸ ಬೇಕೆಂಬ ಶ್ರುತ್ಯಾಧಾರವಿದೆ. ಅಂತಹವರ ಹೃದಯಕುಹರದಲ್ಲಿಯೇ ಸಚ್ಚಿದಾತ್ಮಕ ವಾದ ಆತ್ಮಜ್ಞಾನವು ಲಭಿಸಿ ಶಾಶ್ವತವಾದ ಮೋಕ್ಷವು ಲಭಿಸುವುದು. ॥೧೭-೧೮॥

ಅವನೇ ನನಗೆ ನಿಜವಾದ ಭಕ್ತನೆನಿಸುವನು. ಬ್ರಹ್ಮಚಾರಿಯಾಗಲಿ, ಗೃಹಸ್ಥನಾಗಲಿ, ಸಂನ್ಯಾಸಿಯಾಗಲಿ ಶಿರೋವ್ರತವನ್ನು ಆಚರಿಸಿದವರು ಅತ್ಯಾಶ್ರಮಿ ಗಳೆನಿಸುವರು. ಅವರಿಗೆ ಪಾಪಪುಣ್ಯಗಳ ಸಂಪರ್ಕವಿರುವುದಿಲ್ಲ. ಸೂರ್ಯನಂತೆ ಸ್ವಯಂಪ್ರಕಾಶಕರಾಗುವರು. ॥೧೯-೨೦॥

ಎಲೌ ದೇವಿಯೇ, ಶಿರೋವ್ರತವನ್ನಾಚರಿಸಿದವರು ಮಾನವರಾದರೂ ದೇವತೆಗಳಿಗೆ ಸದೃಶವಾದ ಸ್ಥಾನವನ್ನು ಪಡೆಯುವರು. ಬುದ್ಧಿಯಲ್ಲಿ ಅಡಗಿರುವ

ಕೃತ್ಯಾಕೃತ್ಯವಿವರ್ಜಿತಾಶ್ಚ ಗಿರಿಜೇ ಸತ್ಯಾನುವೃತ್ತ್ಯಾಹತ
ವ್ರಾತ್ಯಾಸ್ತೇ ಗೃಹಿಣೀಫಣೀಕುರಸನಾದಷ್ಟಾಶ್ಚ ದುಃಖಾಶಯಾಃ ।
ಸ್ತುತ್ಯಾ ನತ್ಯಾ ವಿಭೂತ್ಯಾ ಮಮ ನಿಗಮಮಹಾಸಾರಭೂತ್ಯಾವಿಹೀನಾ
ಫಾಲೇ ಕಾಲಾನಲಂ ತೇ ತಿಲಕುಲಬಲವದ್ಧರ್ಷಮಾಣಾ ಹಿ ಭೀತ್ಯಾ ॥೨೨॥

ಯೇ ಗಾರ್ಹಪತ್ಯಭಸಿತಂ ಕಿಲ ಫಾಲದೇಶೇ
ಲಿಂಪಂತಿ ತೇ ಹಿ ಗೃಹಿಣೋ ಭವತೇ ನಿಲಿಂಪಾಃ ।
ವನ್ಯೋಽಪಿ ಮಾನ್ಯಪದವೀಮುದವೀಯಸೀಂ ಸೋ
ನೈಶ್ರೇಯಸೀಮಥ ಲಭೇತ ವನೋದ್ಭವೇನ ॥೨೩॥

ಸಮಿದ್ದಾಹೋತ್ಪನ್ನಂ ಸಿತಭಸಿತಧಾರೀ ಯದಿ ಶಿವೇ
ವಿರಾಜೋತ್ಥೇನಾಪಿ ದ್ರುಹಿಣಸದನೇ ಸೋಽಹಂಮತಿಭಾಕ್ ।

---

ಸುಷುಪ್ತ್ಯಂಶವು ಈ ಪೂಜೆಯಿಂದ ನಿವೃತ್ತವಾಗುವುದು. ಕರ್ಮಭ್ರಷ್ಟರಾದವರೂ ಸಹ ಈ ವ್ರತಾಚರಣೆಯಿಂದ ಇಂದ್ರಭೋಗವನ್ನು ಪಡೆಯುವರು. ಸಮಸ್ತ ಪಾಪರಾಶಿಯಿಂದಲೂ ಬಿಡುಗಡೆ ಹೊಂದಿ ಕೊನೆಗೆ ಐಶ್ವರ್ಯಸಮೃದ್ಧರೆನಿಸುವರು.॥೨೧॥

ದೇವಿಯೇ, ಕಾರ್ಯಾಕಾರ್ಯವಿಚಾರತತ್ಪರರಾಗದೆ ಸನ್ಮಾರ್ಗವನ್ನು ಬಿಟ್ಟು ಶಿವಧರ್ಮಾನುಯಾಯಿಗಳಾಗದವರು, ವ್ರಾತ್ಯರೆನಿಸಿ, ಪತ್ನಿಯೆಂಬ ಕ್ರೂರಸರ್ಪದ ವಿಷವಾಕ್ಯಗಳಿಂದ ಸಂಕಟಪಡುತ್ತಾ ದುಃಖಭಾಗಿಗಳಾಗುವರು. ಮತ್ತು ನನ್ನನ್ನು ಸ್ತುತಿಸಿ, ವಂದಿಸಿ, ವಿಭೂತಿಯನ್ನು ಧರಿಸಿ ಮುಕ್ತಿಯನ್ನು ಪಡೆಯದೆ ಅಂತಹವರು, ಯಮನ ಕೈಗೆ ಸಿಕ್ಕಿ, ಗಾಣಕ್ಕೆ ಸಿಕ್ಕಿದ ಎಳ್ಳಿನ ರಾಶಿಯಂತೆ ಹಿಂಡಿ ಹಣ್ಣಾಗಿ ಹೋಗುವರು. ॥೨೨॥

ಗೃಹಸ್ಥಾಶ್ರಮದಲ್ಲಿರುವವರು ಗಾರ್ಹಪತ್ಯಾಗ್ನಿಯಿಂದ ಲಭಿಸಿದ ಭಸ್ಮವನ್ನು ಹಣೆಗೆ ಧರಿಸಿಕೊಂಡರೂ, ವಾನಪ್ರಸ್ಥಾಶ್ರಮಿಗಳು ಕಾಡುಕಿಚ್ಚಿನಿಂದ ಉಂಟಾದ ಭಸ್ಮವನ್ನು ಹಣೆಗಿಟ್ಟರೂ, ಅವರು ಸರ್ವಮಾನ್ಯವಾದ ಉತ್ತಮೋತ್ತಮವಾದ ಮುಕ್ತಿಮಾರ್ಗವನ್ನು ಅನಾಯಾಸವಾಗಿ ಪಡೆಯುವರು. ॥೨೩॥

ಬ್ರಹ್ಮಚಾರಿಯಾದವನು ಅಗ್ನಿಕಾರ್ಯವೆಂಬ ಕರ್ಮದಲ್ಲಿ ಸಮಿದ್ದಾಹದಿಂದ ಲಭಿಸಿದ ಶುಭ್ರವಾದ ಭಸ್ಮವನ್ನು ಹಣೆಗಿಡುತ್ತಾ, ಅಥವಾ ರಜೋರಹಿತವಾದ ಕಾಡುಬೂದಿಯನ್ನು ಧರಿಸುತ್ತಾ, ಉಪನಿಷತ್ಪಾರಾಯಣ ಮತ್ತು ಶಿರೋವ್ರತಾನು

ವಿರಾಜತ್ಯೇವಾಯಂ ಭಸಿತಲಸಿತಾಂಗೋ ಶ್ರುತಿಶಿರೋ
ವಿಹಾರೀ ವರ್ಣೀ ವೈ ಭವತಿ ಮಮ ಸಂಪೂರ್ಣ ಕೃಪಯಾ ॥೨೪॥

ಯತಿಃ ಶ್ರುತಿಶಿರೋವ್ರತಂ ಗದಿತಮೇವಾಚರನ್ ಸ್ವಯಂ
ಮತಿಪ್ರದಮುಮೇ ಸದಾ ಸುಗಮಮಾರ್ಗಮೇವಾಗಮೇ ।
ಲಭೇತ ನಿಜಬೋಧದಂ ವಿದಿತವೇದ್ಯಮೋದಪ್ರದಂ
ತ್ರಿಪುಂಡ್ರಪರಿಧಾರಣಂ ಶರಣಮೇವ ಶರ್ಮಾಂದಿನಂ ॥೨೫॥

ಯತಿರ್ನಯತಿ ಭಾಗ್ಯವೇತ್ ಕುಮತಿಮಾರ್ಗದೂರಾದರೋ
ಗತಿಪ್ರದಮಿದಂ ಸದಾ ಭಸಿತಭಾಸಿತಾಂಗಶ್ಶಿವೇ ।
ಸ ಯಾತಿ ವಿಮಲಂ ಪದಂ ಪಶುಪತೇರ್ವಿಮುಕ್ತಿಪ್ರದಂ
ಸ ಏವ ಭವಪಾಶತಶ್ಚಿರತರಾಂ ಚ ಮುಕ್ತಿಂವ್ರಜೇತ್ ॥೨೬॥

ಪರಸೇವಾಪ್ರವಣೋ ಯತಿರ್ಭವೇ
ನ್ಮಮ ಲಿಂಗಾರ್ಚನಮಾತ್ರಭಿಕ್ಷಿತಾನ್ನಃ ।

---

ಷ್ಠಾನ ಇವುಗಳನ್ನು ನಡೆಸುವುದರಿಂದ ಕಾಲಕಳೆದವನಾದರೆ, ಅವನಿಗೆ ಬ್ರಹ್ಮಸ್ಥಾನವು ಲಭಿಸುವುದರಲ್ಲಿ ಸ್ವಲ್ಪವೂ ಅನುಮಾನವಿಲ್ಲ. ಅಲ್ಲದೆ ಅವನಿಗೆ ಸೋಹಂಭಾವನೆಯು ದೊರೆತು ನನ್ನ ಸಂಪೂರ್ಣಾನುಗ್ರಹಕ್ಕೆ ಪಾತ್ರನೆನಿಸುವನು. ॥೨೪॥

ಶ್ರುತ್ಯುಕ್ತವಾದ ಶಿರೋವ್ರತವನ್ನಾಚರಿಸುವ ಸಂನ್ಯಾಸಿಯು ಆಗಮ ಬೋಧಿತವಾದ ಸುಗಮ ಮುಕ್ತಿಮಾರ್ಗವನ್ನು ಪಡೆಯುವನು. ಮತ್ತು ಆತ್ಮಜ್ಞಾನ ವನ್ನು ಪಡೆದು ಆತ್ಮಜ್ಞಾನಾಭಿಲಾಷಿಗಳಿಗೆ ವಿಶೇಷವಾದ ಆನಂದವನ್ನುಂಟುಮಾಡಿ, ತ್ರಿಪುಂಡ್ರಧಾರಣಾದಿಗಳಿಗೆ ಯೋಗ್ಯವಾದ ಈಶ್ವರಸಾಯುಜ್ಯರೂಪವಾದ ಸತ್ಫಲವನ್ನು ಪಡೆಯುವನು. ॥೨೫॥

ಸಂನ್ಯಾಸಿಯು ಭಸ್ಮಭೂಷಿತಗಾತ್ರನಾಗಿ, ಸದ್ಗತಿಪ್ರದವಾದ ಈ ಶಿರೋವ್ರತ ವನ್ನು ಆಚರಿಸಿದರೆ ಆತನು ಮತ್ತೆ ಸಂನ್ಯಾಸಿಯಾಗಲಾರನು. ಅವನಿಗೆ ಪರಶಿವನ ಅನುಗ್ರಹವು ದೊರೆತು ಮತ್ತೆ ಸಂಸಾರಸಾಗರಕ್ಕೆ ಬೀಳದ ಸ್ಥಿರವಾದ ಮುಕ್ತಿಯು ದೊರೆತು ಸಾಕ್ಷಾಚ್ಛಿವಸ್ವರೂಪನೆನಿಸುವನು. ಇದರಲ್ಲಿ ಅನುಮಾನವಿಲ್ಲ. ॥೨೬॥

ಪರಸೇವೆಯಲ್ಲಿ ಆಸಕ್ತನಾದ ಸಂನ್ಯಾಸಿಯು ಅದನ್ನು ಬಿಟ್ಟು, ಸರ್ವದಾ ಶಿವಲಿಂಗವನ್ನರ್ಚಿಸುತ್ತಾ, ಭಿಕ್ಷಾನ್ನದಿಂದ ಜೀವಿಸಿ ಸದಾ ಭಸ್ಮತ್ರಿಪುಂಡ್ರಧಾರಿ

ಭಸಿತಂ ಸಿತಮೇವ ಧಾರಯಂಶ್ಚ್ಛ್ರುತಿ
ವಿದ್ಯಾತ್ಮಗತಿಂ ಲಭೇತ ಸಃ ॥೨೭॥

ಅವಕುಂತನಕುಂಠಿತೋರುಪಾಪಾಃ
ಸತತಂ ಪರಿಭಾಂತಿ ನೀಲಕಂಠಾಃ ।
ಹೃದಿ ಸೋತ್ಕಂಠಭವಾಪಿ ತದ್ವೈ
ಪರಿಪೂಜ್ಯ ತ್ರಿದಶಾಧಿಪಾವಿಕುಂಠಾಃ ॥೨೮॥

ಪ್ರಾತರ್ಧೃತಂ ಭಸಿತಮೇವ ಭವೇದಘಘ್ನಂ
ಯನ್ನೈಶಸಂಭವಮುಮೇ ಧೃತಸಂಗವಂ ಚ ।
ಪ್ರಾಹ್ಣಾಪರಾಹ್ಣವಿಧೃತಂ ಕಿಲ ಪೂರ್ವಪಾಪಂ
ಸಾಯಂತನೇಪಿ ವಿಧೃತಂ ಭವತೇ ವಿಮುಕ್ತ್ಯೈ ॥೨೯॥

ನಿಶಿ ಶಿಖಿವಿಶಿಖಂ ಭಜೇತ ಮುಕ್ತ್ಯೈ
ಶಶಧರಶೇಖರಮೇವ ಭಸ್ಮಧಾರೀ ।
ಸ್ಮರಹರಗಾತ್ರವಿಭಾಸನಂ ಭಜೇದ್ಯೋ
ಕ್ಷರದೇ ಕ್ಷಾರಮುಮೇ ಮಹಾಘಹಾರೀ ॥೩೦॥

---

ಯಾಗಿ ಕಾಲಕಳೆದರೆ, ಆತನಿಗೆ ನಿಜವಾಗಿಯೂ ಶಾಶ್ವತವಾದ ಮೋಕ್ಷವು ದೊರೆಯುವು ದೆಂಬುದರಲ್ಲಿ ಸಂಶಯವಿಲ್ಲ. ॥೨೭॥

ಪರಶಿವನೆನಿಸಿದ ನನ್ನನ್ನೇ ಸದಾ ಪೂಜಿಸುತ್ತಾ, ಇಂದ್ರಪದವಿಯಲ್ಲಿಯೂ ಆಸೆಯಿಡದೆ ನನ್ನನ್ನೇ ಆಶ್ರಯಿಸಿದವರು ಸಮಸ್ತಪಾಪಮುಕ್ತರಾಗಿ, ನನ್ನಂತೆಯೇ ನೀಲಕಂಠರೆನಿಸಿ ನನ್ನ ಸ್ವರೂಪವನ್ನೇಪಡೆಯುವರು. ಎಂದಿಗೂ ಆಗ ಅವರಿಗೆ ಪುನರ್ಜನ್ಮದೊರೆಯಲಾರದು. ॥೨೮॥

ಪ್ರಾತಃಕಾಲದಲ್ಲಿ ಭಸ್ಮಧಾರಣೆಯು ಸಕಲಪಾಪವನ್ನೂ ನಾಶಗೊಳಿಸುವುದು. ಸಂಗವಕಾಲದ ಭಸ್ಮವು ಐಶ್ವರ್ಯಪ್ರದವಾಗುವುದು. ಪೂರ್ವಾಹ್ಣ ಮತ್ತು ಅಪರಾಹ್ಣ ಕಾಲದಲ್ಲಿ ಧರಿಸಿದ ಭಸ್ಮವು ಹಿಂದಿನ ಸಕಲಪಾಪರಾಶಿಯನ್ನೂ, ಸಾಯಂಕಾಲದ ಭಸ್ಮಧಾರಣೆಯು ವಿಶೇಷವಾದ ಮುಕ್ತಿಯನ್ನೂ ಒದಗಿಸಿಕೊಡಬಲ್ಲುದು. ॥೨೯॥

ರಾತ್ರಿಯ (ಅರ್ಧರಾತ್ರಿ) ಹೊತ್ತಿನಲ್ಲಿ ಚಂದ್ರಶೇಖರನೂ, ಅಗ್ನಿನೇತ್ರನೂ, ಮಾರಾರಿಯೂ ಆದ ನನ್ನನ್ನು ಭಜಿಸುತ್ತಾ, ನನ್ನಸ್ವರೂಪವನ್ನೇ ಅನುಸಂಧಾನ

ತ್ರಿಪುಂಡ್ರವಿಲಸತ್ತನುರ್ಭನತಿ ಪೂರ್ವಪುಣ್ಯೋದಯೈ
ರ್ನಿಕುಂತನವಿಕುಂಠಿತೋ ಭವತಿ ಪಾಪತಾಪಾನಲಃ ।
ಸ ಏವ ಮಮ ಪೂಜನೇ ಭವತಿ ಭಸ್ಮನಾಹೋರ್ಽ ಜನಃ
ಸ ಏವ ಸುಖಸಂಪದಾಂ ಪರಮವಾಪ್ಯಮೋದೇತ ಹಿ ॥೩೧॥

ಭಸ್ಮಾಲಂಕೃತಫಾಲಮೇವ ಸಫಲಂ ಯತ್ಕಾಲಕಾಲೇ ನತಂ
ತಲ್ಲೋಲಾಮಲಲೋಚನೇ ಹಿ ಸಫಲೇ ಮಲ್ಲಿಂಗಲೋಕಾವೃತೇ ।
ಯದ್ಬಾಹ್ವೋಃ ಶಿಖರೇ ತ್ರಿಪುಂಡ್ರರಚಿತೇ ಹಸ್ತೌ ನೇಮ ಸ್ಪರ್ಶಕೇ
ಯತ್ಪಾದೌ ಸತತಂ ಮದಾಲಯಗತೀ ಸಂ ಪ್ರಕ್ರಮೇಣಕ್ರಮೌ ॥೩೨॥

ಧಿಗ್ಧಿಕ್ಫಾಲಮಹೋತ್ರಿಪುಂಡ್ರರಹಿತಂ ಶೂನ್ಯಂ ತದಾ ವೈ ಫಲಂ ।
ಭಸ್ಮಾಭ್ಯಕ್ತವಿವರ್ಜಿತಾ ತನುರಿಯಂ ಮನ್ಯೇ ಶಿವೇಶೂನ್ಯಕಂ ।
ಮನ್ಮನ್ಯುಪ್ರಭವಾಕ್ಷಿಕೋಣಕರುಣಾಲೇಶಾಂಶ ಪಾಲಾನಲೇ ।
ತೂಲಾಯೇತ ಶಿವೇ ಜನಃ ಕಿಲ ತದಾ ಭಸ್ಮಾಂಗಸಂಘೋಜ್ಝಿತಃ ॥೩೩॥

---

ಮಾಡುತ್ತಾ ಭಸ್ಮಧಾರಿಯಾಗುವವನು ತನ್ನ ಸಂಪೂರ್ಣವಾದ ಪಾಪರಾಶಿಯನ್ನು ಕಳೆದುಕೊಳ್ಳುವನು. ॥೩೦॥

ಪೂರ್ವಪುಣ್ಯಾವಿರ್ಭಾವದಿಂದಲೇ ಮಾನವನು ಭಸ್ಮತ್ರಿಪುಂಡ್ರಧಾರಿಯಾಗುವನು. ಅವನ ತಾಪಕರವಾದ ಪಾಪಾಗ್ನಿಯು ಅವನವಿಷಯದಲ್ಲಿ ಶಕ್ತಿಹೀನವಾಗುವುದು. ಅವನೇ ನನ್ನನ್ನು ಪೂಜಿಸಲು, ಭಸ್ಮವನ್ನು ಧರಿಸಲು ಅರ್ಹನೆನಿಸುವನು. ಕೊನೆಗೆ ಸಕಲ ಸಂಪತ್ತುಗಳನ್ನೂ ಪಡೆದು ಆನಂದಾಂಬುಧಿಯಲ್ಲಿ ಮುಳುಗುವುವನನೂ ಅವನೇ. ॥೩೧॥

ಕಾಲಕಾಲನೆನಿಸಿದ ನನ್ನನ್ನು ವಂದಿಸಿ ನೋಡಿದ ಭಸ್ಮತ್ರಿಪುಂಡ್ರ ವಿಶಿಷ್ಟವಾದ ಹಣೆ ನೇತ್ರಗಳೇ ಲೋಕದಲ್ಲಿ ಪವಿತ್ರವಾದವು. ಭಸ್ಮತ್ರಿಪುಂಡ್ರಕ್ಕೆ ಆಶ್ರಯವಿತ್ತ ಭುಜಶಿಖರವೂ, ಶಿವಲಿಂಗಸ್ಪರ್ಶಮಾಡಿದ ಕೈಗಳೂ ಸಾರ್ಥಕವಾದವುಗಳು. ಯಾವನ ಕಾಲುಗಳು ಶಿವಾಲಯಗಮನ, ಪ್ರದಕ್ಷಿಣಾದಿಗಳಿಗೆ ಪಾತ್ರಗಳಾಗುವುವೋ ಅವೇ ಶ್ರೇಷ್ಠವಾದವುಗಳು. ॥೩೨॥

ಭಸ್ಮತ್ರಿಪುಂಡ್ರರಹಿತವಾದ ಹಣೆಗೂ, ಭಸ್ಮೋದ್ಧೂಲನವಿಲ್ಲದ ಶರೀರಕ್ಕೂ ಧಿಕ್ಕಾರವಿರಲಿ. ದೇವಿಯೇ, ಆ ದೇಹಫಾಲಗಳು ಶೂನ್ಯವಾದವುಗಳು. ಅವುಗಳಿಗೆ

ಹಾಹಾ ಶಿವೇ ಪರಿಪತಂತಿ ಮಹಾಗ್ನಿಶೂಲ
ಕುಂಭೀನಸೋರುವಲಯೇ ಕಿಲ ಕಾಲವಕ್ತ್ರೇ ।
ಸಂತಾರಣಂ ಭವಮಹಾಂಬುಧಿವೀಚಿಮಜ್ಜ
ದ್ದುರ್ಜೀವಜಾತಜನುಷಾಂ ಕಿಲ ಭಸ್ಮನಾಲಂ ॥೩೪॥

ಊರ್ಧ್ವಂ ಮೃದಾ ಹೃದುದರೇ ಕಿಲ ಬಾಹುಮೂಲೇ
ಫಾಲೇ ಗಳೇ ವಿರಚಿತಾಖಿಲಪಾಪಪುಂಡ್ರಃ ।
ತಂ ವಹ್ನಿಶೈಲಶಿಖರೇ ಖರಶೇಫಜಾತಂ
ಜಾರೋಪಜಾರಜಭವಂ ಪರಿಪಾತಯಾಮಿ ॥೩೫॥

ಸಂತಪ್ತಾಧಮಚಕ್ರಚಿಹ್ನಿತತನುಂ ತಂ ನಕ್ರವಕ್ತ್ರೋಪಮಂ
ಸಂತಪ್ತಕ್ರಕಚೈರ್ವಿದಾರಿತಮಹಾಪೂರ್ಧಾನಮಪ್ಯಂತತಃ ।

---

ಫಲವೂ ಶೂನ್ಯವೇ. ಹಾಗೆ ಭಸ್ಮವನ್ನೂ ಧರಿಸದೆ, ಭಸ್ಮಧಾರಿಗಳ ಸಂಘವನ್ನೂ ದೂರೀಕರಿಸುವ ಮಾನವನು, ನನ್ನ ಕೋಪಪೂರಿತವಾದ ಅಗ್ನಿನೇತ್ರದ ಕಟಾಕ್ಷಕ್ಕೆ ಸಿಕ್ಕಿ ಹತ್ತಿಯ ರಾಶಿಯಂತೆ ಉರಿದುಹೋಗುವನು. ॥೩೩॥

ಪಾರ್ವತಿಯೇ, ಅನ್ಯಾಯವಾಗಿ ಭಸ್ಮವನ್ನು ದೂರೀಕರಿಸಿದವರು, ದೊಡ್ಡ ಬೆಂಕಿಯಿಂದಲೂ, ಶೂಲದಿಂದಲೂ ಚಿತ್ರಹಿಂಸೆಕೊಡುವ ಕುಂಭೀಪಾಕವೆಂಬ ನರಕಕ್ಕೂ ಯಮನ ಕಟವಾಯಿಗೂ ಸಿಕ್ಕಿ ನರಳುವರು. ಪ್ರಪಂಚದಲ್ಲಿ ಸಂಸಾರ ದುಃಖವೆಂಬ ಮಹಾಸಮುದ್ರದ ಅಲೆಗಳ ಹೊಡೆತಕ್ಕೆ ಸಿಕ್ಕಿದವರು ಅಲ್ಲಿಂದ ಸುಲಭವಾಗಿ ತಪ್ಪಿಸಿಕೊಂಡು ಆನಂದ ಸಾಗರವನ್ನು ಪಡೆಯಲು ಅವರಿಗೆ ಭಸ್ಮದ ಸಹಾಯವೇ ಬೇಕು. ಅದಲ್ಲದೆ ಮತ್ತಾವುದೂ ಆ ಕೆಲಸಕ್ಕೆ ಸಹಾಯಕವಾಗಲಾರದು. ॥೩೪॥

ಹೃದಯ, ಹೊಟ್ಟೆ, ತೋಳು, ಹಣೆ, ಕಂಠ ಈ ಅವಯವಗಳಲ್ಲಿ ಯಾರು ಭಸ್ಮತ್ರಿಪುಂಡ್ರವನ್ನಿಡದೆ, ಮಣ್ಣಿನಿಂದ ಊರ್ಧ್ವತ್ರಿಪುಂಡ್ರಗಳನ್ನು ಧರಿಸುವರೋ, ಅವರು ನಿಜವಾಗಿಯೂ ಪಾಪಮೂರ್ತಿಗಳು. ಮತ್ತು ಗರ್ದಭವಂಶದಲ್ಲಿ ಜನಿಸಿದವರು, ಅಂತಹವರನ್ನು ಅಗ್ನಿಪರ್ವತದ ತುದಿಯಲ್ಲಿ ಹಾಕಿಸಿ ಸಂತಾಪಗೊಳಿಸುವೆನು. ॥೩೫॥

ತಪ್ತಮುದ್ರೆಯಿಂದ ಚಕ್ರಾಂಕನ ಮಾಡಿಸಿಕೊಂಡ ಮೊಸಳೆಯಂತೆ ಮುಖವುಳ್ಳ ಆ ಪಾಪಿಯ ತಲೆಯನ್ನು ಕಾದ ಗರಗಸದಿಂದ ಕೊಯ್ಸುವೆನು. ದುಸ್ತರವಾದ

ನಿಷ್ಠ್ಯಾಕೂಪಶತೇಷು ದುಸ್ತರಮಹೋ ನಿಸ್ತಾರವಿಸ್ತಾರಿತಂ
ಲಾಲಾಜಾಲ ನಿಕಾಯಲಾಲಿತಲತಾಗೇಹಾತ್ತಸರ್ವಾಂಗಕಂ ॥೩೬॥

ಸಂತಪ್ತಾಸಿವನೇಷು ಖಂಡಿತಮಹಾಮುಂಡಂ ಪ್ರಪಶ್ಯಾಂಬಿಕೇ ॥೩೭॥

ಗೋಧಾವಗಾಧತಮಸೋ ಹರಭಸ್ಮತಿರ್ಯ-
ಕ್ಕುರ್ಯುಸ್ತ್ರಿಪುಂಡ್ರಮಗಜೇ ಕಿಲ ಶೈವವರ್ಯಾಃ ।
ತತ್ಪಾಪಜಾಲಮಖಿಲಂ ಖಲು ಕಂಪಮೇತಿ
ಬೋಧಿದ್ರುಮಚ್ಛದಜಕಂಪನವದ್ಭವಾನಿ ॥೩೮॥

ನೇಕ್ಷೇ ತತ್ಕೃತಪೂಜನಂ ಚ ಗಿರಿಜೇ ಯದ್ಬಿಲ್ವಪತ್ರೈಃ ಕೃತಂ ।
ತದ್ದತ್ತಂ ಕುಸುಮಂ ವಹಾಮಿ ಶಿರಸಾ ಸ್ಯಾದಶ್ಮವೃಷ್ಟೇಃ ಸಮಂ ॥೩೯॥
ಸಾಲಗ್ರಾಮಶಿಲಾಸಮಾರ್ಚನಮಿವೇದಾನೀಂ ಚ ದೀನಾದರೋ ।
ದೂರಾತ್ತಂ ಪರಿವರ್ಜಯಾಮಿ ಸುತರಾಂ ಮಲ್ಲಿಂಗಸಂಪೂಜನಂ ॥೪೦॥

---

ಅನೇಕ ಅಮೇಧ್ಯಕೂಪಗಳಲ್ಲಿ ತಳ್ಳಿಸುವೆನು. ಕೀವು, ರಕ್ತ, ಜೊಲ್ಲು ಇವುಗಳಿಂದ ತುಂಬಿದ ಬಾವಿಗಳಲ್ಲಿ ಅದ್ದಿಸುವೆನು. ಕಾದಿರುವ ಅಸಿಪತ್ರವನವೆಂಬ ನರಕಕ್ಕೆ ತಳ್ಳಿ ಅವರ ತಲೆಯನ್ನು ಕತ್ತರಿಸುವಂತೆ ಮಾಡುವೆನು. ॥೩೬-೩೭॥

ಶೈವವರ್ಯರಾದವರು ಅಜ್ಞಾನವೆಂಬ ಕಗ್ಗತ್ತಲೆಯಲ್ಲಿ ಮುಳುಗಿದ್ದರೂ ಭಸ್ಮತ್ರಿಪುಂಡ್ರವನ್ನು ಧರಿಸುವರು. ಆದರಿಂದ ನಾನು ಪ್ರಸನ್ನನಾಗಿ ಅವರ ಪಾಪವನ್ನೆಲ್ಲಾ ನಾಶಗೊಳಿಸುವೆನು ಅರಳಿಯಮರದ ಎಲೆಯು ಗಾಳಿಗೆ ಸದಾ ನಡುಗುವಂತೆ ಭಸ್ಮಧಾರಿಗಳ ಪಾಪವು ಸದಾ ನಡುಗುತ್ತಿರುವುದು. ॥೩೮॥

ಭಸ್ಮತ್ರಿಪುಂಡ್ರವನ್ನು ಧರಿಸದೆ ನನ್ನ ಶಿವಲಿಂಗಕ್ಕೆ ಬಿಲ್ವಾರ್ಚನೆ ಮಾಡಿದರೂ ಅದನ್ನು ನಾನು ನೋಡುವುದೇ ಇಲ್ಲ. ಒಂದುವೇಳೆ ಅವರು ಸುಗಂಧಮಯವಾದ ಪುಷ್ಪಗಳನ್ನು ಅರ್ಪಿಸಿದರೂ, ನನಗೆ ಅವರು ಕಲ್ಲೆಸೆದಂತೆ ತಿಳಿಯುವೆನು. ಅಂತಹವರು ಎಷ್ಟೇ ಭಕ್ತಿಯಿಂದ ಶಿವಲಿಂಗಾರ್ಚನೆ ಮಾಡಿದರೂ, ಸಾಲಗ್ರಾಮಶಿಲಾರ್ಚನೆಯನ್ನು ದೂರಮಾಡುವಂತೆ ಅದನ್ನು ದೂರೀಕರಿಸುವೆನು. ಇದರಲ್ಲಿ ಸ್ವಲ್ಪವೂ ಸಂಶಯವಿಲ್ಲ. ॥೩೯-೪೦॥

ಅಹಸ್ಕರಸ್ತಸ್ಕರ ಏವ ತಸ್ಯ
ಮಯಸ್ಕರಾರ್ಚಾಪರಿವರ್ಜಿತಸ್ಯ ।
ವಿಲೋಕನೇ ಲೋಪಿತ ಏವ ಲೋಚನೇ
ನಾಲೋಕಿ ಲೋಕೇಪಿ ಸ ಪಾಪಿನಾಂ ಸಮಂ ॥೪೧॥

ಇತಿ ಶ್ರೀ ಶಿವರಹಸ್ಯೇ ಈಶ್ವರಾಖ್ಯೇ ದಶಮಾಂಶೇ ಶಿರೋವ್ರತಮಹಿಮಾ ಊರ್ಧ್ವಪುಂಡ್ರಚಕ್ರಾಂಕಿತ ನಿಷಿದ್ಧವರ್ಣನಂ ನಾಮೈಕಾದಶೋಽಧ್ಯಾಯಃ

---

ತೇಜಶ್ಶಾಲಿಯಾದ ಶಿವಲಿಂಗಾರ್ಚನೆಯನ್ನು ತೊರೆದವನಿಗೆ ಸೂರ್ಯದೇವನು ಸಹ ದಾರಿತೋರಲಾರನು. ಸೂರ್ಯನೂ ಕಳ್ಳನಂತೆ ಅವನ ವಿಷಯದಲ್ಲಿ ದೂರವಾಗಿ ಸರಿಯುವನು. ಅವನಿಗೆ ಕಣ್ಣುಗಳಿದ್ದರೂ ಇಲ್ಲದಂತೆಯೇ ಆಗುವುದು. ಅತ್ಯಂತ ಪಾಪಿಷ್ಠನಾದ ಅವನು ಯಾವ ಲೋಕಕ್ಕೆ ಹೋದರೂ ಯಾರೂ ಅವನನ್ನು ನೋಡಲಾರರು. ಅವನಿಗೂ ಯಾರೂ ಕಾಣುವುದಿಲ್ಲ" ಹೀಗೆಂದು ಶಂಕರನು ಪಾರ್ವತಿಗೆ ಹೇಳಿದುದನ್ನು ಕುಮಾರಸ್ವಾಮಿಯು ಜೈಗೀಷವ್ಯಮಹರ್ಷಿಗೆ ತಿಳಿಸಿದನು. ॥೪೧॥

ಇಲ್ಲಿಗೆ ಶ್ರೀಶಿವರಹಸ್ಯದ ದಶಮಾಂಶದಲ್ಲಿ ಹನ್ನೊಂದನೆಯ ಅಧ್ಯಾಯವು ಮುಗಿದುದು.



|| ಶ್ರೀಃ ||

|| ಶ್ರೀ ಶಿವಾಯನಮಃ ||

# ಅಥ ಶ್ರೀಶಿವರಹಸ್ಯೇ

## ಈಶಾನಾಖ್ಯೇ

## ದಶಮಾಂಶಪೂರ್ವಾರ್ಥೇ

## ದ್ವಾದಶೋಽಧ್ಯಾಯಃ

|| ಶ್ರೀ ಸ್ಕಂದ ಉವಾಚ ||

ಶೃಣು ಮಂಕಣಸಿದ್ಧಾರ್ಥಭಸ್ಮಸಿದ್ಧಮಹಾಮುನೇ ।
ಯೇನ ಚೀರ್ಣೇನ ವೇದಾಂತಜ್ಞಾನಂ ಸಮ್ಯಗ್ವಿಜಾಯತೇ ॥೧॥

ಶಿರೋವ್ರತಮಿದಂ ಶ್ರೌತಂ ಪುಣ್ಯಮಾಥರ್ವಣೋದಿತಂ ।
ತಸ್ಯೈವ ವಿಧಿಮಾಖ್ಯಾಸ್ಯೇ ಶೃಣು ತ್ವಂ ಸಾವಧಾನತಃ ॥೨॥

ಬಹೂನಾಂ ಜನ್ಮನಾಮಂತೇ ಶಿರೋವ್ರತವಿಧೌ ರತಿಃ ।
ಕಸ್ಯಚಿಜ್ಜಾಯತೇ ಪುಂಸಾಂ ನ ಸರ್ವಸ್ಯಾಪಿ ವೈ ಮುನೇ ॥೩॥

---

## ಹನ್ನೆರಡನೆಯ ಅಧ್ಯಾಯ

ಭಸ್ಮಸಿದ್ಧಿಯನ್ನೂ, ತಪಸ್ಸಿದ್ಧಿಯನ್ನೂ ಪಡೆದ ಮಹಾಮುನಿ ಮಂಕಣನಿಗೆ ಪರಶಿವನು ಈ ರೀತಿ ಶಿರೋವ್ರತಮಹಿಮೆಯನ್ನು ತಿಳಿಸಲಾರಂಭಿಸಿದನು. " ಮಂಕಣಮುನಿಯೇ, ಕೇಳು. ಈ ಶಿರೋವ್ರತಾನುಷ್ಠಾನದಿಂದ ಸಕಲ ವಿಧವಾದ ಜ್ಞಾನವೂ ಲಭಿಸುವುದು. ಅಥರ್ವಶೀರ್ಷೋಪನಿಷತ್ತಿನಲ್ಲಿ ಈ ವ್ರತವು ಬಹುವಾಗಿ ಉಪದಿಷ್ಟವಾಗಿದೆ. ಆದರ ವಿಧಿಯನ್ನು ನಿನಗೆ ಸಾವಧಾನವಾಗಿ ಈಗ ತಿಳಿಯಪಡಿಸುವೆನು. ॥೧-೨॥

ಅನೇಕ ಜನ್ಮಗಳನ್ನೆತ್ತಿ, ಆಯಾ ಜನ್ಮಗಳಲ್ಲಿ ಮಾಡಿದ ಸುಕೃತವಿಶೇಷದಿಂದ ಯಾವನೋ ಒಬ್ಬನಿಗೆ ಈ ವ್ರತಾನುಷ್ಠಾನದಲ್ಲಿ ಮನಸ್ಸು ಬರುವುದು.

ಯೇನ ದ್ವಿಜತ್ವಂ ಸಂಪ್ರಾಪ್ಯ ಬಹುಜನ್ಮಸು ಸತ್ತಮ ।
ಅಧೀತಾಶ್ಚತುರೋ ವೇದಾಃ ಸಾಂಗೋಪಾಂಗಪದಕ್ರಮಾಃ ॥೪॥

ತಸ್ಯೈವ ಜಾಯತೇ ಶ್ರದ್ಧಾ ಶಿರೋವ್ರತವಿಧೌ ಮುನೇ ।
ಯೇನ ಯಾಗಾಃ ಕೃತಾಃ ಸಮ್ಯಗೇಕಾಹಾಹೀನಸತ್ರಕಾಃ ॥೫॥

ಶಿವಪ್ರೀತ್ಯರ್ಥಮೇವಾಹ್ನಿ ಸ್ಯಾದ್ಬನ್ನಾ ಬಹುದಕ್ಷಿಣಾಃ ।
ತಸ್ಯೈವ ಜಾಯತೇ ಶ್ರದ್ಧಾ ಶಿರೋವ್ರತವಿಧೌ ಮುನೇ ॥೬॥

ಯೇನೋರ್ವರಾ ದ್ವಿಜೇ ದತ್ತಾ ದೇಶೇಕಾಲೇ ಚ ಪಾತ್ರಕೇ ।
ತಸ್ಯೈವ ಜಾಯತೇ ಶ್ರದ್ಧಾ ಶಿರೋವ್ರತವಿಧೌ ಮುನೇ ॥೭॥

ಯೇನ ಷೋಡಶದಾನಾನಿ ದತ್ತಾನಿ ವಿಧಿವನ್ಮುದಾ ।
ತಸ್ಯೈವ ಜಾಯತೇ ಶ್ರದ್ಧಾ ಶಿರೋವ್ರತವಿಧೌ ಮುನೇ ॥೮॥

ಗೃಹಾರಾಮ ಮಠೋದ್ಯಾನವಾಪೀಕೂಪತಟಾಕಕಂ
ಕೃತಂ ಸಮ್ಯಙ್ಮಮ ಪ್ರೀತ್ಯೈ ಅನ್ನಪಾನೀಯದಾನಕಂ ।
ತಸ್ಯೈವ ಜಾಯತೇ ಶ್ರದ್ಧಾ ಶಿರೋವ್ರತವಿಧೌ ಮುನೇ ॥೯॥

ಉಗ್ರಪ್ರೀತ್ಯರ್ಥಮೇವೇಹ ಅಗ್ರಹಾರಕರಃ ಪುಮಾನ್ ।
ಶಾಂಭವಾನಾಂ ಯತೀನಾಂ ಚ ತಥೈವ ಶಿವಯೋಗಿನಾಂ ॥೧೦॥

---

ಅಲ್ಲದೆ ಅನೇಕ ಜನ್ಮಗಳಲ್ಲಿ ವೇದವೇದಾಂಗಪಾರಗನಾದ ಬ್ರಾಹ್ಮಣನ ಜನ್ಮವನ್ನು ಪಡೆದವನಿಗೂ ಅನೇಕ ಯಜ್ಞಾಚರಣೆಗಳಿಂದ ಸುಕೃತವನ್ನು ಗಳಿಸಿದವನಿಗೂ ಈ ವ್ರತಾಚರಣೆಯಲ್ಲಿ ಮನಸ್ಸುಬರುವುದು. ॥೩-೪-೫॥

ಈಶ್ವರಪ್ರೀತಿಗಾಗಿ ಯಾರು ಜನ್ಮಾಂತರಗಳಲ್ಲಿ ಮೃಷ್ಟಾನ್ನ, ದಕ್ಷಿಣೆ, ಫಲವತ್ತಾದ ಭೂಮಿ, ಷೋಡಶಮಹಾದಾನಗಳು, ಮನೆ, ಉದ್ಯಾನ, ತೋಟ, ಮಠ, ಬಾವಿ, ಕೆರೆ ಇವುಗಳು, ಅನ್ನದಾನ, ಅರವಟ್ಟಿಗೆ, ಅಗ್ರಹಾರಗಳು ಇವೇ ಮೊದಲಾದ ವಸ್ತುಗಳನ್ನು, ಶಾಂಭವರು, ಯತಿಗಳು, ಶಿವಯೋಗಿಗಳು, ದ್ವಿಜರು ಇವರಿಗೆ ವಿಶೇಷವಾಗಿ ದಾನಮಾಡಿರುವರೋ ಅಂತಹವರಿಗೆ ಈ ಶಿರೋವ್ರತಾನುಷ್ಠಾನದಲ್ಲಿ ಬುದ್ಧಿಯುದಯಿಸುವುದು. ॥೬-೭-೮-೯-೧೦॥

ಮಠಂಮಠೋಪಕರಣಂ ದದ್ಯಾದ್ಯೋ ವಿಧಿವನ್ಮುನೇ ।
ತಸ್ಯೈವ ಜಾಯತೇ ಶ್ರದ್ಧಾ ಶಿರೋವ್ರತವಿಧೌ ಮುನೇ ॥೧೧॥

ಶಾಂಭವಾನನ್ನದಾನೈಶ್ಚ ಯಸ್ತೋಷಯತಿ ಸರ್ವಥಾ ।
ತಸ್ಯೈವ ಜಾಯತೇ ಶ್ರದ್ಧಾ ಶಿರೋವ್ರತವಿಧೌ ಮುನೇ ॥೧೨॥

ಶಾಂಭವಾನ್ ಪೂಜಯೇದ್ಯಸ್ತು ವಾಚಾ ವಾ ಪರಿಚರ್ಯಯಾ ।
ತಸ್ಯೈವ ಜಾಯತೇ ಶ್ರದ್ಧಾ ಶಿರೋವ್ರತವಿಧೌ ಮುನೇ ॥೧೩॥

ಶಿವಾಗಾರಪರೋ ಯಶ್ಚ ಶಿವೋತ್ಸವಕರಸ್ತಥಾ ।
ತಸ್ಯೈವ ಜಾಯತೇ ಶ್ರದ್ಧಾ ಶಿರೋವ್ರತವಿಧೌ ಮುನೇ ॥೧೪॥

ದೀಪಧೂಪಪರೋ ಯಸ್ತು ಸರ್ವದಾ ಯತತೇ ಮಮ ।
ತಸ್ಯೈವ ಜಾಯತೇ ಶ್ರದ್ಧಾ ಶಿರೋವ್ರತವಿಧೌ ಮುನೇ ॥೧೫॥

ಮತ್ಪ್ರಿಯಾಲೋಕಕೋ ಯಸ್ಸ್ಯಾತ್ ಪ್ರದೋಷೇಷು ವಿಶೇಷತಃ ।
ತಸ್ಯೈವ ಜಾಯತೇ ಶ್ರದ್ಧಾ ಶಿರೋವ್ರತವಿಧೌ ಮುನೇ ॥೧೬॥

ಮತ್ಪೂಜಾಪರಮೋ ಯಶ್ಚ ಬಿಲ್ವಪತ್ರಾದಿಸಾಧನೈಃ ।
ತಸ್ಯೈವ ಜಾಯತೇ ಶ್ರದ್ಧಾ ಶಿರೋವ್ರತವಿಧೌ ಮುನೇ ॥೧೭॥

ಅಷ್ಟಮ್ಯಾಂ ಸೋಮವಾರೇ ಚ ಚತುರ್ದಶ್ಯಾಂ ತಥಾ ಮುನೇ ।
ತಸ್ಯೈವ ಜಾಯತೇ ಶ್ರದ್ಧಾ ಶಿರೋವ್ರತವಿಧೌ ಮುನೇ ॥೧೮॥

---

ಮಠ, ಮತ್ತು ಮಠಕ್ಕೆ ಬೇಕಾದ ಸಾಮಗ್ರಿಗಳು, ಶಾಂಭವರಿಗೆ ಅನ್ನದಾನ, ಶಾಂಭವರ ಅರ್ಚನೆ, ಶಾಂಭವಪ್ರೀತಿಕರವಾದ ಮಾತು, ಶಿವಾಲಯ ಮತ್ತು ಶಿವೋತ್ಸವಗಳನ್ನು ನಡೆಸುವಿಕೆ, ದೀಪ; ಧೂಪ, ನೈವೇದ್ಯಾದಿಗಳನ್ನು ಶಿವಲಿಂಗಕ್ಕೆ ಅರ್ಪಿಸುವುದು. ಪ್ರದೋಷಕಾಲದಲ್ಲಿ ಪಾರ್ವತೀಪರಶಿವರ ವಿಗ್ರಹಗಳನ್ನು ದರ್ಶನ ಮಾಡುವುದು, ಬಿಲ್ವಪತ್ರೆಯೇ ಮೊದಲಾದ ಪೂಜಾಸಾಮಗ್ರಿಗಳಿಂದ ಶಂಕರನನ್ನು ಪೂಜಿಸುವುದು, ಅಷ್ಟಮೀ, ಸೋಮವಾರ, ಚತುರ್ದಶೀ, ಮುಂತಾದ ತಿಥಿಗಳಲ್ಲಿ ಶಿವಾರ್ಚನೆಮಾಡುವುದು, ಅವಿಮುಕ್ತಕ್ಷೇತ್ರವೆನಿಸಿದ ಕಾಶಿಯಲ್ಲಿ ದೃಢಭಕ್ತಿಯಿಡುವುದು, ಮಣಿಕರ್ಣಿಕಾಕ್ಷೇತ್ರದಲ್ಲಿ ಸ್ನಾನಮಾಡಿ ವಿಶ್ವೇಶ್ವರ ಲಿಂಗವನ್ನು ದರ್ಶನ

ಅವಿಮುಕ್ತೇ ತಥಾ ತೀವ್ರಾ ಭಕ್ತಿರ್ವಿಪ್ರಗರೀಯಸೀ ।
ತಸ್ಯೈವ ಜಾಯತೇ ಶ್ರದ್ಧಾ ಶಿರೋವ್ರತವಿಧೌ ಮುನೇ ॥೧೯॥

ಮಯಿ ವಿಶ್ವೇಶ್ವರೇ ಶಂಭೌ ಮಣಿಕರ್ಣ್ಯಾಂ ತಥಾ ಮುನೇ ।
ತಸ್ಯೈವ ಜಾಯತೇ ಶ್ರದ್ಧಾ ಶಿರೋವ್ರತವಿಧೌ ಮುನೇ ॥೨೦॥

ಕ್ಷೇತ್ರೇಷ್ವನ್ಯೇಷು ನಿಯತಂ ಯೋ ವಸೇನ್ಮಮ ಸರ್ವದಾ ।
ತಸ್ಯೈವ ಜಾಯತೇ ಶ್ರದ್ಧಾ ಶಿರೋವ್ರತವಿಧೌ ಮುನೇ ॥೨೧॥

ಕುರುಕ್ಷೇತ್ರೇ ಪ್ರಭಾಸೇ ಚ ಗಂಗಾಸಾಗರಸಂಗಮೇ ।
ತಸ್ಯೈವ ಜಾಯತೇ ಶ್ರದ್ಧಾ ಶಿರೋವ್ರತವಿಧೌ ಮುನೇ ॥೨೨॥

ಬದರ್ಯಾಂ ಚ ವಿಶಾಲಾಯಾಂ ಪಿಂಡಾರೇ ವಿರಜೇ ತಥಾ ।
ತಸ್ಯೈವ ಜಾಯತೇ ಶ್ರದ್ಧಾ ಶಿರೋವ್ರತವಿಧೌ ಮುನೇ ॥೨೩॥

ರುದ್ರಕೋಟೌ ನರ್ಮದಾಯಾಮೋಂಕಾರೇ ಭೃಗುತುಂಡಕೇ ।
ತಸ್ಯೈವ ಜಾಯತೇ ಶ್ರದ್ಧಾ ಶಿರೋವ್ರತವಿಧೌ ಮುನೇ ॥೨೪॥

ಕೇದಾರೇ ಚ ಮಹಾಕಾಲೇ ಗಯಾಯಾಂ ಚ ಪ್ರಯಾಗಕೇ ।
ತಸ್ಯೈವ ಜಾಯತೇ ಶ್ರದ್ಧಾ ಶಿರೋವ್ರತವಿಧೌ ಮುನೇ ॥೨೫॥

ತ್ರ್ಯಂಬಕೇ ಚ ಪ್ರತಿಷ್ಠಾನೇ ಮುನೇ ಚಾಮರಕಂಟಕೇ ।
ತಸ್ಯೈವ ಜಾಯತೇ ಶ್ರದ್ಧಾ ಶಿರೋವ್ರತವಿಧೌ ಮುನೇ ॥೨೬॥

---

ಮಾಡುವುದು, ಇಂತಹ ಪುಣ್ಯಕರವಾದ ಕಾರ್ಯಗಳನ್ನು ನಡೆಸುವುದರಿಂದ ಶಿರೋವ್ರ. ತಾಚರಣೆಯಲ್ಲಿ ಮನಸ್ಸುಂಟಾಗುವುದು. ಇಂತಹವರಿಗೇ ಶ್ರದ್ಧಾಭಕ್ತಿಗಳು ಈ ವ್ರತದಲ್ಲಿ ಉದಯಿಸುವುವು. ॥೧೧-೧೨-೧೩-೧೪-೧೫-೧೬-೧೭-೧೮-೧೯-೨೦॥

ಕುರುಕ್ಷೇತ್ರ, ಪ್ರಭಾಸಕ್ಷೇತ್ರ, ಗಂಗಾಸಾಗರಸಂಗಮ, ಬದರೀ, ವಿಶಾಲ, ಪಿಂಡಾರ, ವಿರಜ, ರುದ್ರಕೋಟಿ, ನರ್ಮದಾ- ಓಂಕಾರಕ್ಷೇತ್ರ, ಭೃಗುತುಂಡಕ, ಕೇದಾರ, ಮಹಾಕಾಲ, ಗಯಾ, ಪ್ರಯಾಗ, ತ್ರ್ಯಂಬಕ, ಪ್ರತಿಷ್ಠಾನ, ಅಮರ ಕಂಟಕ, ಪುಷ್ಕರ, ವೇಣುವನ, ಶ್ರೀಶೈಲ, ಕೋಟಜಪುರ, ಹರಿದ್ವಾರ, ಜ್ವಾಲಾ

ಪುಷ್ಕರೇ ವೇಣುವಿಪಿನೇ ಶ್ರೀಶೈಲೇ ಕೋಟಜೇ ಪುರೇ ।
ತಸ್ಯೈವ ಜಾಯತೇ ಶ್ರದ್ಧಾ ಶಿರೋವ್ರತವಿಧೌ ಮುನೇ ॥೨೭॥

ಪ್ರತಿಸ್ಥಾನೇ ಹರಿದ್ವಾರೇ ಜ್ವಾಲಾವಕ್ತ್ರೇ ಚ ಯೋ ವಸೇತ್ ।
ತಸ್ಯೈವ ಜಾಯತೇ ಶ್ರದ್ಧಾ ಶಿರೋವ್ರತವಿಧೌ ಮುನೇ ॥೨೮॥

ಮಥುರಾಯಾಮಯೋಧ್ಯಾಯಾಂ ಮಾಯಾಯಾಮವಿಮುಕ್ತಕೇ ।
ತಸ್ಯೈವ ಜಾಯತೇ ಶ್ರದ್ಧಾ ಶಿರೋವ್ರತವಿಧೌ ಮುನೇ ॥೨೯॥

ಅವಂತ್ಯಾಯಾಂ ತಥಾ ಕಾಂಚ್ಯಾಂ ದ್ವಾರವತ್ಯಾಂ ಚ ಯೋ ವಸೇತ್ ।
ತಸ್ಯೈವ ಜಾಯತೇ ಶ್ರದ್ಧಾ ಶಿರೋವ್ರತವಿಧೌ ಮುನೇ ॥೩೦॥

ನೈಮಿಷೇ ಭಾರತೇ ವರ್ಷೇ ವಸೇದಾದೇಹವರ್ಜನಂ ।
ತಸ್ಯೈವ ಜಾಯತೇ ಶ್ರದ್ಧಾ ಶಿರೋವ್ರತವಿಧೌ ಮುನೇ ॥೩೧॥

ದಕ್ಷಿಣಸ್ಯಾಮಪಿ ದಿಶಿ ಮಮ ಕ್ಷೇತ್ರಾಣಿ ಭೂರಿಶಃ ।
ತೇಷು ಸ್ಥಾನೇಷು ನಿಯತಂ ವಸತೋಽಸ್ಯ ರುಚಿರ್ಭವೇತ್ ॥೩೨॥

ಸಹ್ಯಾಪಗಾತಟೇ ಪುಣ್ಯೇ ಶಿತಿಕಂಠೇ ವಸನ್ಮುನೇ ।
ತಸ್ಯೈವ ಜಾಯತೇ ಶ್ರದ್ಧಾ ಶಿರೋವ್ರತವಿಧೌ ಮುನೇ ॥೩೩॥

ತೃಣಜ್ಯೋತೌ ಗಜಾರಣ್ಯೇ ಧೃತಸ್ಥಾನೇ ದ್ರುತೀಶ್ವರೇ ।
ತಸ್ಯೈವ ಜಾಯತೇ ಶ್ರದ್ಧಾ ಶಿರೋವ್ರತವಿಧೌ ಮುನೇ ॥೩೪॥

ಅರುಣಾದ್ರೌ ಚ ವೃದ್ಧಾದ್ರೌ ಅಭ್ರಗೋಷ್ಠ್ಯಾಂ ಶ್ವಗೋನಗೇ ।
ತಸ್ಯೈವ ಜಾಯತೇ ಶ್ರದ್ಧಾ ಶಿರೋವ್ರತವಿಧೌ ಮುನೇ ॥೩೫॥

---

ವಕ್ತ್ರ, ಮಥುರಾ, ಅಯೋಧ್ಯಾ, ಮಾಯಾ, ಕಾಶೀ, ಅವಂತೀ, ಕಾಂಚೀ, ದ್ವಾರವತೀ, ನೈಮಿಷ, ಭರತವರ್ಷ ಮುಂತಾದ ಉತ್ತರ ದೇಶದ ಶಿವಕ್ಷೇತ್ರಗಳಲ್ಲಿಯೂ, ಸಹ್ಯಾದ್ರಿಯಲ್ಲಿ ಹುಟ್ಟುವ ನದೀತೀರದಲ್ಲಿಯೂ, ಶಿತಿಕಂಠಕ್ಷೇತ್ರ, ತೃಣಜ್ಯೋತಿ, ಗಜಾರಣ್ಯ, ಧೃತಸ್ಥಾನ, ದ್ರುತೀಶ್ವರ, ಅರುಣಾಚಲ, ವೃದ್ಧಾಚಲ, ಅಭ್ರಗೋಷ್ಠೀ, ಶ್ವಗೋನಕಕ್ಷೇತ್ರ (?) ಕಾಲಹಸ್ತಿ, ಪಂಚನದಕ್ಷೇತ್ರ, ಕುಂಭಕೋಣ, ಅರ್ಜುನ, ಶ್ವೇತಾರಣ್ಯ, ಮಾಯೂರಕಕ್ಷೇತ್ರ, ಛಾಯಾವನ, ಬಿಲ್ವವನ, ತೇಜಿನೀವನ, ವೇದಾರಣ್ಯ, ಕಮಲ

ಕಾಲಹಸ್ತಿಗಿರೌ ಪುಣ್ಯೇ ವಸತೋ ಮಮ ವೈ ಮುನೇ ।
ತಸ್ಯೈವ ಜಾಯತೇ ಶ್ರದ್ಧಾ ಶಿರೋವ್ರತವಿಧೌ ಮುನೇ ॥೩೬॥

ಮುನೇ ಪಂಚನದೇ ಪುಣ್ಯೇ ಕುಂಭಕೋಣೇರ್ಜುನೇ ತಥಾ ।
ತಸ್ಯೈವ ಜಾಯತೇ ಶ್ರದ್ಧಾ ಶಿರೋವ್ರತವಿಧೌ ಮುನೇ ॥೩೭॥

ಶ್ವೇತಕಾಂತಾರಕೇವಾಪಿ ತಥಾ ಮಾಯೂರಕೇ ಮುನೇ ।
ತಸ್ಯೈವ ಜಾಯತೇ ಶ್ರದ್ಧಾ ಶಿರೋವ್ರತವಿಧೌ ಮುನೇ ॥೩೮॥

ಛಾಯಾವನೇ ಬಿಲ್ವವನೇ ತೇಜಿನೀ ವಿಪಿನೇ ಮುನೇ ।
ತಸ್ಯೈವ ಜಾಯತೇ ಶ್ರದ್ಧಾ ಶಿರೋವ್ರತವಿಧೌ ಮುನೇ ॥೩೯॥

ವೇದಾರಣ್ಯೇಬ್ಜಸದನೇ ಹಾಲಾಸ್ಯೇ ಗಂಧಮಾದನೇ ।
ತಸ್ಯೈವ ಜಾಯತೇ ಶ್ರದ್ಧಾ ಶಿರೋವ್ರತವಿಧೌ ಮುನೇ ॥೪೦॥

ವಸತಃ ಕ್ಷೇತ್ರವರ್ಯೇಷು ತತ್ರಾನ್ಯತ್ರೋದಿತೇಷು ಚ ।
ತಸ್ಯೈವ ಜಾಯತೇ ಶ್ರದ್ಧಾ ಶಿರೋವ್ರತವಿಧೌ ಮುನೇ ॥೪೧॥

ಸರ್ವಕ್ಷೇತ್ರೇಷು ವಸತೋ ವಿಮುಕ್ತಿದಮಿದಂ ಮಮ ।
ಅವಿಮುಕ್ತಂ ನ ಮುಕ್ತಂ ಮೇ ಯತೋತೀವ ಸುದುರ್ಲಭಂ ॥೪೨॥

ತತ್ರೈವಾಮರಣಂ ಜಂತುರ್ವಸನ್ಮುಕ್ತಿಂ ಪರಾಂ ವ್ರಜೇತ್ ।
ಸರ್ವಕ್ಷೇತ್ರನಿವಾಸಸ್ಯ ಫಲಮಂತೇ ವಿಮುಕ್ತಿಕಂ ॥೪೩॥

---

ವನ, ಹಾಲಾಸ್ಯ, ಗಂಧಮಾದನ ಮುಂತಾದ ದಕ್ಷಿಣ ಶಿವಕ್ಷೇತ್ರಗಳಲ್ಲಿಯೂ ಯಾರು ದೇಹಾಂತ್ಯದ ವರೆಗೂ ನೆಲಸಿ ಶಿವಾರಾಧನೆಮಾಡುವರೋ, ಅಂತಹವರಿಗೆ ಮಾತ್ರ ಶಿರೋವ್ರತಾನುಷ್ಠಾನದಲ್ಲಿ ಶ್ರದ್ಧೆಯುಂಟಾಗುವುದು. ॥೨೧-೨೨-೨೩-೨೪-೨೫-೨೬-೨೭-೨೭-೨೮-೨೯-೩೦-೩೧-೩೨-೩೩-೩೪-೩೫-೩೬-೩೭-೩೮-೩೯-೪೦॥

ಮೇಲೆ ಹೇಳಿದ ಕ್ಷೇತ್ರಗಳಲ್ಲಾಗಲಿ, ಇತರ ಶಿವಕ್ಷೇತ್ರಗಳಲ್ಲಾಗಲಿ, ವಾಸ ಮಾಡುವವರಿಗೆ ಆ ಶಿರೋವ್ರತವಿಧಿಯಲ್ಲಿ ಆಸಕ್ತಿ ಹುಟ್ಟುವುದು. ಎಲ್ಲಾ ಕ್ಷೇತ್ರಗಳಲ್ಲಿಯೂ ವಾಸಮಾಡುವುದರಿಂದ ಮೋಕ್ಷವು ಲಭಿಸುವುದಾದರೂ, ಶಿರೋವ್ರತಾನುಷ್ಠಾನದಿಂದ ಕಾಶೀಕ್ಷೇತ್ರದ ಫಲವೆನಿಸಿದ ಮುಕ್ತಿಯೇ ಲಭಿಸುವುದು. ಕಾಶೀಕ್ಷೇತ್ರ

ಸೇವತಸ್ತಾರಕಂ ಮಂತ್ರಂ ತಾರಂ ಶಾಂಭವಸತ್ತಮೇ ।
ದದಾಮೀತಿ ಪ್ರತಿಜ್ಞಾಂ ತು ಮಯಾ ಪೂರ್ವಂ ಮುನೀಶ್ವರ ॥೪೪॥

ಯದಿ ತತ್ರ ವ್ರತಂ ಪುಣ್ಯಂ ಶಿರೋವ್ರತಮಿದಂ ಮುನೇ ।
ಕೃತ್ವಾ ಯುತೈರ್ಜನ್ಮಶತಂ ಪಾಪಾನ್ಮುಕ್ತೋ ನ ಸಂಶಯಃ ॥೪೫॥

॥ ಮಂಕಣ ಉವಾಚ ॥

ಕಥಂ ತದ್ವ್ರತಮಾಖ್ಯಾಹಿ ಯೇನ ಚೀರ್ಣೇನ ಶಂಕರ ।
ತವ ಜ್ಞಾನೋದಯಶ್ಶಂಭೋ ಪಶುಪಾಶಚ್ಛಿದೋ ಭವೇತ್ ॥೪೬॥

ಅವಿಮುಕ್ತೇ ಕರಿಷ್ಯಾಮಿ ವ್ರತಂ ತೇ ಕರುಣಾನಿಧೇ ॥೪೭॥

ವಿಧೇ ಹಿ ಕರುಣಾಂ ವಿಭೋ ತವ ವಿಧೇಹಿ ಪಾದಾಂಬುಜಂ
ಮುದೇ ಹಿ ಮಮ ಸಾಂಪ್ರತಂ ಹೃದಿ ಭವಾದ್ಯಪಾದೇರತಂ ।
ಅವೇಹಿ ಶರಣಾಗತಂ ಭವದವಾಬ್ಧಿಮಧ್ಯಂ ಗತಂ
ಪ್ರಸಾದಸುಮುಖಾಗತಂ ವದ ಮುದೇ ಹಿತಾಯಾಧುನಾ ॥೪೮॥

---

ದಲ್ಲಿ ವಾಸಮಾಡುವುದರಿಂದ ಯಾವ ಜಂತುವಾದರೂ ಮುಕ್ತಿಯನ್ನು ಹೊಂದು ವುದು. ಒಟ್ಟಿನಲ್ಲಿ ಶಿವಕ್ಷೇತ್ರವಾಸಕ್ಕೆ ಫಲವೆಂದರೆ ಮುಕ್ತಿಯೇ. ॥೪೧-೪೨-೪೩॥

ಅವಿಮುಕ್ತಕ್ಷೇತ್ರವೆನಿಸಿದ ಕಾಶೀಕ್ಷೇತ್ರದಲ್ಲಿ ಮೃತನಾದವನಿಗೆ ತಾರಕ ಮಂತ್ರೋಪದೇಶವನ್ನು ಮಾಡುತ್ತೇನೆಂದು ನಾನು ಪ್ರತಿಜ್ಞೆಮಾಡಿರುತ್ತೇನೆ. ಶಿರೋ ವ್ರತವನ್ನು ಅಲ್ಲಿ ಆಚರಿಸಿದವರು ಅನೇಕ ಜನ್ಮಗಳಲ್ಲಿ ಪಾಪವನ್ನು ಗಳಿಸಿದ್ದರೂ, ಅದರಿಂದ ಅವರು ಮುಕ್ತರಾಗುವರು. ಇದರಲ್ಲಿ ಸಂಶಯವಿಲ್ಲ. ॥೪೪-೪೫॥

ಹೀಗೆ ಹೇಳಿದ ಮಾತನ್ನು ಕೇಳಿ ಮಂಕಣಮುನಿಯು ಪರಶಿವನನ್ನು ಕುರಿತು, " ಮಹಾದೇವನೇ, ಇಲ್ಲಿನ ವರೆಗೂ ಹೊಗಳಿದ ಆ ಶಿರೋವ್ರತವಿಧಿಯನ್ನು ವಿವರಿಸಿ ಹೇಳು. ನಿನ್ನ ವಿಷಯಕವಾದ ಜ್ಞಾನವು ನನಗೆ ಉದಯವಾದರೆ, ಪಶು ಸಂಬಂಧಿಯಾಗುವ ಪಾಶವೆಲ್ಲವೂ ನಾಶವಾಗುವುದು. ನಿನ್ನಿಂದ ತಿಳಿದುಬರುವ ಶಿರೋವ್ರತವನ್ನು ನಾನು ಅವಿಮುಕ್ತಕ್ಷೇತ್ರವೆನಿಸಿದ ಕಾಶಿಯಲ್ಲಿ ವಿಧಿವತ್ತಾಗಿ ನಡೆಸುವೆನು. ॥೪೬-೪೭॥

ದಯಾಶಾಲಿಯೇ, ಸರ್ವವ್ಯಾಪಿಯೇ, ನಿನ್ನ ಪಾದಕಮಲವನ್ನು ಸೇವೆಗಾಗಿ

ಶ್ರುತಿಸೂಕ್ತಿನಿಷಕ್ತಿವೃತ್ತಿಸಕ್ತೇ
ರ್ಭವಭಕ್ತೇಃ ಕಿಲ ಕಾರಣಂ ಮಹೇಶಯುಕ್ತಿಃ ।
ಸಮುವಕ್ತಿ ಪ್ರಥಮಮನೋನುರಕ್ತಿ
ಸ್ತವ ಮುಕ್ತಿಃ ಪರಮಾ ಭವೇ ವ್ಯಸಕ್ತಿ ॥೪೯॥

॥ ಸೂತ ಉವಾಚ ॥

ಸ ತದಾ ಫಣಿಕಂಕಣೋಥ ಮಂಕಣಂ
ಅನುಗೃಹ್ಯಾಹ ವಿಭೂತಿವಿಭೂಷಣಂ ।
ಶರಣಂ ಕರಣಂ ಮುದಾ ತದೇಶೋ
ಚರಣಂ ತನ್ನಖಚಂದ್ರಭೂಷಣಂ ॥೫೦॥

---

ನನಗೆ ದಯಪಾಲಿಸು. ಏಕೆಂದರೆ ನಾನು ಸದಾ ನಿನ್ನ ಪಾದದ್ವಂದ್ವವನ್ನು ಹೃದಯ ಕುಹರದಲ್ಲಿ ಧ್ಯಾನಿಸುತ್ತಿರುವೆನು. ॥೪೮॥

ದಯಾಶಾಲಿಯೇ, ಸರ್ವವ್ಯಾಪಿಯೇ, ನಿನ್ನ ಪಾದಕಮಲವನ್ನು ಸೇವೆಗಾಗಿ ನನಗೆ ದಯಪಾಲಿಸು. ಏಕೆಂದರೆ ನಾನು ಸದಾ ನಿನ್ನ ಪಾದದ್ವಂದ್ವವನ್ನು ಹೃದಯ ಕುಹರದಲ್ಲಿ ಧ್ಯಾನಿಸುತ್ತಿರುವೆನು. ಸಂಸಾರಸಾಗರ ಮಧ್ಯದಲ್ಲಿ ಬಿದ್ದಿದ್ದ ನಾನು ನಿನ್ನ ಶರಣಾಗತನಾಗಿ ಬಂದಿದ್ದೇನೆ. ಪ್ರಸಾದಾಪೇಕ್ಷಿಯಾಗಿ ಬಂದಿರುವ ನನಗೆ ಸಂತೋಷ ವನ್ನುಂಟುಮಾಡು. ॥೪೮॥

ವೇದವೇದಾಂತಗಳಲ್ಲಿ ಪ್ರತಿಪಾದ್ಯಮಾನವಾದ ಈಶ್ವರ ಭಕ್ತಿಗೆ ಮಹೇಶ್ವರನ ಸಾಯುಜ್ಯಪ್ರಾಪ್ತಿಯೇ ಮುಖ್ಯ ಕಾರಣವಲ್ಲವೆ! ನಿನ್ನಲ್ಲಿಡುವ ಭಕ್ತರಾದ ನಮ್ಮ ಪ್ರಥಮ ಮನೋನುರಾಗವೇ ಶಾಶ್ವತವಾದ ಮುಕ್ತಿಗೆ ಕಾರಣವಾಗುವುದರಲ್ಲಿ ಸಂಶಯವಿಲ್ಲ. ॥೪೯॥

ಹೀಗೆ ಮಂಕಣಮುನಿಯು ಶಿವಪಾದವನ್ನು ಪ್ರಾರ್ಥಿಸಲು ಸರ್ವಭೂಷಣ ನೆನಿಸಿದ ಶಂಕರನು, ಭೂತಿಭೂಷಣನೂ, ಶರಣಾಗತನೂ ಆದ ಮಂಕಣಮುನಿಗೆ, ಅರ್ಧಚಂದ್ರನಂತೆ ಅಲಂಕೃತವಾದ ಉಗುರುಗಳುಳ್ಳ ತನ್ನ ಪಾದವನ್ನು ಅನುಗ್ರಹಿಸಿ ದನು. ಮತ್ತೂ ಹೀಗೆಂದನು. ॥೫೦॥

॥ ಈಶ್ವರ ಉವಾಚ ॥

ತವಾದೇಯಂ ಮೇಯಂ ನಹಿ ಮಮ ಮುನೇತ್ರಾಸ್ತಿನಿಶದಾ
ಶಯೇ ಶಕ್ತೇ ಜಾನೇ ಭವ ಭುವನಮಾಯಾವಿರಹಿತಃ ।
ತ್ವಯಾ ಸರ್ವೇ ಧನ್ಯಾ ಮಮ ಹೃದಯಮಾನ್ಯಾ ಮುನಿಗಣಾ
ಸದಾವನ್ಯಾ ಸನ್ಯಾಸಿನ ಅಪಿ ನ್ಯೂನರಹಿತಾಃ ॥೫೧॥

ವ್ರತಂ ಕೃತ್ವಾ ತೀರ್ತ್ವಾ ಭವಜಲಧಿಮೋಹಾಂಧತಮಸಂ
ಮುನೇ ನತ್ವಾ ಸ್ತುತ್ವಾ ಮಮ ವರಪದಾಬ್ಜಂ ದೃಢತರಂ ।
ಅಹೋಕೀರ್ಣಾಸ್ತೂರ್ಣಂ ಯದಿ ಭವ ನಿಗೀರ್ಣಾಪಿ ಮುನಯೋ
ವ್ರತಂ ಚೀರ್ಣಂ ಯೈಸ್ತೈರ್ಮುನಿವರಸುಪೂರ್ಣಾ ಮಯಿ ಶಿವೇ ॥೫೨॥

ಅಪರ್ಣಾದೃಷ್ಟ್ಯಾಕ್ಯಂ ತೇ ಪ್ರತಿಭವಜದೋಷೋರ್ಣಜನಿತಂ ।
ಭಯಂ ಪ್ರಚ್ಛಿದ್ಯೇತೇ ಹೃದಿ ವಿಹಿತತೂರ್ಣಂ ಪ್ರತಿನಿಭಂ ॥೫೩॥

---

ಅಯ್ಯಾ ಮುನಿಯೇ, ನಿನಗೆ ಕೊಡಬಾರದ ವರವೇ ಇಲ್ಲ. ನಿನ್ನ ಮನಸ್ಸು ಬಹು ನಿರ್ಮಲವಾದುದು. ಮಾಯೆ (ಅಜ್ಞಾನ) ಗೆ ಆಶ್ರಯ ಕೊಡದವನು ನೀನು. ನಿನ್ನಿಂದ ಈ ವನದಲ್ಲಿರುವ ಸಂನ್ಯಾಸಿಗಳೂ, ಮುನಿಗಳೂ ಧನ್ಯರಾದರು. ಇವರಲ್ಲಿದ್ದ ಸಕಲ ದೋಷಗಳೂ ಈಗ ನಿನ್ನಿಂದ ನಿವಾರಣೆಯಾದುವು. ॥೫೧॥

ಈ ವ್ರತವನ್ನು ಆಚರಿಸಿದವರು ಸಂಸಾರಸಾಗರವೆಂಬ ಅಜ್ಞಾನಮಯವಾದ ಕತ್ತಲೆಯಿಂದ ಪಾರಾಗಬಹುದು. ಹಾಗೆಯೇ ನನ್ನ ಶಾಶ್ವತವಾದ ಪದಕಮಲವನ್ನು ಪೂಜಿಸಿ ಸ್ತುತಿಸಬಹುದು. ಸಂಸಾರದಲ್ಲಿ ಮುಳುಗಿ ಹೋಗಿರುವ ಮುನಿಜನರೂ ಸಹ ಈ ವ್ರತಾಚರಣೆಯಿಂದ ಸಂಸಾರದುಃಖದಿಂದ ಪಾರಾಗಬಹುದು. ಒಟ್ಟಿನಲ್ಲಿ ಈ ವ್ರತಾಚರಣೆ ಮಾಡುವವರಲ್ಲಿ ನನಗೆ ಅಸದೃಶವಾದ ಪ್ರೀತಿಯಿರುವುದು. ॥೫೨॥

ಎಲೌ ಪಾರ್ವತಿಯೇ, ಈ ಶಿರೋವ್ರತಮಾಡಿದವನು ನಿನ್ನ ಕೃಪಾದೃಷ್ಟಿಗೆ ವಿಷಯನಾಗಿದ್ದು, ಅನೇಕ ಜನ್ಮಾಂತರಗಳಿಂದ ಸಂಪಾದಿತವಾದ ಪಾಪಭಯವನ್ನು ಕಳೆದುಕೊಂಡು ಸುಖದಿಂದಿರುವನು. ಮತ್ತು ಆತನು ಸದ್ಯೋಜಾತಾದಿ ಪಂಚ ಬ್ರಹ್ಮಾನುವಾಕದಿಂದ ತನ್ನ ಶರೀರಕ್ಕೆಲ್ಲಾ ಭಸ್ಮಲೇಪನ ಮಾಡಿಕೊಂಡು, ಸಂಸಾರ

ಪಂಚಬ್ರಹ್ಮಮನುಪ್ರಭಾವಭಸಿತಂ ಸಿಂಚನ್ನಿಜಾಂಗೇ ಸದಾ ।
ಮುಂಚೇದೇವ ಹಿ ಪಾತಕಂ ಸ ಗಿರಿಜೇ ಕಿಂಚಿತ್ತ್ವಯಾ ಸಂಸ್ಕೃತೇಃ ।
ಅಂಚನ್ ಫಾಲತಲೇ ತ್ರಿಪುಂಡ್ರಮಥವೈ ಸಂಕೋಚಭಾವೋಜ್ಝಿತಂ ।
ತಂ ಚಾಪ್ಯನ್ನಹಮೇಕಮಂಚಕಗತಂ ಕುರ್ವೇಹಮತ್ಯಾದರಾತ್    ॥೫೪॥

ಇತಿ ಶ್ರೀಶಿವರಹಸ್ಯೇ ಈಶ್ವರಾಖ್ಯೇ ದಶಮಾಂಶೇ ಶಿರೋವ್ರತವಿಧೌ
ಶ್ರದ್ಧೋತ್ಪತ್ತಿಕಾರಣ ನಿರೂಪಣಂ ನಾಮ ದ್ವಾದಶೋಧ್ಯಾಯಃ

---

ಪಾಶಸಂಬಂಧವಾದ ದುಃಖದಿಂದ ಬಿಡುಗಡೆ ಹೊಂದುವನು. ಮತ್ತು ಹಾಗೆ ತದೇಕ ಧ್ಯಾನದಿಂದ ಭಸ್ಮತ್ರಿಪುಂಡ್ರಧಾರಣೆಮಾಡಿಕೊಳ್ಳುವ ಮಹಾಭಕ್ತನಿಗೆ ನಾನು ನನ್ನ ಅರ್ಧಾಸನವನ್ನು ಕೊಟ್ಟು ಗೌರವಿಸುವೆನು" ಎಂದು ಶಂಕರನು ಮುಂಕಣನೆದುರಿಗೆ ಪಾರ್ವತಿಯೊಡನೆ ಮಾತನಾಡಿದನೆಂದು ಕುಮಾರಸ್ವಾಮಿಯು ಜೈಗೀಷವ್ಯನಿಗೆ ಹೇಳಿದನು. ॥೫೩-೫೪॥

ಇಲ್ಲಿಗೆ ಶ್ರೀಶಿವರಹಸ್ಯದ ಹತ್ತನೆಯ ಅಂಶದಲ್ಲಿ ಶಿರೋವ್ರತಾನುಷ್ಠಾನಕ್ಕೆ ಶ್ರದ್ಧೆ ಹೊಂದಿರುವವರ ವಿಷಯವನ್ನು ತಿಳಿಸುವ ಹನ್ನೆರಡನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ಶ್ರೀ ಶಿವಾಯನಮಃ ॥

# ಅಥ ಶ್ರೀ ಶಿವರಹಸ್ಯೇ

ಈಶಾನಾಖ್ಯೇ

ದಶಮಾಂಶೇ ಪೂರ್ವಾರ್ಧೇ

## ತ್ರಯೋದಶೋಽಧ್ಯಾಯಃ

॥ ಈಶ್ವರ ಉವಾಚ ॥

ಶಿರೋವ್ರತವಿಧಾನಸ್ಯ ಕಾಲದೇಶಾನುಸಿದ್ಧಿದಂ ।
ಕಥಯಿಷ್ಯೇ ಸಮಾಸೇನ ಶಿಷ್ಯಭೂತಸ್ಯ ವೈ ಮುನೇ ॥೧॥

ವಿಶಿಷ್ಯ ಮಮ ಭಕ್ತಸ್ಯ ಗೋಪ್ಯಂ ನ ಮಮ ವಿದ್ಯತೇ ।
ಯಸ್ಯ ಮೇಽನುಗ್ರಹೋ ನಿತ್ಯಂ ತಸ್ಯ ವ್ರತವಿಧೌ ಮುನೇ ॥೨॥

ಭವಿಷ್ಯತಿ ಪುರಾ ಬುದ್ಧಿಃ ಪಶುಪಾಶವಿಮುಕ್ತಯೇ ।
ಯಂ ಮೋಚಯಾಮಿ ಭಗವನ್ ತಸ್ಯೈಷಾ ಮತಿರುದ್ಭವೇತ್ ॥೩॥

---

## ಹದಿಮೂರನೆಯ ಅಧ್ಯಾಯ

ಮಂಕಣಮುನಿಯೇ, ಶಿರೋವ್ರತವಿಧಾನವನ್ನೂ, ಅದನ್ನು ನಡೆಸುವ ಕಾಲ, ದೇಶ ಇವುಗಳ ವಿಷಯವನ್ನೂ ಈಗ ತಿಳಿಸುವೆನು. ಭಕ್ತನಿಗೆ ಮರೆಮಾಜುವ ವಿಷಯವು ನನ್ನಲ್ಲಿರುವುದಿಲ್ಲ. ಈ ವ್ರತವಿಧಿಯಲ್ಲಿ ಆಸಕ್ತಿವಹಿಸಿರುವವರಿಗೆ ನನ್ನ ಸಂಪೂರ್ಣಾನುಗ್ರಹವು ಲಭಿಸುವುದು. ॥೧-೨॥

ಆಗ ಆ ಭಕ್ತನಿಗೆ ಪಶುಗಳಿಗೆ ಸಂಭವಿಸುವ ಪಾಶವಿಮೋಚನೆಯಲ್ಲಿ ಬುದ್ಧಿಯುದಯಿಸುವುದು. ಅದನ್ನು ತಿಳಿದು ನಾನು ಅವರ ಪಾಪರಾಶಿಯನ್ನು ಪರಿಹರಿಸುವೆನು. ಅನೇಕ ಜನ್ಮಗಳಲ್ಲಿ ನಾನಾಯೋನಿಗಳಲ್ಲಿ ಹುಟ್ಟಿ ಪುಣ್ಯವನ್ನಾರ್ಜಿಸಿದವರಿಗೆ

ಬಹುಜನ್ಮಸು ವಿಪ್ರೇಂದ್ರ ಭ್ರಾಂತಸ್ಯ ಪುರುಷತ್ವತಾ ।
ದೇವತಿರ್ಯಗ್ಜನ್ಮರೋತ್ಪನ್ನಃ ಸ ತದಾ ಬ್ರಾಹ್ಮಣೋ ಭವೇತ್ ॥೪॥

ಬ್ರಾಹ್ಮಣೇಷು ಚ ವಿದ್ವಾಂಶ್ಚ ತತೋ ಮದ್ಭಕ್ತಿತತ್ಪರಃ ।
ಸಾರಾಸಾರವಿಚಾರಜ್ಞೋ ತಸ್ಯ ವ್ರತವಿಧೌ ಮತಿಃ ॥೫॥

ಮನ್ಯೈವಾನುಗ್ರಹಾತ್ಕಶ್ಚಿಜ್ಜಿಜ್ಞಾಸ್ಯತಿ ವ್ರತಂ ಪರಂ ।
ತೇನ ಚೀರ್ಣೇನ ತೀರ್ಣಂ ತದಸಾರಂ ಭವಸಾಗರಂ ॥೬॥

ಸುಗಮಾ ನಿಗಮಾ ತಸ್ಯ ಭವಿಷ್ಯತಿ ಮುನೇ ಸದಾ ।
ಶತಕೃತ್ವಾಪಿ ವೇದಾಂತಾ ನೈತತ್ಕೃತ್ವಾ ಶಿರೋವ್ರತಂ ॥೭॥

ಸ ಶಬ್ದಮಾತ್ರಭಷಕೋ ನಾಪರೋಕ್ಷಮವಾಪ್ನುಯಾತ್ ।
ಸಂನ್ಯಾಸೀ ವಾ ಗೃಹಸ್ಥೋವಾ ಗುರುಶಿಷ್ಯಾವುಭಾವಪಿ ॥೮॥

---

ಜ್ಞಾನಪ್ರಧಾನವಾದ ಪುರುಷಜನ್ಮವು ಲಭಿಸುವುದು. ಹಾಗೆ ಮನುಷ್ಯನಾಗಿ, ತಿರ್ಯಗ್ಜಂತುವಾಗಿ ಪುಣ್ಯಗಳಿಸಿದ ಮೇಲೆ ಬ್ರಾಹ್ಮಣ ಜನ್ಮವು ಪ್ರಾಪ್ತವಾಗುವುದು. ||೩-೪||

ಆ ಬ್ರಾಹ್ಮಣನು ವಿದ್ವಾಂಸನಾಗಿ, ನನ್ನಲ್ಲಿ ಭಕ್ತಿಯಿಟ್ಟು, ಸಾರಾಸಾರ ವಸ್ತುಗಳನ್ನು ವಿಚಾರಮಾಡಿದ ನಂತರ ಈ ಶಿರೋವ್ರತಾನುಷ್ಠಾನದಲ್ಲಿ ಆತನಿಗೆ ಬುದ್ಧಿಯುದಯಿಸುವುದು. ಈ ವ್ರತಮಹಿಮೆಯನ್ನು ಅರಿಯಬೇಕಾದರೂ ಅವನಿಗೆ ನನ್ನ ಸಂಪೂರ್ಣಾನುಗ್ರಹವು ಲಭಿಸಬೇಕು. ಆಗತಾನೇ ಅವನು ಭವಸಾಗರವನ್ನು ಸುಲಭವಾಗಿ ದಾಟುವನು. ||೫-೬||

ಆಗಲೇ ಅವನಿಗೆ ಸಕಲ ವೇದಗಳೂ ಕರಗತಗಳಾಗುವುವು. ಶಿರೋವ್ರತವನ್ನು ಮಾಡದೆ ನೂರಾರುಸಾರಿ ಉಪನಿಷದರ್ಥವನ್ನು ತಿಳಿದರೂ ವ್ಯರ್ಥವೇ ಸರಿ. ಶಬ್ದಮಾತ್ರವು ಹೃದಯಗತವಾಗುವುದೇ ಹೊರತು, ಅಪರೋಕ್ಷಜ್ಞಾನವು ಲಭಿಸಲಾರದು. ಸಂನ್ಯಾಸಿಯಾಗಲಿ, ಗೃಹಸ್ಥನಾಗಲಿ, ಗುರುಶಿಷ್ಯರಾಗಲಿ, ಈ ವ್ರತಸಿದ್ಧಿಯನ್ನು ಪಡೆಯದೆ, ಜ್ಞಾನಾರ್ಜನೆ ಮಾಡಲು ಸಾಧ್ಯವಾಗುವುದಿಲ್ಲ. ||೭-೮||

ವೃಥಾಶ್ರಮಂ ಗಚ್ಛತೋಽಸ್ತ್ವೌ ವ್ರತಸಂಸಿದ್ಧವರ್ಜಿತೌ ।
ಶ್ರವಣಾಯಾಪಿ ಬಹುಧಾ ನ ಲಭ್ಯೋಽಹಂ ವ್ರತಂ ವಿನಾ ॥೯॥

ತದ್ಮಾದ್ವ್ರತವಿಧಿಂ ಕೃತ್ವಾ ವಿಮುಕ್ತಶ್ಚ ವಿಮುಚ್ಯತೇ ।
ಜ್ಞಾನಾಂಗಮೇತದುತ್ಕೃಷ್ಟಂ ಶಿರೋವ್ರತಸಮಾಹ್ವಯಂ ॥೧೦॥

ಕೃತ್ಸೈವಾಭ್ಯಸ್ಯ ವೇದಾಂತಾನ್ಮುಕ್ತಿಮಾಪ್ನೋತಿ ಶಾಶ್ವತೀಂ ।
ಯಥಾ ದೇವೇಷು ಸರ್ವೇಷು ಮಹಾದೇವೋಽಹಮೇವ ಹಿ ॥೧೧॥

ಜ್ಞಾನಾಂಗಸಾಧನೋಪಾಯಮಿದಂ ಶ್ರೇಷ್ಠತರಂ ಮುನೇ ।
ಯಥೈವ ಸ್ತ್ರೀಷು ಸರ್ವಾಸು ಪಾರ್ವತೀ ಪರಮಾ ಮಮ ॥೧೨॥

ಜ್ಞಾನಾಂಗಸಾಧನೋಪಾಯಮಿದಂ ಶ್ರೇಷ್ಠತರಂ ಮುನೇ ॥೧೩॥

ಕರ್ಮದೇವೇಷು ನಿಯತಂ ಯಥಾಶ್ರೇಷ್ಠೋ ಹರಿರ್ವಿಧಿಃ ।
ಜ್ಞಾನಾಂಗಸಾಧನೋಪಾಯಮಿದಂ ಶ್ರೇಷ್ಠತರಂ ಮುನೇ ॥೧೪॥

ಯಥಾ ನದೀಷು ಸರ್ವಾಸು ಗಂಗಾ ಶ್ರೇಷ್ಠಾ ಸರಿದ್ವರಾ ।
ಜ್ಞಾನಾಂಗಸಾಧನೋಪಾಯಮಿದಂ ಶ್ರೇಷ್ಠತರಂ ಮುನೇ ॥೧೫॥

---

ಅವರು ಮಾಡುವ ಸಕಲ ಕರ್ಮಗಳೂ ಆಯಾಸಪ್ರದಗಳೇ ಹೊರತು ಸಾರ್ಥಕಗಳಾಗಲಾರವು. ಈ ವ್ರತವನ್ನಾಚರಿಸದವರಿಗೆ ನಾನು ಎಂದೂ ದೊರೆಯುಲಾರೆ. ಜ್ಞಾನಸಾಧನವಾದ ಈ ವ್ರತದಿಂದಲೇ ಮಾನವರು ಜ್ಞಾನಿಗಳಾಗಿ ಮೋಕ್ಷವನ್ನು ಪಡೆಯುವರು. ॥೯-೧೦॥

ಈ ವ್ರತಮಹಿಮೆಯಿಂದಲೇ ನನ್ನ ಭಕ್ತರು ವೇದಾಂತಗಳನ್ನು ಅಭ್ಯಾಸ ಮಾಡಿ ಮೋಕ್ಷವನ್ನು ಸಾಧಿಸುವರು. ಸಮಸ್ತದೇವತೆಗಳಲ್ಲಿ ನಾನೊಬ್ಬನೇ ಹೇಗೆ ನಿತ್ಯಸ್ವರೂಪನೋ, ಸಮಸ್ತ ಸ್ತ್ರೀಯರಲ್ಲಿಯೂ ಪಾರ್ವತಿಯೊಬ್ಬಳೇ ಹೇಗೆ ಶ್ರೇಷ್ಠ ದೇವತೆಯೋ, ಹಾಗೆಯೇ ಜ್ಞಾನಸಾಧನವಸ್ತುಗಳಲ್ಲಿ ಈ ವ್ರತವೇ ಶ್ರೇಷ್ಠತರವಾದುದು. ॥೧೧-೧೨-೧೩॥

ಕರ್ಮದೇವತೆಗಳಲ್ಲಿ ಹರಿ, ಬ್ರಹ್ಮರು ಶ್ರೇಷ್ಠರಾಗಿರುವಂತೆ, ನದಿಗಳಲ್ಲಿ ಗಂಗಾನದಿಯು ಪವಿತ್ರವಾಗಿರುವಂತೆ, ಕ್ಷೇತ್ರಗಳಲ್ಲಿ ಕಾಶಿಯು ಪ್ರಸಿದ್ಧಿಪಡೆದಿರುವಂತೆ, ನನ್ನ ಒಡವೆಗಳಲ್ಲಿ ರುದ್ರಾಕ್ಷಿಯು ಪ್ರಾಶಸ್ತ್ಯಪಡೆದಿರುವಂತೆ ಮಂತ್ರಗಳಲ್ಲಿ ಶಿವ

ಯಥಾ ಕ್ಷೇತ್ರೇಷು ಸರ್ವೇಷು ಅವಿಮುಕ್ತಂ ವಿಮುಕ್ತಿದಂ ।
ಜ್ಞಾನಾಂಗಸಾಧನೋಪಾಯಮಿದಂ ಶ್ರೇಷ್ಠತರಂ ಮುನೇ ॥೧೬॥

ಯಥಾ ಮದ್ಭೂಷಣಂ ಶ್ರೇಷ್ಠಂ ರುದ್ರಾಕ್ಷಂ ಜ್ಞಾನಸಿದ್ಧಿದಂ ।
ಜ್ಞಾನಾಂಗಸಾಧನೋಪಾಯಮಿದಂ ಶ್ರೇಷ್ಠತರಂ ಮುನೇ ॥೧೭॥

ಯಥಾ ಮಂತ್ರೇಷು ಸರ್ವೇಷು ಮಮ ಪಂಚಾಕ್ಷರೋ ವರಃ ।
ಜ್ಞಾನಾಂಗಸಾಧನೋಪಾಯಮಿದಂ ಶ್ರೇಷ್ಠತರಂ ಮುನೇ ॥೧೮॥

ಯಥಾ ವೇದೇಷು ಸರ್ವೇಷು ಶ್ರೀರುದ್ರಂ ಪರಮಂ ಮಮ ।
ಜ್ಞಾನಾಂಗಸಾಧನೋಪಾಯಮಿದಂ ಶ್ರೇಷ್ಠತರಂ ಮುನೇ ॥೧೯॥

ಯಥಾ ಸ್ಥಾನೇಷು ಪೂಜ್ಯೇಷು ಲಿಂಗಂ ಪೂಜ್ಯತಮಂ ಮಮ ।
ಜ್ಞಾನಾಂಗಸಾಧನೋಪಾಯಮಿದಂ ಶ್ರೇಷ್ಠತರಂ ಮುನೇ ॥೨೦॥

ಯಥೈವ ಸರ್ವಪುಷ್ಪೇಷು ಬಿಲ್ವಂ ಪ್ರಿಯಕರಂ ಮಮ ।
ಜ್ಞಾನಾಂಗಸಾಧನೋಪಾಯಮಿದಂ ಶ್ರೇಷ್ಠತರಂ ಮುನೇ ॥೨೧॥

ಯಥಾ ಪೂಜ್ಯಾದಿವೇಲಾಸು ಪ್ರದೋಷೋ ಮಮ ತುಷ್ಟಿದಃ ।
ಜ್ಞಾನಾಂಗಸಾಧನೋಪಾಯಮಿದಂ ಶ್ರೇಷ್ಠತರಂ ಮುನೇ ॥೨೨॥

ನಕ್ತವ್ರತೇಷು ಸರ್ವೇಷು ಸೋಮವಾರೋ ಯಥಾ ಮಮ ।
ಜ್ಞಾನಾಂಗಸಾಧನೋಪಾಯಮಿದಂ ಶ್ರೇಷ್ಠತರಂ ಮುನೇ ॥೨೩॥

---

ಪಂಚಾಕ್ಷರಿಯು ಶ್ರೇಷ್ಠವೆನಿಸಿರುವಂತೆ, ವೇದಮಂತ್ರಗಳಲ್ಲಿ ರುದ್ರಾಧ್ಯಾಯವು ಮೂರ್ಧನ್ಯವಾಗಿರುವಂತೆ, ನನ್ನ ಸರ್ವಾವಯವಗಳಲ್ಲಿ ಲಿಂಗವು ಪೂಜ್ಯವಾಗಿರುವಂತೆ, ನಾನಾಜಾತಿಯ ಪುಷ್ಪಗಳಲ್ಲಿ ನನಗೆ ಬಿಲ್ವವು ಪ್ರಿಯತಮವೆನಿಸಿರುವಂತೆ, ಪೂಜಾಕಾಲ ಗಳಲ್ಲಿ ಪ್ರದೋಷವು ಮಹಿಮೆಯನ್ನು ಪಡೆದಿರುವಂತೆ,' ಈ ಶಿರೋವ್ರತವು ಜ್ಞಾನ ಸಾಧನವ್ರತಗಳಲ್ಲಿ ಶ್ರೇಷ್ಠತೆಯನ್ನು ಹೊಂದಿರುವುದು. ॥೧೪-೧೫-೧೫-೧೬-೧೭-೧೮-೨೦-೨೧-೨೨॥

ನಕ್ತವ್ರತಗಳಲ್ಲಿ ಸೋಮವಾರವ್ರತವೂ, ಪರ್ವತಿಥಿಗಳಲ್ಲಿ ಕೃಷ್ಣಚತುರ್ದಶೀ ಅಷ್ಟಮೀ ತಿಥಿಗಳೂ, ಚಾತುರ್ವರ್ಣ್ಯದಲ್ಲಿ ಶಾಂಭವಶ್ರೇಷ್ಠನೆನಿಸಿದ ಬ್ರಾಹ್ಮಣನೂ

ಯಥಾ ಪರ್ವಸ್ವಪಿ ಸದಾ ಭೂತಾ ಕಾಲಾಷ್ಟಮೀ ಪ್ರಿಯಾ ।
ಜ್ಞಾನಾಂಗಸಾಧನೋಪಾಯಮಿದಂ ಶ್ರೇಷ್ಠತರಂ ಮುನೇ ॥೨೪॥

ಯಥಾ ವರ್ಣೇಷು ಸರ್ವೇಷು ಶಾಂಭವೋ ವಿಪ್ರಸತ್ತಮಃ ।
ಜ್ಞಾನಾಂಗಸಾಧನೋಪಾಯಮಿದಂ ಶ್ರೇಷ್ಠತರಂ ಮುನೇ ॥೨೫॥

ಯಥಾ ಚತುಷ್ಪದಂ ಮುಖ್ಯಾ ಗೌಃಶ್ರೇಷ್ಠಾ ಪಾವನೀ ಸದಾ ।
ಜ್ಞಾನಾಂಗಸಾಧನೋಪಾಯಮಿದಂ ಶ್ರೇಷ್ಠತರಂ ಮುನೇ ॥೨೬॥

ಯಥಾ ಸರ್ವಾಮರಶ್ರೇಷ್ಠೋ ಮಹೇಂದ್ರಃ ಪಾಕಶಾಸನಃ ।
ಜ್ಞಾನಾಂಗಸಾಧನೋಪಾಯಮಿದಂ ಶ್ರೇಷ್ಠತರಂ ಮುನೇ ॥೨೭॥

ಯಥಾ ಸರ್ವಮುನಿಶ್ರೇಷ್ಠೋ ದಧೀಚೋ ಮಮ ಭಕ್ತಿಮಾನ್ ।
ಜ್ಞಾನಾಂಗಸಾಧನೋಪಾಯಮಿದಂ ಶ್ರೇಷ್ಠತರಂ ಮುನೇ ॥೨೮॥

ಯಥೈವ ಪತತಾಂ ಶ್ರೇಷ್ಠೋ ಗರುಡೋ ವೇಗವತ್ತರಃ ।
ಜ್ಞಾನಾಂಗಸಾಧನೋಪಾಯಮಿದಂ ಶ್ರೇಷ್ಠತರಂ ಮುನೇ ॥೨೯॥

ಯಥಾ ಯಕ್ಷಾಧಿಪಃ ಶ್ರೇಷ್ಠೋ ಯಕ್ಷಾಣಾಂ ತ್ರ್ಯಕ್ಷಪೂಜಕಃ ।
ಜ್ಞಾನಾಂಗಸಾಧನೋಪಾಯಮಿದಂ ಶ್ರೇಷ್ಠತರಂ ಮುನೇ ॥೩೦॥

ಯಥಾ ವೃಕ್ಷೋತ್ರ ಸೋ ಬಿಲ್ವಃ ವೃಕ್ಷಾಣಾಂ ಮಮ ತುಷ್ಟಿದಃ ।
ಜ್ಞಾನಾಂಗಸಾಧನೋಪಾಯಮಿದಂ ಶ್ರೇಷ್ಠತರಂ ಮುನೇ ॥೩೧॥

ಕಿಮತ್ರ ಬಹುನೋಕ್ತೇನ ವ್ರತಂ ಶ್ರೇಷ್ಠತರಂ ಮುನೇ ।
ವ್ರತಂ ಪಾಶುಪತಂ ಶ್ರೌತಮಥರ್ವಶಿರಸಿ ಸ್ಥಿತಂ ॥೩೨॥

---

ತಿರ್ಯಗ್ಜಂತುಗಳಲ್ಲಿ ಹಸುವೂ, ದೇವತೆಗಳಲ್ಲಿ ಮಹೇಂದ್ರನೂ, ಮುನಿಜನರಲ್ಲಿ ಶಿವಭಕ್ತನೆನಿಸಿದ ದಧೀಚಿಮುನಿಯೂ, ವೇಗವುಳ್ಳ ಪಕ್ಷಿಗಳಲ್ಲಿ ಗರುಡನೂ, ಯಕ್ಷರಲ್ಲಿ ಶಿವಪೂಜಕನಾದ ಕುಬೇರನೂ, ಮರಗಳಲ್ಲಿ ಬಿಲ್ವವೃಕ್ಷವೂ ಶ್ರೇಷ್ಠವಾದ ವುಗಳೆಂದು ಖ್ಯಾತಿಪಡೆದಿರುವಂತೆ ಈ ಶಿರೋವ್ರತವೆಂಬುದು ಸಕಲ ಜ್ಞಾನಸಾಧಕ ವ್ರತಗಳಲ್ಲೆಲ್ಲಾ ಶ್ರೇಷ್ಠಸ್ಥಾನವನ್ನು ಪಡೆದಿರುವುದು. ॥೨೩-೨೪-೨೫-೨೬-೨೭-೨೮-೨೯-೩೦-೩೧-೩೨॥

ದೇಶಕಾಲೌ ವಿದಿತ್ವಾಥ ಸ್ವಸ್ಯ ಭಕ್ತಿಂ ನಿರೀಕ್ಷ್ಯ ಚ ।
ಆಪೂರ್ಯಮಾಣೇ ಶಶಿನಿ ಪುಣ್ಯೇ ಚೈವೋತ್ತರಾಯಣೇ ॥೩೩॥

ಆರ್ದ್ರಾಯಾಂ ಚ ಚತುರ್ದಶ್ಯಾಮಷ್ಟಮ್ಯಾಂ ವಾ ಸಮಾಹಿತಃ ।
ಚಿತ್ರಾಯಾಂ ಪೌರ್ಣಮಾಸ್ಯಾಂ ವಾ ಮುಖ್ಯಮೇತದ್ಧಿ ಹಾಯನೇ ॥೩೪॥

ನದೀತೀರೇ ಶಿವಕ್ಷೇತ್ರೇ ಪ್ರಾಗುದಕ್ಪ್ರವಣಾಂ ಶುಭಾಂ ।
ಶಾಲಾಂ ನಿರ್ಮಾಯ ತದನು ವಿತಾನಾದ್ಯೈರಲಂಕೃತಾಂ ॥೩೫॥

ಪುಷ್ಪದೀಪಾದಿಧೂಪೈಶ್ಚ ಕದಲೀಸ್ತಂಭಕುಂಭಕೈಃ ।
ಪಲ್ಲವೋರ್ಧ್ವಮುಖೇ ತತ್ರ ರಂಗವಲ್ಲ್ಯಾದ್ಯಲಂಕೃತೈಃ ॥೩೬॥

ವ್ರತನಿತ್ಯಸಮಾಚಾರೋ ಬ್ರಾಹ್ಮಣೈಶ್ಶಾಂಭವೈಸ್ಸಹ ।
ಸ್ನಾತ್ವಾ ಶುಕ್ಲಾಂಬರಧರೋ ಮಾಂ ಸಂಪೂಜ್ಯ ಗಣಾಧಿಪಂ ॥೩೭॥

ನಾಂದೀ ಶ್ರಾದ್ಧಂ ತತಃ ಕೃತ್ವಾ ವೇದವೇದಾಂಗಪಾರಗಂ ।
ಆಚಾರ್ಯಂ ವರಯೇದ್ವಿಪ್ರಂ ಭಸ್ಮರುದ್ರಾಕ್ಷಭೂಷಿತಂ ॥೩೮॥

---

ತನಗೆ ಆ ವ್ರತಾಚರಣೆಯಲ್ಲಿ ಭಕ್ತಿ ಹುಟ್ಟಿದೊಡನೆಯೇ ದೇಶ, ಕಾಲಗಳನ್ನೂ ಸ್ವಲ್ಪಮಟ್ಟಿಗೆ ಗಮನಿಸಬೇಕು. ಶುಕ್ಲಪಕ್ಷ, ಉತ್ತರಾಯಣ, ಆರ್ದ್ರಾನಕ್ಷತ್ರ, ಚತುರ್ದಶೀ ಅಥವಾ ಅಷ್ಟಮೀ ತಿಥಿ, ಚಿತ್ತಾನಕ್ಷತ್ರವಿಶಿಷ್ಟಪೂರ್ಣಿಮಾ ಈ ಕಾಲಗಳು ಈ ವ್ರತಾಚರಣೆಗೆ ವರ್ಷದಲ್ಲಿ ಪ್ರಶಸ್ತವಾದವುಗಳು. ॥೩೩-೩೪॥

ನದೀತೀರದಲ್ಲಾಗಲಿ, ಶಿವಕ್ಷೇತ್ರದಲ್ಲಾಗಲಿ, ಪೂರ್ವ ಅಥವಾ ಉತ್ತರಾಭಿಮುಖವಾದ ಒಂದು ದೊಡ್ಡ ಮಂಟಪವನ್ನು ರಚಿಸಿ, ಅದನ್ನು ಸುಂದರವಾದ ಮೇಲ್ಕಟ್ಟು ಮುಂತಾದವುಗಳಿಂದ ಅಲಂಕರಿಸಬೇಕು. ಪುಷ್ಪ, ಧೂಪ, ದೀಪ, ಬಾಳೆಕಂಬ, ಚಿಗುರಿನಿಂದ ಕೂಡಿದ ಕಲಶಗಳು, ಚಿಗುರುಗಳು, ರಂಗವಲ್ಲಿ ಇವುಗಳಿಂದ ಅದನ್ನು ಶೃಂಗರಿಸಬೇಕು. ॥೩೫-೩೬॥

ಆ ಮಂಟಪದಲ್ಲಿ ವೇದವೇದಾಂಗಪಾರಗರಾದ ಶಾಂಭವರೆನಿಸಿದ ಬ್ರಾಹ್ಮಣರೊಡಗೂಡಿ ಸ್ನಾನಾದಿಗಳಿಂದ ಶುದ್ಧನಾಗಿ ಶುದ್ಧಮಡಿಯುಟ್ಟು ಮೊದಲು ವಿಘ್ನೇಶ್ವರಾರಾಧನೆ, ನಾಂದೀಶ್ರಾದ್ಧ ಇವುಗಳನ್ನು ನೆರವೇರಿಸಿ, ಅನಂತರ ಯೋಗ್ಯನಾದ ವಿಪ್ರನೊಬ್ಬನನ್ನು ಆಚಾರ್ಯನನ್ನಾಗಿರುವಂತೆ ಪ್ರಾರ್ಥಿಸಿಕೊಳ್ಳಬೇಕು. ಆತನು

ದರ್ಭಾಸನೇ ಸಮಾಸೀನೋ ದರ್ಭಮುಷ್ಟಿಂ ಪ್ರಗೃಹ್ಯ ಚ ।
ಪ್ರಾಣಾಯಾಮತ್ರಯಂ ಕೃತ್ವಾ ಪ್ರಾಙ್ಮುಖೋ ವಾಪ್ಯುದಙ್ಮುಖಃ ॥೩೯॥

ಧ್ಯಾತ್ವಾ ಮಾಂ ಚೈವ ಗಿರಿಜಾಂ ಸ್ಕಂದವಿಘ್ನೇಶ್ವರಾವುಭೌ ।
ವ್ರತಮೇತತ್ಕರೋಮೀತಿ ಸಂಕಲ್ಪ್ಯ ತ್ರಿಃ ಪಿಬೇದಪಃ ॥೪೦॥

ಶಾಂಭವಾಂಶ್ಚಾಪ್ಯನುಜ್ಞಾಪ್ಯ ತಾನ್ಯಥಾಶಕ್ತಿ ತೋಷಯೇತ್ ।
ಯಾವಚ್ಛರೀರಪಾತಂ ವಾ ದ್ವಾದಶಾಬ್ದಮಥಾಪಿ ವಾ ॥೪೧॥

ತದರ್ಧಂ ವಾ ತದರ್ಧಂ ವಾ ಮಾಸದ್ವಾದಶಕಂ ತು ವಾ ।
ತದರ್ಧಂ ವಾ ತದರ್ಧಂ ವಾ ಮಾಸಮೇಕಮಥಾಪಿ ವಾ ॥೪೨॥

ದಿನದ್ವಾದಶಕಂ ವಾಪಿ ದ್ವಿತ್ರಿರೇಕದಿನಂ ತು ವಾ ।
ಅಗ್ನಿಮಾಧಾಯ ವಿಧಿವತ್ಸ್ವಸೂತ್ರೋಕ್ತೇನ ವರ್ತ್ಮನಾ ॥೪೩॥

---

ಭಸ್ಮರುದ್ರಾಕ್ಷಿಗಳಿಂದ ಅಲಂಕೃತನಾಗಿರಬೇಕು. ಅನಂತರ ದರ್ಭಮಯವಾದ ಆಸನದಲ್ಲಿ ಕುಳಿತು, ಕುಶಹಸ್ತನಾಗಿ ಮೂರು ಬಾರಿ ಪ್ರಾಣಾಯಾಮಮಾಡಿ ಪೂರ್ವ ಅಥವಾ ಉತ್ತರಾಭಿಮುಖವಾಗಿ ಕುಳಿತು, ಶಿವನನ್ನು ಧ್ಯಾನಿಸುತ್ತಾ ಸಂಕಲ್ಪ ಮಾಡಬೇಕು. ||೩೭-೩೮-೩೯||

ಆರಂಭದಲ್ಲಿ ಶಿವ, ಪಾರ್ವತಿ, ಸ್ಕಂದ, ವಿಘ್ನೇಶ್ವರ ಇವರನ್ನು ಪ್ರಾರ್ಥಿಸುತ್ತಾ ಈ ವ್ರತಾಚರಣೆಗೆ ಅಧಿಕಾರಕೊಡಬೇಕೆಂದು ಕೋರಿ, ಮೂರುಸಾರಿ ಆಚಮನಮಾಡಿ ಅಲ್ಲಿದ್ದ ಶಾಂಭವರ ಅನುಜ್ಞೆಯನ್ನು ಪಡೆದು, ಯಥಾಶಕ್ತಿ ಅವರಿಗೆ ದಕ್ಷಿಣಾದಿಗಳನ್ನು ಕೊಟ್ಟು ತೃಪ್ತಿಪಡಿಸಬೇಕು. ಈ ವ್ರತವನ್ನು ಬದುಕಿರುವವರೆಗೂ ನಡೆಸಬಹುದು. ಅಥವಾ ಹನ್ನೆರಡುವರ್ಷ, ಆರುವರ್ಷ, ಮೂರುವರ್ಷ, ಒಂದುವರ್ಷ, ಆರುತಿಂಗಳು, ಮೂರುತಿಂಗಳು, ಒಂದುತಿಂಗಳು, ಹನ್ನೆರಡುದಿನ, ಮೂರುದಿನ, ಎರಡುದಿನ, ಕೊನೆಗೆ ಒಂದುದಿನ ಈ ಪ್ರಮಾಣದಲ್ಲಾದರೂ ಈ ವ್ರತವನ್ನು ನಡೆಸಬಹುದು. ಅನಂತರ ತನ್ನ ಶಾಖೆಗೆ ಅನುಸಾರವಾದ ಅಗ್ನಿಮುಖಪ್ರಯೋಗದಿಂದ ಅಗ್ನಿಯನ್ನು ಪ್ರತಿಷ್ಠಿಸಿಕೊಳ್ಳಬೇಕು. ||೪೦-೪೧-೪೨-೪೩||

ವಿರಜಾಮಂತ್ರಸಂಸಿದ್ಧೈರ್ಮಂತ್ರೈಃ ಸ ಜುಹುಯಾದ್ಘೃತೈಃ ।
ಚರುಣಾ ಸ್ವಯಮಾಚಾರ್ಯೋ ಬ್ರಹ್ಮಾಣಂ ತತ್ರ ಕಲ್ಪಯೇತ್ ॥೪೪॥

ಮಾತ್ರೈಃ ಸವಿರಜೈರ್ದತ್ವಾ ಸ್ವಯಂ ಚ ವಿರಜೋ ಭವೇತ್ ।
ಅಥ ಗೋಮಯಮಾದಾಯ ಪೂರ್ವೋಕ್ತೇನೈವ ವರ್ತ್ಮನಾ ॥೪೫॥

ಸಂಲಿಪ್ಯ ಗಂಧಸಲಿಲೈರ್ಗಂಧದ್ವಾರೇತಿ ಮಂತ್ರತಃ ।
ನ್ಯಸ್ಯಾಗ್ನೌ ಪಂಚಬ್ರಹ್ಮಾದ್ಯೈಃ ಕರೀಷೈಶ್ಚಾದ್ಯ ಚಾನಲಂ ॥೪೬॥

ಘೃತಾಹಾರೀ ಹವಿಷ್ಯಾಶೀ ನಕ್ತಭುಕ್ತೋ ಯತವ್ರತಃ ।
ಪಯೋ ಬ್ರಾಹ್ಮಣಪೂರ್ವಂ ವಾ ಕ್ಷತ್ರಿಯಾದ್ಯಾಃ ಶ್ರುತಿಕ್ರಮಾತ್ ॥೪೭॥

ದ್ವಾದಶೇ ತತ್ರ ದಿವಸೇ ಹೋಮಶೇಷಂ ಸಮಾಪಯೇತ್ ।
ಶಿಖಾಜಟಸ್ತ್ವೇಕಜಟೋ ಜಟೀ ವಾ ಸಶಿಖೋಥವಾ ॥೪೮॥

ಕಾಷಾಯವಸನೋ ವಾಥ ಚೀರವಲ್ಕಲಧಾರ್ಯಪಿ ।
ತಾನ್ಯುದ್ಧೃತ್ಯ ತದಾಪಾತ್ರೇ ಭಸ್ಮಪಿಂಡಾದಿಕಂ ಕ್ರಮಾತ್ ॥೪೯॥

---

ಅನಂತರ ಬ್ರಹ್ಮನನ್ನು ವರಣಮಾಡಿ, ಆಚಾರ್ಯಸಹಿತನಾಗಿ ಚರ್ವಾಜ್ಯ (ಅನ್ನ ಮತ್ತು ತುಪ್ಪ) ಹೋಮ ನಡೆಸಬೇಕು. ಇದಕ್ಕೆ ವಿರಜಾ (ವಿರಜಾದೇವತಾಕ ಯಜುರ್ವೇದಮಂತ್ರ) ಮಂತ್ರವನ್ನುಚ್ಚರಿಸಬೇಕು. ಅನಂತರ ಗೋಮಯವನ್ನು ಗಂಧೋದಕದಲ್ಲಿ ಬೆರಸಿ, 'ಗಂಧದ್ವಾರಾಂ' ಎಂಬ ಮಂತ್ರದಿಂದ ಸದ್ಯೋಜಾತಾದಿ ಮಂತ್ರೋಚ್ಚಾರಣಪೂರ್ವಕವಾಗಿ ಹೋಮಮಾಡಬೇಕು. ಅನಂತರ ಬೆರಣಿಯನ್ನು ಅಗ್ನಿಗೆ ಹಾಕಿ ಅದನ್ನೆಲ್ಲಾ ಪೂರ್ಣನಾಗಿ ಪಚನಮಾಡಿಸಬೇಕು. ॥೪೫-೪೬॥

ಈ ರೀತಿ ಹೋಮಮಾಡುವವರು ಬ್ರಾಹ್ಮಣಾದಿ ಕ್ರಮದಲ್ಲಿ ತುಪ್ಪ, ಹವಿಸ್ಸು, ರಾತ್ರಿಊಟ, ಹಾಲು ಇವುಗಳನ್ನು ಭುಂಜಿಸಬಹುದು. ಅಥವಾ ಈ ಕ್ರಮವನ್ನೇ ಕ್ಷತ್ರಿಯಾದಿಯಾಗಿ ಬೇಕಾದರೂ ಅನುಸರಿಸಬಹುದು. ಹನ್ನೆರಡನೆಯ ದಿವಸ ಹೋಮವನ್ನು ಪೂರ್ತಿಗೊಳಿಸಬೇಕು. ಅಂದರೆ ಕ್ರಮವಾಗಿ ಹನ್ನೆರಡು ದಿನ ಹೋಮವನ್ನು ನಡೆಸಬೇಕು. ತಲೆಗೂದಲನ್ನು ಜಟಾರೂಪದಲ್ಲಿ ಕಟ್ಟಿಕೊಂಡು ಅಥವಾ ಒಂದೇ ಜಟೆಯನ್ನಾಗಿ ಕಲ್ಪಿಸಿಕೊಂಡು, ಅಥವಾ ತಲೆ ಗಂಟುಹಾಕಿಕೊಂಡು

ಸದ್ಯೋಜಾತಾದಿಪಂಚಾದ್ಯೈಃ ಸಂಪೂಜ್ಯಾಥ ತ್ರಿಯಂಬಕೈಃ ।
ಪ್ರಕ್ಷಾಳ್ಯಪಾಣೀ ಚರಣೌ ತ್ರಿರಾಚಾಮೇಚ್ಛಿವಂ ಸ್ಮರನ್ ॥೫೦॥

ಸಕಲೀಕೃತ್ಯ ತದ್ಭಸ್ಮ ವಿರಜಾನಲಸಂಭವಂ ।
ಅಗ್ನಿರಿತ್ಯಾದಿಭಿರ್ಮಂತ್ರೈಃ ಷಡ್ಭಿರಾಥರ್ವಣೈಃ ಕ್ರಮಾತ್ ॥೫೧॥

ವಿಮೃಜ್ಯಾಂಗಾನಿ ಮೂರ್ಧಾಂತಂ ಚರಣಾದ್ಯಾನಿ ಸಂಸ್ಪೃಶೇತ್ ।
ಯತಿಸ್ತು ಪ್ರಣವೇನೈವ ಸರ್ವೇಷಾಂ ಚ ಯಥಾಕ್ರಮಂ ॥೫೨॥

ತತಸ್ತ್ರಿಪುಂಡ್ರಂ ರಚಯೇತ್ರಿಯಾಯುಷಸಮಾಹ್ವಯಂ ।
ಶಿವಭಾವಂ ಸಮಾಗಮ್ಯ ಶಿವಯೋಗಮಿದಂ ಮುನೇ ॥೫೩॥

ಕುರ್ಯಾತ್ರಿಸಂಧ್ಯಮಪ್ಯೇತತ್ಪಶುಪಾಶವಿಮುಕ್ತಯೇ ।
ಆದೇಹಪಾತಮೇತದ್ವೈ ಚರನ್ ಪಾಶುಪತವ್ರತಂ ॥೫೪॥

ಸ ಮುಕ್ತೋ ಮೋಚಯೇದನ್ಯಾನ್ ಸ್ವದೃಷ್ಟಿಪಥಗೋಚರಾನ್ ।
ತದಲಾಭೇ ದ್ವಾದಶಾಬ್ದಂ ವತ್ಸರಂ ವಾ ದಿನತ್ರಯಂ ॥೫೫॥

---

ಕಾವಿಬಟ್ಟೆ ಅಥವಾ ನಾರುಮಡಿ ಇವುಗಳನ್ನುಟ್ಟು ಆ ಹೋಮ ಭಸ್ಮದ ಉಂಡೆಗಳನ್ನು ಒಂದು ಪಾತ್ರೆಯಲ್ಲಿಟ್ಟುಕೊಳ್ಳಬೇಕು. ॥೪೭-೪೮-೪೯॥

ಅದನ್ನು ಸದ್ಯೋಜಾತಾದಿ ಪಂಚಮಂತ್ರಗಳಿಂದಲೂ, ತ್ರಿಯಂಬಕ ದೇವತಾಕವಾದ ಮಂತ್ರದಿಂದಲೂ ಪೂಜಿಸಿ, ಕೈಕಾಲುಗಳನ್ನು ತೊಳೆದುಕೊಂಡು ಮೂರುಸಾರಿ ಆಚಮನ ಮಾಡಿ ಶಿವನಾಮಸ್ಮರಣೆಯಿಂದ ಆ ಭಸ್ಮವನ್ನೆಲ್ಲಾ ಒಟ್ಟುಗೂಡಿಸಬೇಕು. ಆಮೇಲೆ ಆದೇ ಭಸ್ಮವನ್ನು 'ಅಗ್ನಿರಿತಿಭಸ್ಮ' ಎಂಬ ಮಂತ್ರದಿಂದಲೂ, ಶಿವಾಥರ್ವಶೀರ್ಷಮಂತ್ರಗಳಿಂದಲೂ ಸರ್ವಾಂಗಗಳಿಗೂ ಬಳಿದುಕೊಳ್ಳಬೇಕು. ಸಂನ್ಯಾಸಿಯಾದವನು ಕೇವಲ ಪ್ರಣವಮಂತ್ರದಿಂದಲೇ ಇದನ್ನು ನಡೆಸಬಹುದು. ॥೫೦-೫೧-೫೨॥

ಆದೇ ಭಸ್ಮದಲ್ಲಿ ತ್ರ್ಯಾಯುಷಮಿತ್ಯಾದಿಮಂತ್ರಗಳಿಂದ ತ್ರಿಪುಂಡ್ರಧಾರಣೆ ಮಾಡಿಕೊಳ್ಳಬೇಕು. ಶಿವೋಹಂ ಎಂಬ ಭಾವನೆಯಿಂದ ಇದನ್ನು ನಡೆಸಿದರೆ ಆಗ ಅದು ಶಿವಯೋಗವೆನಿಸುವುದು. ಪಶುಗಳ (ಜನರ) ಪಾಶವು (ಬಂಧನವು) ಇದರಿಂದ

ದಿನದ್ವಾದಶಕಂ ವಾಪಿ ಸ ತು ವೈ ನೈಷ್ಠಿಕಃ ಸ್ಮೃತಃ ।
ಅತ್ಯಾಶ್ರಮೀ ಸ ವಿಜ್ಞೇಯೋ ಯೋ ದೇಹಾಂತಾವಸಾನಭೃತ್ ॥೫೬॥

ಸ ಏವ ತಪತಾಂ ಶ್ರೇಷ್ಠಃ ಸ ಏವ ಚ ಮಹಾವ್ರತೀ ।
ನ ತೇನ ಸದೃಶಃ ಕಶ್ಚಿತ್ ಕೃತಕೃತ್ಯೋ ಮುಮುಕ್ಷುಷು ॥೫೭॥

ವರ್ಣೀವಾಥ ಗೃಹೀ ವನ್ಯೋ ಯತಿಃ ಕ್ಷತ್ರಿಯವೈಶ್ಯಕಃ ।
ವ್ರತಂ ಪಾಶುಪತಂ ಕೃತ್ವಾ ಮಮ ಜ್ಞಾನಮವಾಪ್ನುಯಾತ್ ॥೫೮॥

ಅನ್ಯಂ ಚೇತ್ಕರ್ತುರ್ಯತ್ಪುಣ್ಯಂ ವ್ರತೇನಾನೇನ ಸಿದ್ಧಿದಂ ।
ತಸ್ಯಾವಿಮುಕ್ತೇ ದೇಹಾಂತಃ ಪ್ರಸಾದಾನ್ಮೇ ಭವಿಷ್ಯತಿ ॥೫೯॥

ಕಿಮತ್ರ ಬಹುನೋಕ್ತೇನ ಜ್ಞಾನಾಂಗಮಿದಮೇವ ಹಿ ।
ಸರ್ವೈರ್ಮುಮುಕ್ಷುಭಿಃ ಸೇವ್ಯಂ ಸತ್ಯಂ ಸತ್ಯಂ ಮಯೋದಿತಂ ॥೬೦॥

---

ಪರಿಹೃತವಾಗುವುದು. ಹೀಗೆ ಭಸ್ಮಧಾರಣೆಯನ್ನು ತ್ರಿಕಾಲಗಳಲ್ಲಿಯೂ ನಡೆಸಬಹುದು. ॥೫೩-೫೪-೫೫॥

ಹೀಗೆ ಹನ್ನೆರಡು ದಿವಸ ನಡೆಸಿದರೆ ಆವನು ನೈಷ್ಠಿಕನೆನಿಸುವನು. ಮರಣ ಪರ್ಯಂತವಾಗಿ ಆಚರಿಸುವವನು ಅತ್ಯಾಶ್ರಮಿಯು. ಅಂದರೆ ಸರ್ವಾಶ್ರಮಿಗಳಿಗಿಂತ ಶ್ರೇಷ್ಠನು. ಆವನೇ ತಪಸ್ವಿ, ಮಹಾವ್ರತಿ. ಅವನಿಗಿಂತ ಧನ್ಯರಾದ ಮೋಕ್ಷಾರ್ಥಿಗಳು ಮತ್ತಾರೂ ದೊರೆಯಲಾರರು. ॥೫೬-೫೭॥

ಬ್ರಹ್ಮಚಾರೀ, ಗೃಹಸ್ಥ, ವಾನಪ್ರಸ್ಥ, ಸಂನ್ಯಾಸೀ, ಕ್ಷತ್ರಿಯ, ವೈಶ್ಯ ಇವರಲ್ಲಿ ಯಾರೇ ಆಗಲಿ ಈ ಪಾಶುಪತವ್ರತವನ್ನು ನಡೆಸಬಹುದು. ಇದರಿಂದ ಶಿವಸಂಬಂಧವಾದ ಸುಜ್ಞಾನವು ಲಭಿಸುವುದು. ಮತ್ತಾವ ಪುಣ್ಯಕಾರ್ಯಗಳನ್ನಾಚರಿಸಬೇಕಾದರೂ ಈ ವ್ರತದ ಮೂಲಕ ನಡೆಸಬಹುದು. ಇದರಿಂದ ಪುಣ್ಯವೃದ್ಧಿಯಾಗುವುದು. ಮತ್ತು ನನ್ನ ಅನುಗ್ರಹವು ಲಭಿಸಿ, ಆದರಿಂದ ಅವಿಮುಕ್ತಕ್ಷೇತ್ರ (ಕಾಶಿ) ವಾಸವು ಒದಗುವುದು. ಒಟ್ಟಿನಲ್ಲಿ ಈ ವ್ರತವು ಸುಜ್ಞಾನಪ್ರದವಾದುದು. ಮೋಕ್ಷಾಪೇಕ್ಷಿಗಳು ಇದನ್ನು ತಪ್ಪದೆ ಆಚರಿಸಬೇಕು. ॥೫೮-೫೯-೬೦॥

ಅಥರ್ವಸರ್ವಸ್ವಮಿದಂ ಶಿರೋವ್ರತಂ
ಶರ್ವಪ್ರಿಯಂ ಪರ್ವತರಾಜನಂದಿನಿ ।
ಅಖರ್ವಪಾಪಾದ್ರಿಮಹಾಘಗರ್ವಹೃತ್
ಸರ್ವಾರ್ಧಮೇಧಾದಪಿ ಮೇಧ್ಯ ತುಷ್ಟಿಕೃತ್ ॥೬೧॥

ಕೈವಲ್ಯಶ್ರುತಿವಲ್ಲರೀ ಕುಸುಮಿತಶ್ರೀಪಲ್ಲವೋಲ್ಲಾಸಿಯತ್
ಮದ್ಧ್ಯಾನಾರ್ಚನರುದ್ರಸೂಕ್ತಜಪತೋ ಭಸ್ಮಸ್ಮರಾರಿಪ್ರಿಯಂ ।
ಯನ್ಮುಕ್ತಿಪ್ರದಭಕ್ತಿಸೂಕ್ತಿಪರಮಂ ಪುಣ್ಯಾವಿಮುಕ್ತಿಂ ಸದಾ
ಮೋದಾಯಾಹ ಮಮೈವ ಕಿಂ ಚ ಪರಮಾನಂದಂ ಪ್ರಿಯೇ ಶಾಶ್ವತಂ॥೬೨॥

ಬೃಹಜ್ಜಾಬಾಲೋಕ್ತಶ್ರುತಿವಿಹಿತ ಭಸ್ಮಾಕ್ಷವಿಧೃತಿಃ
ಪರಂ ನಿರ್ವಾಣಾಯ ಪ್ರಕಥಿತಮಹಾಶೈಲತನಯೇ ।
ತದುಕ್ತಂ ತನ್ಮುಕ್ತ್ಯೈ ಪ್ರಭವತಿ ವಿಶೇಷೇಣ ಮನುಜೈ
ರ್ದ್ವಿಜೈಸ್ಸಂಸೇವ್ಯೋಯಂ ಶ್ರುತಿಗದಿತಮಾರ್ಗೋ ಹಿ ಸುಗಮಃ ॥೬೩॥

---

ಈ ಶಿರೋವ್ರತವು ಶಿವಾಥರ್ವಮಂತ್ರದ ಸಾರವು. ಪಾರ್ವತಿಯೇ, ಈ ವ್ರತವು ನನಗೆ ಅತಿಪ್ರಿಯವಾದುದು. ಬಲಿಷ್ಠವಾದ ಪಾಪಪರ್ವತವನ್ನು ಭೇದಿಸುವ ಸಾಮರ್ಥ್ಯವುಳ್ಳದುದು. ಸಕಲ ಯಾಗಾಚರಣೆಗಿಂತಲೂ ಈ ವ್ರತಾಚರಣೆ ಮಾಡುವವರ ವಿಷಯದಲ್ಲಿ ನಾನು ಹೆಚ್ಚು ಪ್ರೀತಿಯುಳ್ಳವನಾಗುವೆನು. ನನಗೆ ಇದು ಅಷ್ಟು ಪ್ರಿಯವೆನಿಸಿದೆ. ॥೬೧॥

ಪಾರ್ವತಿಯೇ, ಈ ಭಸ್ಮವೆಂಬುದು ಮೋಕ್ಷಶ್ರುತಿಯೆಂಬ ಬಳ್ಳಿಗೆ ಚಿಗುರಿನಿಂದ ಕೂಡಿದ ಪುಷ್ಪವೆಂದು ತಿಳಿ. ನನ್ನ ಧ್ಯಾನ, ಅರ್ಚನೆ, ರುದ್ರಮಂತ್ರಪಠನ ಇವುಗಳಿಂದಲಂತೂ ಈ ಭಸ್ಮವು ಇನ್ನೂ ಮಹತ್ತ್ವವನ್ನು ಪಡೆದು ನನಗೆ ಪ್ರಿಯವೆನಿಸುವುದು. ಮುಕ್ತಿಪ್ರದವಾದ, ಭಕ್ತಿಬೋಧಕವಾದ ಶ್ರುತಿವಾಕ್ಯಗಳಲ್ಲಿ ಬಹುವಾಗಿ ಇದು ವರ್ಣಿತವಾಗಿದೆ. ಒಟ್ಟಿನಲ್ಲಿ ಸಂತೋಷದಿಂದ ಹೇಳುವುದಾದರೆ ಇದು ನನಗೆ ಅತ್ಯಾನಂದಪ್ರದವಾದ ಶಾಶ್ವತವಸ್ತುವೆನ್ನಬಹುದು. ॥೬೨॥

ಮಹಾದೇವಿಯೇ, ಬೃಹಜ್ಜಾಬಾಲೋಪನಿಷತ್ತಿನಲ್ಲಿ ಈ ಭಸ್ಮ, ರುದ್ರಾಕ್ಷ ಧಾರಣೆಯು ಕೇವಲ ಮೋಕ್ಷಫಲವೆಂದೇ ಸ್ಪಷ್ಟವಾಗಿ ಉಕ್ತವಾಗಿದೆ. ಅದು ನಿಜ. ಆದ್ದರಿಂದ ಮಾನವರು, ಅದರಲ್ಲಿಯೂ ವಿಶೇಷವಾಗಿ ದ್ವಿಜರೆನಿಸಿದವರು, ಆ ಉಪನಿ

ಭೂತ್ಯೈ ಪ್ರಮಾದೋ ನ ವಿಧೇಯ ಇತ್ಯಮೀ
ತೇ ತೈತ್ತರೀಯಾ ಹಿ ಸದಾ ಮನಂತಿ ।
ಕಾಲಾಗ್ನಿರುದ್ರಾ ಅಪಿ ಸಂಗಿರಂತಿ
ಶ್ರುತೇರ್ಗಿರಾ ಭಸ್ಮಧೃತಿಪ್ರಭಾವಂ ॥೬೪॥

ಇತಿ ಶ್ರೀ ಶಿವರಹಸ್ಯೇ ದಶಮಾಂಶೇ ಪೂರ್ವಾರ್ಧೇ
ಶಿರೋವ್ರತಕಾಲನಿಯಮವಿಧಾನವರ್ಣನಂ ನಾಮ
ತ್ರಯೋದಶೋಽಧ್ಯಾಯಃ

---

ಷದರ್ಥವನ್ನು ನಂಬಿ ಅದರಲ್ಲಿ ಹೇಳಿರುವಂತೆಯೇ ಸದಾ ಭಸ್ಮಾದಿಗಳಿಂದ ತಮ್ಮ ಶರೀವನ್ನು ಅಲಂಕರಿಸಿಕೊಳ್ಳಬೇಕು. ಇದೇ ಮೋಕ್ಷಪ್ರಾಪ್ತಿಗೆ ಸುಲಭಮಾರ್ಗ. ॥೬೩॥

ತೈತ್ತಿರೀಯೋಪನಿಷತ್ತು, ಕಾಲಾಗ್ನಿರುದ್ರೋಪನಿಷತ್ತು, ಅದೇರೀತಿ ಭಸ್ಮಜಾಬಾಲೋಪನಿಷತ್ತು ಇವು ಸರ್ವದಾ ಭಸ್ಮಧಾರಣೆಯ ಪ್ರಭಾವವನ್ನು ಘೋಷಿಸುತ್ತಿವೆ. ಹೀಗಿರುವಾಗ ಮಾನವರು ನಿಜವಾಗಿಯೂ ಈ ವಿಭೂತಿಯ ವಿಷಯದಲ್ಲಿ ಅಜಾಗರೂಕತೆಯನ್ನು ತೋರ್ಪಡಿಸಬಾರದು, ಎಂದು ಪರಶಿವನು ಪಾರ್ವತಿಗೆ ಬೋಧಿಸಿದುದನ್ನು ಕುಮಾರಸ್ವಾಮಿಯು ಜೈಗೀಷವ್ಯಮಹಾಮುನಿಗೆ ವಿಸ್ತರಿಸಿ ಹೇಳಿದನು. ॥೬೪॥

ಇಲ್ಲಿಗೆ ಶ್ರೀಶಿವರಹಸ್ಯದಲ್ಲಿ ದಶಮಾಂಶದಲ್ಲಿ ಹದಿಮೂರನೆಯ
ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ಶ್ರೀ ಶಿವಾಯ ನಮಃ ॥

# ಅಥ ಶ್ರೀಶಿವರಹಸ್ಯೇ

## ಈಶಾನಾಖ್ಯೇ

## ದಶಮಾಂಶಪೂರ್ವಾರ್ಧೇ

## ಚತುರ್ದಶೋಽಧ್ಯಾಯಃ

॥ ಶ್ರೀಈಶ್ವರ ಉವಾಚ ॥

ಭಸ್ಮಾಧಿಕಾರಸಂಪತ್ತಿಂ ಧಾರಣೇ ಪಾತ್ರಮುಷ್ಯಹೋ ।
ಅಧಿಕಾರಿವಿಭೇದೇನ ಪ್ರವಕ್ಷ್ಯಾಮಿ ನಿಬೋಧ ಮೇ ॥೧॥

ಬ್ರಹ್ಮಚಾರೀ ಗೃಹೀ ವನ್ಯಃ ಸಂನ್ಯಾಸೀ ಮತ್ಪರಾಯಣಃ ।
ಧೃತ್ವಾ ವಾ ಧಾರಯನ್ವಾಪಿ ದೃಷ್ಟ್ವಾ ಸ್ಪೃಷ್ಟ್ವಾಪಿ ತಂ ನರಂ ॥೨॥

ನಿಂದನ್ ಮುದಂ ಪ್ರಪದ್ಯನ್ವಾ ಸದ್ಯೋ ಯಾತಿ ಕೃತಾಕೃತಂ ।
ಧೃತತ್ರಿಪುಂಡ್ರೋ ಯಃ ಕೋ ವಾ ಸ ಏವಾಹಂ ಮುನೇ ಸದಾ ॥೩॥

---

## ಹದಿನಾಲ್ಕನೆಯ ಅಧ್ಯಾಯ

ಪರಶಿವನು ಮತ್ತೆ ಪಾರ್ವತಿಗೆ ಭಸ್ಮಾಧಿಕಾರಿಗಳನ್ನು ವಿವರಿಸತೊಡಗಿದನು. “ ದೇವಿಯೇ, ಈಗ ಭಸ್ಮವನ್ನು ಧರಿಸಲು ಯೋಗ್ಯತೆಯುಳ್ಳವರ ವಿಷಯವನ್ನೂ, ಅವರಲ್ಲಿ ಪರಸ್ಪರ ತರತಮಭಾವವನ್ನೂ ವಿವರಿಸಿ ಹೇಳುವೆನು, ಕೇಳು. ಭಸ್ಮವನ್ನು ಧರಿಸಿದವನು, ಧರಿಸುವಂತೆ ಮಾಡಿದವನು, ಅಥವಾ ಭಸ್ಮಧಾರಿಯನ್ನು ನೋಡಿ ಸಂತೋಷಪಡುವವನು, ಸ್ಪರ್ಶಿಸಿದವನು, ಬ್ರಹ್ಮಚಾರಿಯಾಗಲಿ, ಗೃಹಸ್ಥವಾನಪ್ರಸ್ಥರೇ ಆಗಲಿ, ಸಂನ್ಯಾಸಿಯೇ ಆಗಿರಲಿ, ಅವರು ನನ್ನ ಪ್ರಿಯಭಕ್ತರು. ॥೧-೨॥

ಲೋಕದಲ್ಲಿ ಎಂತಹ ದೂಷಣೆಗೂ, ಸ್ತೋತ್ರಕ್ಕೂ, ಕೃತಾಕೃತವಾದ ಯಾವ ದೋಷಕ್ಕೆ ಸಿಕ್ಕಿದರೂ, ಆತನು ಭಸ್ಮತ್ರಿಪುಂಡ್ರಧಾರಣೆ ಮಾಡಿದ್ದೇ ಆದರೆ, ಆಗ

ಮಾಂ ಯೋ ವೇದ ಸ ವೈ ದೇವ ಮಾಂ ಯೋ ದ್ವೇಷ್ಟಿ ಸ ವೈ ದ್ವಿಜಃ ।
ಭಸ್ಮಸ್ನಾತಂ ನರಂ ದೃಷ್ಟ್ವಾ ಪ್ರಣಮೇನ್ಮಾಂ ಯಥಾ ತಥಾ ॥೪॥

ಭಸ್ಮನಿಷ್ಠಸ್ಯ ದಹ್ಯಂತೇ ದೋಷಾ ಭಸ್ಮಾಗ್ನಿಸಂಗಮಾತ್ ।
ತಸ್ಮಾತ್ಸರ್ವೇಷು ಕಾಲೇಷು ವೀರ್ಯವಾನ್ ಭಸ್ಮಸಂಯುತಃ ॥೫॥

ಅಗ್ನೀಷೋಮಾತ್ಮಕಂ ಚೈವ ಜಗತ್ಸ್ಥಿರಚರಂ ಮುನೇ ।
ತದ್ಯೇನ ಲೇಪಿತಂ ಚಾಂಗೇ ಜಗತ್ತೇನ ಧೃತಂ ಭವೇತ್ ॥೬॥

ಅಗ್ನೀಷೋಮತನುಂ ದೃಷ್ಟ್ವಾ ನ ಸ ಭೂಯೋಽಪಿಜಾಯತೇ ।
ಭಸ್ಮಸ್ನಾನವಿಶುದ್ಧಾತ್ಮಾ ಭಸ್ಮನಿಷ್ಠ ಇತಿ ಸ್ಮೃತಃ ॥೭॥

ಭಸ್ಮಶಾಯೀ ಚ ಪುರುಷೋ ರುದ್ರಾಧ್ಯಾಯೀ ತ್ರಿಪುಂಡ್ರಧೃಕ್ ।
ಭೂತಪ್ರೇತಪಿಶಾಚಾದ್ಯಾ ರೋಗಾಶ್ಚಾತೀವ ದುಃಸಹಾಃ ॥೮॥

---

ಅವನು ನನಗೆ ಸಮನೆನಿಸುವನು. ನನ್ನ ಸ್ವರೂಪವನ್ನು ತಿಳಿದ ದೇವತೆಯಾಗಲಿ, ನನ್ನನ್ನು ನಿಂದಿಸುವ ಬ್ರಾಹ್ಮಣನಾಗಲಿ, ಭಸ್ಮಧಾರಿಯನ್ನು ಕಂಡೊಡನೆ ಅವನಿಗೆ ನಮಸ್ಕರಿಸಿದರೆ, ನನಗೆ ನಮಸ್ಕಾರ ಮಾಡಿದಂತಾಗುವುದು. ॥೩-೪॥

ಭಸ್ಮಧಾರಿಯಾದವನ ಪಾಪಗಳು ಭಸ್ಮಾಗ್ನಿಸಂಗಮದಿಂದ ದಗ್ಧವಾಗುವುವು. ಆದ್ದರಿಂದ ಯಾವಾಗಲೂ ಭಸ್ಮಧಾರಿಯು ವೀರ್ಯವಂತನೆಂದು ತಿಳಿಯಬೇಕು. ಈ ಚರಾಚರಜಗತ್ತು ಅಗ್ನೀಷೋಮಾತ್ಮಕವಾದದ್ದು. ಭಸ್ಮವೂ ಸಹ ಅಗ್ನೀಷೋಮ ಜನ್ಯವೆಂದು ತಿಳಿಯಬೇಕು. ಇಂತಹ ಭಸ್ಮವನ್ನು ಧರಿಸುವುದರಿಂದ ಜಗತ್ತನ್ನೇ ತಾನು ಧರಿಸಿದಂತಾಗುವುದು. ಇದು ನಿಜ. ॥೫-೬॥

ಅಗ್ನೀಷೋಮಾತ್ಮಕವಾದ ದೇಹವನ್ನು ನೋಡಿದವನಿಗೂ ಪುನರ್ಜನ್ಮರಹಿತ ವಾದ ಮುಕ್ತಿಯು ದೊರಕುವುದು. ಭಸ್ಮಸ್ನಾನದಿಂದ ಶುದ್ಧನಾದವನಿಗೆ ಭಸ್ಮನಿಷ್ಠ ನೆಂದು ಹೆಸರು. ಅಂತಹ ಭಸ್ಮನಿಷ್ಠನೂ, ಭಸ್ಮಶಾಯಿಯೂ, ರುದ್ರಾಧ್ಯಾಯವನ್ನು ಪಠಿಸುವವನೂ, ತ್ರಿಪುಂಡ್ರವನ್ನು ಧರಿಸುವವನೂ ಭೂತಪ್ರೇತಪಿಶಾಚಾದಿಗಳಿಗೂ ರೋಗಾದ್ಯುಪದ್ರವಗಳಿಗೂ ಹೆದರಲಾರನು. ಅಂತಹವರೊಡನೆ ಈ ಭೂತಾದಿಗಳು ನಿಲ್ಲಲಾರವು. ಓಡಿಹೋಗುವುವು. ॥೭-೮॥

ಭಸ್ಮನಿಷ್ಠಸ್ಯ ಸಾನ್ನಿಧ್ಯಾದ್ವಿದ್ರವಂತಿ ಯಥಾ ತಥಾ ।
ಭಸ್ಮಪ್ರೀತಿಯುತೋಮರ್ತ್ಯೋ ದುರ್ಲಭೋ ದುರ್ಲಭೋ ಮುನೇ ॥೯॥

ಯತ್ರ ಕುತ್ರ ಸ್ಥಿತಂ ಭಸ್ಮ ಲೇಪಯನ್ ಮುಕ್ತಿಭಾಗ್ಭವೇತ್ ।
ಭಾಸಕಂ ಭಸಿತಂ ಪ್ರೋಕ್ತಂ ಭಸ್ಮಕಲ್ಮಷಭಕ್ಷಣಾತ್ ॥೧೦॥

ಭೂತಿರ್ಭೂತಿಕರೀ ಪ್ರೋಕ್ತಾ ರಕ್ಷಾ ರಕ್ಷಾಕರೀ ಮುನೇ ।
ಕ್ಷರಣಂ ಪಾಪಜಾಲಾನಾಂ ಕ್ಷಾರಮೇತತ್ಪ್ರಗೀಯತೇ ॥೧೧॥

ಭಸ್ಮನಃ ಪಂಚ ನಾಮಾನಿ ಶ್ರುತಿಗೀತಾನಿ ತೇ ಮುನೇ ।
ಉಕ್ತಾನಿ ಮುಕ್ತಿದಾಯೀನಿ ಶ್ರದ್ಧಯೈವಾನಿಶಂ ಮಯಾ ॥೧೨॥

ಭಸ್ಮಸ್ನಾನೇನ ಯಾವಂತಃ ಕಣಾಃ ಸ್ವಾಂಗೇ ಪ್ರತಿಷ್ಠಿತಾಃ ।
ತಾವಂತಶ್ಶಿವಲಿಂಗಾನಿ ತನೌ ಧತ್ತೇ ಮುನೀಶ್ವರ ॥೧೩॥

ಕಣಾನಾಂ ಸಂಖ್ಯಯಾ ತಸ್ಯ ಸದಾ ತತ್ಪಿತರೋಽಖಿಲಾಃ ।
ನರಕಸ್ಥಾ ದಿವಂ ಯಾಂತಿ ದಿವಿಸ್ಥಾ ಮಮ ಲೋಕಗಾಃ ॥೧೪॥

---

ಭಸ್ಮದಲ್ಲಿ ಅತ್ಯಂತ ಪ್ರೀತಿಯಿಟ್ಟಿರುವ ಮಾನವನು ಭೂಲೋಕದಲ್ಲಿ ದುರ್ಲಭನು. ಭಸ್ಮವು ಎಲ್ಲಿದ್ದರೂ ಅದು ಪರಿಶುದ್ಧವಾದುದೇ. ಕಲ್ಮಷವನ್ನೆಲ್ಲಾ ನುಂಗಿ ಸ್ವಯಂಪ್ರಕಾಶಕವಾದ್ದರಿಂದಲೇ ಅದನ್ನು ಭಸಿತವೆನ್ನುವರು. ||೯-೧೦||

ಐಶ್ವರ್ಯಪ್ರದವಾದ್ದರಿಂದ ಭೂತಿಯೆಂದೂ, ಸರ್ವವಿಧದಲ್ಲಿಯೂ ರಕ್ಷಣೆ ಕೊಡುವುದರಿಂದ ಅದನ್ನು ರಕ್ಷಾಕರೀ ಎಂದೂ, ಪಾಪರಾಶಿಯನ್ನು ತೊಳೆಯುವುದರಿಂದ ಕ್ಷಾರವೆಂದೂ, ಹೀಗೆ ಒಟ್ಟು ಭಸ್ಮಕ್ಕೆ ಐದು ಅನ್ವರ್ಥಕನಾಮುಗಳಿರುವುವು. ಈ ನಾಮುಗಳು ಶ್ರುತ್ಯುಕ್ತವಾಗಿವೆ. ಅಲ್ಲದೆ ಇವು ಮುಕ್ತಿಪ್ರದಗಳೆಂದು ನಾನೇ ಅನೇಕ ಸಾರಿಹೇಳಿದ್ದೇನೆ. ||೧೧-೧೨||

ಭಸ್ಮಸ್ನಾನಕಾಲದಲ್ಲಿ ಎಷ್ಟು ವಿಭೂತಿಯ ಕಣಗಳು ಶರೀರಕ್ಕೆ ಅಂಟಿಕೊಂಡಿರುತ್ತವೆಯೋ ಅಷ್ಟು ಶಿವಲಿಂಗಗಳು ಆವನ ದೇಹದಲ್ಲಿದ್ದಂತಾಗುವುದು. ಅಷ್ಟು ಜನ ಇವನ ಪಿತೃಗಳು ನರಕದಿಂದ ಸ್ವರ್ಗಕ್ಕೆ ಹೋಗುವರು. ಸ್ವರ್ಗದಲ್ಲಿದ್ದವರು ನನ್ನ ಕೈಲಾಸಕ್ಕೆ ಬರುವರು. ಈ ಭಸ್ಮಧಾರಣೆಗೆ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ, ಸಂಕರರು, ಸ್ತ್ರೀಯರು, ವಿಧವೆಯರು, ಬಾಲಿಕೆಯರು, ಜಾತಿಭ್ರಷ್ಟರು,

ಅಧಿಕಾರಿವಿಧಿಂ ಚಾಪಿ ಮನಃ ಸಮವಧಾರಯ ।
ಬ್ರಾಹ್ಮಣಃ ಕ್ಷತ್ರಿಯೋವೈಶ್ಯಃ ಶೂದ್ರೋವಾಪಿ ಚ ಸಂಕರಃ ॥೧೫॥

ಸ್ತ್ರಿಯೋಥ ವಿಧವಾ ಬಾಲಾ ವ್ರಾತ್ಯಾ ಪಾಷಂಡಿನಸ್ತಥಾ।
ಬ್ರಹ್ಮಚಾರೀ ಗೃಹೀ ವಿಪ್ರ ಸಂನ್ಯಾಸೀ ವಾ ವ್ರತೀ ತಥಾ ॥೧೬॥

ತಿರ್ಯಗ್ಭಸ್ಮತ್ರಿಪುಂಡ್ರಾಂಕೋ ಮುಕ್ತ ಏವ ನ ಸಂಶಯಃ ।
ವಿಧಿಂ ಕಾಲಂ ಚಾಧಿಕಾರೀ ಧಾರಣೇತ್ಯಾಜನೇ ಮುನೇ ॥೧೭॥

ಫಲಾಫಲಂ ಪ್ರವಕ್ಷ್ಯಾಮಿ ಶೃಣುಷ್ವೈಕಮನಾ ಮುನೇ ।
ಯಚ್ಛ್ರುತ್ವಾ ಮಹದಾಪ್ನೋತಿ ಪುಣ್ಯಂ ಮತ್ಪದಭಾವನಃ ॥೧೮॥

ಯತ್ಕೃತೇನ ಕೃತಂ ಸರ್ವಂ ಜ್ಞಾತ್ವಾ ಸ್ನಾಯೀತ ಭಸ್ಮನಾ ।
ಜ್ಞಾನಾಜ್ಞಾನಧೃತೋ ವಾಪಿ ವಹ್ನಿರ್ದಾಹೇ ಸಮೋಯಥಾ ॥೧೯॥

ಜ್ಞಾನಾಜ್ಞಾನಧೃತಂ ಭಸ್ಮ ಪಾವಯೇತ್ಪಾವನಂ ಪರಂ ।
ಪುರಾ ಕೈಲಾಸಶಿಖರೇ ದೇವ್ಯೈ ಪ್ರೋಕ್ತೋ ಮಯಾ ವಿಧಿಃ ॥೨೦॥

---

ನಾಸ್ತಿಕರು, ಬ್ರಹ್ಮಚಾರಿ, ಗೃಹಸ್ಥ, ವಿಪ್ರ, ಸಂನ್ಯಾಸೀ, ವ್ರತಿ ಇವರೆಲ್ಲರೂ ಅಧಿಕಾರಿಗಳೇ. ಅಡ್ಡಲಾಗಿ ಭಸ್ಮತ್ರಿಪುಂಡ್ರವನ್ನಿಟ್ಟವನಿಗೆ ಸಾಕ್ಷನ್ಮುಕ್ತಿಯೇ ಸಂಭವಿಸುವುದರಲ್ಲಿ ಅನುಮಾನವಿಲ್ಲ. ॥೧೩-೧೪-೧೫-೧೬॥

ಎಲೈ ಮಂಕಣಮುನಿಯೇ, ಈ ಭಸ್ಮಧಾರಣೆಯ ವಿಧಿ, ಕಾಲ, ಅಧಿಕಾರಿ ಎಂಬುದು ಜನಸಾಮಾನ್ಯಕ್ಕೂ ಉಂಟು. ಆದರೆ ಇವುಗಳನ್ನನುಸರಿಸಿ ಮಾಡಿದ ಭಸ್ಮಧಾರಣೆಗೆ ವಿಶೇಷಫಲವೂ, ಅನಿಯತವಾದ ಭಸ್ಮಧಾರಣೆಗೆ ಫಲಶೂನ್ಯತೆಯೂ ಉಂಟು. ಅದನ್ನು ಈಗ ನಿನಗೆ ಹೇಳುವೆನು ಕೇಳು. ಇದನ್ನು ಕೇಳುವುದರಿಂದ ಮಹತ್ತಾದ ಪುಣ್ಯವು ಲಭಿಸುವುದರಲ್ಲಿ ಸಂಶಯವಿಲ್ಲ. ವಿಧಿಯನ್ನನುಸರಿಸಿ ಭಸ್ಮಸ್ನಾನ ಮಾಡುವವನಿಗೂ, ತಿಳಿದೋ ತಿಳಿಯದೆಯೋ ಭಸ್ಮಧಾರಣೆ ಮಾಡಿಕೊಳ್ಳುವವನಿಗೂ ಭಸ್ಮವು ಪರಮಪದಕೊಡುವುದೆಂಬುದರಲ್ಲಿ ಅನುಮಾನವಿಲ್ಲ. ಇದೇ ವಿಷಯವನ್ನೇ ಹಿಂದೆ ನಾನು ಕೈಲಾಸದಲ್ಲಿ ಪಾರ್ವತಿಗೆ ತಿಳಿಸಿರುವೆನು. ॥೧೭-೧೮-೧೯-೨೦॥

ತತ್ತ್ವೇದ್ಯ ಕಥಯಿಷ್ಯಾಮಿ ತ್ವಂ ಮೇ ಶಿಷ್ಯೋ ವಿಶೇಷತಃ ।
ಶೃಣ್ವೇಭಿಃ ಸುರವೃಂದೈಶ್ಚ ಮದ್ಗಣೈರ್ಮುನಿಭಿಸ್ಸಹ ॥೨೧॥

ನಿಸ್ಸಂಶಯೋ ವಿಧಿರಯಂ ಸರ್ವೇಷಾಂ ಸರ್ವದಾ ಮುನೇ ।
ಸರ್ವಪಾಪಪ್ರಶಮನಂ ಸರ್ವಪುಣ್ಯವಿವರ್ಧನಂ ॥೨೨॥

ನ ಸ್ನಾನಶೌಚಾಚಮನಕ್ರಿಯಾಭಿಃ
ಶುದ್ಧ್ಯೋ ನ ವಿಧ್ಯಾಪಿ ಕೃತಾಕೃತೇ ಹಿ ।
ಭಸ್ಮತ್ರಿಪುಂಡ್ರೋಜ್ಝಿತಫಾಲಗಾತ್ರಃ
ಪಾತ್ರಂ ನ ಸಾಮುಷ್ಮಿಕಪುಣ್ಯಹೇತೌ ॥೨೩॥

ಸ್ನಾನೈಃ ಪಂಚದ್ವಯಾದ್ಯೈರಪಿ ನ ಸ ವೈ ಶುದ್ಧ್ಯತೇ ಮಾನಸೈವ
ಆಗ್ನೇಯೇನ ಸ ನಗ್ನಕೋಪಿ ನ ಭವೇನ್ಮಗ್ನೋ ಮಹಾಪಾತಕೇ ।
ಸಂಧ್ಯಾಧ್ಯಾನ ಮದರ್ಚನ ಸ್ತುತಿಕಥಾಮನ್ತ್ರಾಗ್ನಿವಿಧ್ಯಾದಿಕೇ
ಭಸ್ಮಾಭ್ಯಕ್ತತನುರ್ಧುನೋತಿ ಸಕಲಂ ಪಾಪಂ ತ್ರಿಪುಂಡ್ರಾಂಕಧೃಕ್ ॥೨೪॥

---

ಮಂಕಣಮಹಾಮುನಿಯೇ, ನೀನು ನನ್ನ ವಿಶೇಷ ಪ್ರೀತಿಪಾತ್ರನಾದ ಭಕ್ತನು. ನಿನಗೂ ಆ ವಿಧಿಯನ್ನು ಈಗ ಹೇಳುವೆನು ಕೇಳು. ಇಲ್ಲಿರುವ ಸಕಲ ದೇವತೆಗಳೂ ನನ್ನ ಪ್ರಮಥಗಣಗಳೂ ಕೇಳಲಿ. ಒಟ್ಟಿನಲ್ಲಿ ಈ ವ್ರತವಿಧಿಯು ಸರ್ವಪಾಪವಿನಾಶಕವಾದದ್ದು ಮತ್ತು ಪುಣ್ಯವಿವರ್ಧಕವಾದದ್ದು. ॥೨೧-೨೨॥

ಸ್ನಾನವೇ ಮೊದಲಾದ ಯಾವ ಶುಚಿಕರ್ಮದಿಂದಲೂ ಕೃತಾಕೃತವಾದ ಮತ್ತಾವ ವೈದಿಕಕರ್ಮದಿಂದಲೂ ಮಾನವನು ಶುದ್ಧನೆನಿಸುವುದಿಲ್ಲ. ಭಸ್ಮತ್ರಿಪುಂಡ್ರ ವಿರಹಿತವಾದ ಹಣೆಯುಳ್ಳವನಿಗೆ ಎಂದೂ ಆಮುಷ್ಮಿಕ ವೆನಿಸಿದ ಸುಖಪ್ರದವಾದ ಪುಣ್ಯಪ್ರಾಪ್ತಿಯು ಲಭಿಸಲಾರದು. ॥೨೩॥

ದಶಸಂಖ್ಯಾಯುಕ್ತವಾದ ಅನೇಕ ಸ್ನಾನಗಳಿಂದಲೂ ಮಾನಸಿಕವಾದ ಯಾವ ಧ್ಯಾನದಿಂದಲೂ ಅವಧೂತತ್ವವೇ ಮೊದಲಾದ ಯಾವ ಕ್ರಿಯೆಯಿಂದಲೂ, ಪಾಪ ರಾಶಿಯಲ್ಲಿ ಮುಳುಗಿದವನು ಉದ್ಧಾರವಾಗಲಾರನು. ಸಂಧ್ಯಾಕಾಲದಲ್ಲಿ ನನ್ನನ್ನು ಧ್ಯಾನಿಸುವುದು, ಅರ್ಚಿಸುವುದು, ಸ್ತುತಿಸುವುದು, ಶಿವಕಥಾಶ್ರವಣಮಾಡುವುದು, ಇಂತಹ ಕರ್ಮಗಳನ್ನು ನಡೆಸುತ್ತಾ ಭಸ್ಮಲಿಪ್ತವಾದ ದೇಹವುಳ್ಳವನಾಗಿ, ತ್ರಿಪುಂಡ್ರ

ಸಂಧ್ಯಾಹೋಮಜಪಾರ್ಚನೇ ಪಿತೃವಿಧೌ ತೀರ್ಥೇ ಸದಾ ತರ್ಪಣೇ
ಶ್ರೀರುದ್ರಾವೃತಿ ಪಂಚವರ್ಣಕಮನೋರ್ಜಾಪ್ಯೇ ಸ ಏವೋತ್ತಮಃ ।
ತತ್ತ್ಯಕ್ತ್ವಾ ಸಕಲಂ ಬಲೇನ ಕಲಯನ್ ನೈವಾಪ್ನುಯಾತ್ತತ್ಫಲಂ
ತಸ್ಮಾತ್ಸ್ವತ್ಯವಪ್ರಚ್ಛನ್ನೈತಿ ಸ ಶಿವೇ ಮನ್ಯೇ ವಹನ್ಯಾಮಿ ತಂ ॥೨೫॥

ಯೋ ನಂದನೈಶ್ಚಂದನಕೇಪಿ ಮಿಶ್ರಂ
ಧಾರ್ಯಂ ಹಿ ಭಸ್ಮೈವ ತ್ರಿಪುಂಡ್ರಭಸ್ಮನಾ ।
ನ ಭೂತಿಫಾಲೋಪರಿ ಕಿಂಚನಾದ್ರಿಜೇ
ಧಾರ್ಯಂ ಸದಾ ನೋಪದಿಶಂತಿ ಬುದ್ಧಯಃ ॥೨೬॥

ಸ್ತ್ರೀಭಿಸ್ತ್ರಿಪುಂಡ್ರಮಲಿಕಾವಧಿ ಧಾರಣೀಯಂ
ಸತ್ಕುಂಕುಮಾಂಕಿತ ಲಸತ್ತಿಲಕಂ ತತೋಧಃ ।
ಧಾರ್ಯಂ ಕುಮಾರೀಭಿರಥೈವ ಮೇವಂ
ಭಸ್ಮದ್ವಿಜಾದಿಭಿರುಮೇ ವಿಧವಾಭಿರೇವಂ ॥೨೭॥

---

ಧಾರಿಯಾದರೆ ಆಗ ಅವನ ಸಮಸ್ತ ಪಾಪರಾಶಿಯೂ ನಷ್ಟವಾಗುವುದು. ಇದರಲ್ಲಿ ಅನುಮಾನವಿಲ್ಲ. ॥೨೪॥

ಸಂಧ್ಯಾವಂದನೆ, ಹೋಮ, ಜಪ, ಆರಾಧನೆ, ಪಿತೃಶ್ರಾದ್ಧ, ತೀರ್ಥಯಾತ್ರೆ. ತರ್ಪಣ, ರುದ್ರಪಾರಾಯಣ, ಪಂಚಾಕ್ಷರೀಜಪ ಮುಂತಾದ ಯಾವ ಕರ್ಮಾಚರಣೆ ಯಾದರೂ ಭಸ್ಮತ್ರಿಪುಂಡ್ರಧಾರಣಪುರಸ್ಸರವಾಗಿ ನಡೆದರೇ ಅದರಿಂದ ಫಲವು ಸಿದ್ಧಿಸುವುದು. ಭಸ್ಮಧಾರಣೆಯಿಲ್ಲದೆ ನಡೆಸಿದ ಸಕಲ ಕರ್ಮಗಳೂ ವ್ಯರ್ಥವೆನಿಸು ವುವು. ಅಲ್ಲದೆ ಭಸ್ಮಧಾರಣೆಯಿಂದ ನಡೆಸುವ ಆ ಕರ್ಮಫಲವನ್ನೆಲ್ಲಾ ನಾನೇ ಹೊಂದಿ ಅಂತಹವರಿಗೆ ಸದಾನಂದವನ್ನು ಅನುಗ್ರಹಿಸುವೆನು. ॥೨೫॥

ಹಣೆಗೆ ಶ್ರೀಗಂಧವನ್ನಿಡಬೇಕಾದರೂ ಭಸ್ಮತ್ರಿಪುಂಡ್ರಸಹಿತವಾಗಿಯೇ ಧರಿಸಿಕೊಳ್ಳಬೇಕು. ಆದರೆ ವಿಭೂತಿಯಿಂದ ಕೂಡಿದ ಹಣೆಗೆ ಮತ್ತಾವ ಲಾಂಛನ ವನ್ನೂ ಧರಿಸಲೇಬೇಕಿಲ್ಲ. ಹೀಗೆ ಧರಿಸಬೇಕೆಂದು ಯಾವ ಬುದ್ಧಿಶಾಲಿಗಳೂ ಉಪದೇಶಿಸಲಾರರು. ॥೨೬॥

ಸ್ತ್ರೀಯರು ತಮ್ಮ ಹಣೆಯಮೇಲೆ ಮುಂಗೂದಲಿನ ಪರ್ಯಂತ ವಿಭೂತಿ ತ್ರಿಪುಂಡ್ರವನ್ನಿಟ್ಟು ಅದರ ಕೆಳಗೆ ಕುಂಕುಮದ ತಿಲಕವನ್ನಿಡಬೇಕು. ಅದೇ

ರೇಖಾಸಂಸೃಷ್ಟಿರೀಶೇ ತ್ವಘಕರಮಥವಾಯುಷ್ಯನಾಶಂ ವಿಧತ್ತೇ
ಭೀತಿಂ ಭ್ರೂಯುಗಲಾಧಿಕಂ ವಿಧಿಕೃತಂ ಭಸ್ಮತ್ರಿಪುಂಡ್ರಂ ಪರಂ।
ತಸ್ಮಾದ್ರೇಖಾತ್ರಯಾಖ್ಯಂ ವಿರಚಿತವಿರಲಂ ಕಲ್ಪನೀಯಂ ತತೋಽಧೋ
ದೇಯಂ ವೈ ತಿಲಕಂ ಸದೈವ ಭಸಿತಾಲಂಕಾರಪಾಪೌಘಹೃತ್ ॥೨೮॥

ಶ್ರಾದ್ಧಶ್ರದ್ಧೋಽಪಿ ಮರ್ತ್ಯೋ ಭಸಿತಸಿತತನುರ್ಯಸ್ತ್ರಿಪುಂಡ್ರಂ ಚ ತಿರ್ಯಕ್
ಕೃತ್ವಾ ದರ್ಶೇಽಪಿತೄನ್ಯಃ ಪ್ರಮುದಿತಮನಸಾ ಭೋಜಯೇತ್ತರ್ಪಯೇದ್ವಾ।
ಭಸ್ಮಾಭ್ಯಕ್ತಾಂಶ್ಚ ವಿಪ್ರಾನ್ ಶ್ರುತಿವರವದನಾನ್ ಶಂಭುಪಾದಾಬ್ಜಭಕ್ತಾ
ನೇಕಂ ಭೋಜ್ಯಂ ಪ್ರಮುಕ್ತ್ಯೈ ಪಿತೄಣಾಂ ದಿಶಿ ವಿಧಿವಶಾತ್ತೇನ ದತ್ತಂ
ಮುದೇವೈ ॥೨೯॥

---

ರೀತಿ ಎಲ್ಲ ವಯಸ್ಸಿನ ಹೆಣ್ಣುಮಕ್ಕಳೂ ಭಸ್ಮವನ್ನು ಧರಿಸಬಹುದು. ಆದರೆ ದ್ವಿಜರೆನಿಸಿದ ವಿಧವೆಯರು ಮಾತ್ರ ಕೇವಲ ಭಸ್ಮವನ್ನೇ ಹಣೆಯಲ್ಲಿಟ್ಟುಕೊಳ್ಳಬೇಕು. ॥೨೭॥

ಮೂರು ಎಳೆಯಾಗಿ ಇಡುವ ಭಸ್ಮತ್ರಿಪುಂಡ್ರದಲ್ಲಿ ರೇಖೆಗಳು ಒಂದಕ್ಕೊಂದು ಕಲಸಿಹೋದರೆ ಆಗ ಪಾಪವು ಸಂಘಟಿಸುವುದು, ಆಯುಃಸ್ಸು ನಾಶವಾಗುವುದು. ಅದೇ ರೇಖೆಗಳು ಎರಡು ಹುಬ್ಬುಗಳಿಗಿಂತ ಮೇಲೆಯೋ ಅಥವಾ ಕೆಳಭಾಗಕ್ಕೋ ಬರಕೂಡದು. ಹಾಗೆ ಬಂದರೆ ಭೀತಿಯು ಅಧಿಕವಾಗುವುದು. ಆದ್ದರಿಂದ ವಿಧಿವತ್ತಾಗಿ ಭಸ್ಮವನ್ನು ಧರಿಸುವವರು ಮೂರು ಭಸ್ಮರೇಖೆಗಳು ವಿರಳವಾಗಿರುವಂತೆಯೂ, ಭ್ರೂರೇಖೆಗಳನ್ನು ಮೀರದಂತೆಯೂ ಧರಿಸಿಕೊಳ್ಳಬೇಕು. ಅದರ ಕೆಳಭಾಗದಲ್ಲಿ ತಿಲಕವನ್ನಿಡಬಹುದು. ಈ ವಿಧವಾದ ಭಸಿತಾಲಂಕಾರದಿಂಧ ಸಮಸ್ತ ಪಾಪವೂ ನಾಶವಾಗುವುದು. ॥೨೮॥

ಶ್ರದ್ಧೆಯಿಂದ ಪಿತೃಶ್ರಾದ್ಧಮಾಡುವವನೂ, ಅಮಾವಾಸ್ಯೆಯ ದಿನ ಪಿತೃತರ್ಪಣಮಾಡುವವನೂ, ಭಸ್ಮತ್ರಿಪುಂಡ್ರವನ್ನು ಧರಿಸಿಯೇ ಆ ಕರ್ಮಗಳನ್ನು ನಡೆಸಬೇಕು. ಶ್ರಾದ್ಧಕ್ಕೆ ಆಹೂತರಾದವರು ಭಸ್ಮತ್ರಿಪುಂಡ್ರಧಾರಿಗಳಾಗಿ, ವೇದಮಂತ್ರಪಾಠಕರೂ, ಶಿವಪೂಜಾಸಕ್ತರಾದವರೂ ಆಗಿರಬೇಕು. ಹೀಗೆ ಶ್ರಾದ್ಧಕರ್ತನೂ, ಭೋಕ್ತೃವೂ ಭಸ್ಮಧಾರಿಗಳಾಗಿ ಕರ್ಮ ನಡೆಸಿದರೆ, ಆಗ ಆಯಾ ಪಿತೃಗಳಿಗೆ ಸುಖಭೋಜನವೂ, ಮೋಕ್ಷವೂ (ಆನಂದವೂ) ಲಭಿಸುವುವು. ॥೨೯॥

ಭಸ್ಮೋದ್ಧೂಲನವರ್ಜಿತಂ ಯದಿ ಕೃತಂ ಭೋಕ್ತುಶ್ಚ ಕರ್ತುಸ್ಸದಾ
ತದ್ವಂಶ್ಯಾಃ ಪಿತರೋಽಪ್ಯವಶ್ಯಮುಗಜೇ ಪ್ರೇತತ್ವಹೀನಾ ನ ವೈ ।
ತಚ್ಛ್ರಾದ್ಧಂ ವಿಧಿತಃ ಕೃತಂ ಚ ಸುಕೃತಂ ನೈವೇತಿ ಪಾಪೋತ್ತರಂ
ತದ್ದತ್ತತ್ತಿಪನಿವಾಪಪಿಂಡಪ್ರದ (?)ನಂ ತನ್ಮಾಂಸವಿಷ್ಠೋಪಮಂ ॥೩೦॥

ತತ್ಪೂರ್ವೇಣ ಮುಖೇ ವಿಲಿಂಪತಿ ಶಿವೇ ಘೋರೇಣ ವಕ್ಷಃಸ್ಥಲೇ
ವಾಮೇನೈವ ಸದಾ ಸ್ವಬಾಹುಯುಗಳಂ ಸದ್ಯೇನ ಸರ್ವಾಂಗಕಂ ।
ಈಶಾನೇನ ಶಿರಸ್ಯಪಿ ಪ್ರವಿಕಿರೇದ್ಭಸ್ಮಾದಿಧೂಲಕ್ರಮಃ ॥೩೧॥

ತ್ರಿಯಾಯುಷಮನುಪ್ರಭಾ ಭಸಿತಫಾಲಪುಂಡ್ರೋಜ್ಜ್ವಲೋ
ಜ್ವಲಚ್ಛಿಖಿಶಿಖೋಪಮೋ ಭವತಿ ಭೂತಿಪೂತೋ ದ್ವಿಜಃ ।
ವನೀ ಚ ಸತತಂ ಶಿವೇ ಸುವಿಹಿತೋಽಪಿ ವರ್ಣೀ ಕ್ರಮಾತ್
ತ್ರಿಯಂಬಕಮನುಪ್ರಭಾಭಸಿತಫಾಲಪುಂಡ್ರಾಂಕಧೃಕ್ ॥೩೨॥

---

ಶ್ರಾದ್ಧದಲ್ಲಿ ಕರ್ತೃವಾಗಲಿ, ಭೋಕ್ತೃವಾಗಲಿ ಭಸ್ಮತ್ರಿಪುಂಡ್ರವಿರಹಿತನಾಗಿದ್ದರೆ, ಆ ಶ್ರಾದ್ಧವು ವ್ಯರ್ಥವೆನಿಸುವುದು. ಅವನ ಪಿತೃಗಳಿಗೆ ಪ್ರೇತತ್ವವು ತಪ್ಪುವುದಿಲ್ಲ. ಶ್ರಾದ್ಧಾಚರಣೆಯ ಪ್ರಯುಕ್ತ ಬರುವ ಸುಕೃತವು ಅವರಿಗೆ ಲಭಿಸಲಾರದು. ಆ ಕರ್ತೃವಿನಿಂದ ಪಿತೃಗಳಿಗೆ ಕೊಡಲ್ಪಡುವ ತರ್ಪಣೋದಕ, ಪಿಂಡಪ್ರದಾನ ಇವೆಲ್ಲವೂ ಮಾಂಸ, ಅಮೇಧ್ಯ ಇವುಗಳಿಗೆ ಸಮನೆನಿಸುವುವು. ॥೩೦॥

'ತತ್ಪುರುಷಾಯ' ಎಂಬ ಮಂತ್ರದಿಂದ ಹಣೆಗೂ, 'ಅಘೋರೇಭ್ಯಃ' ಎಂಬ ಮಂತ್ರದಿಂದ ಎದೆಗೂ, 'ವಾಮದೇವಾಯನಮಃ' ಎಂಬ ಮಂತ್ರದಿಂದ ಎರಡು ಭುಜಗಳಿಗೂ, 'ಸದ್ಯೋಜಾತಂ' ಎಂಬ ಮಂತ್ರದಿಂದ ಸರ್ವಾಂಗಕ್ಕೂ, 'ಈಶಾನಸ್ಸರ್ವವಿದ್ಯಾನಾಂ' ಎಂಬ ಮಂತ್ರದಿಂದ ಶಿರಸ್ಸಿಗೂ ಭಸ್ಮದ ದೂಳನ್ನು ಲೇಪಿಸಿಕೊಳ್ಳಬೇಕು. ॥೩೧॥

ಗೃಹಸ್ಥನಾದ ದ್ವಿಜನು 'ತ್ರ್ಯಾಯುಷಂ' ಎಂಬ ಮಂತ್ರೋಚ್ಚಾರಣೆಯಿಂದ ಭಸ್ಮತ್ರಿಪುಂಡ್ರವನ್ನು ಹಣೆಗೆ ಧರಿಸಬೇಕು. ಇದರಿಂದ ಉರಿಯುವ ಅಗ್ನಿಯಂತೆ ತೇಜಶ್ಶಾಲಿಯಾಗುವನು. ಹಾಗೆಯೇ ವಾನಪ್ರಸ್ಥಾಶ್ರಮಿಯೂ, ಬ್ರಹ್ಮಚಾರಿಯೂ, 'ತ್ರ್ಯಂಬಕಂಯಜಾಮಹೆ' ಎಂಬ ಮಂತ್ರಪೂರ್ವಕವಾಗಿ ಭಸ್ಮಧಾರಣೆಮಾಡಿ ತೇಜಸ್ವಿಗಳೆನಿಸುವರು. ॥೩೨॥

ಪ್ರಣವಪ್ರವಣೋಥ ಮಸ್ಕರೀ
ಸ್ವಕಪಾಪಾನಿ ತಿರಸ್ಕರೋತ್ಯಪಿ ।
ಭಸಿತಂ ಸಿತಮೇವ ತೇನ ಧೃತ್ವಾ
ಪ್ಯವಗುಂಠ್ಯೇವ ತ್ರಿಪುಂಡ್ರಧೃಗ್ಭವೇತ್ ॥೩೩॥

ಫಾಲೇ ಶಿರೋ ಜನಿತಪಾಪತತಿಂ ನಿಹಂತಿ
ವಕ್ಷೋ ಧೃತಂ ಚ ಪರತಲ್ಪಗಸಂಗಭಂಗಂ ।
ಬಾಹ್ವೋರ್ಧೃತಂ ಭಸಿತಮೇವ ಹಿ ತತ್ಕೃತಾಘಂ
ಸರ್ವಾಂಗಲೇಪಿತಮುಮೇ ಸಕಲಂ ಹಿ ಹನ್ಯಾತ್ ॥೩೪॥

ಕೀಲಾಲಂ ವಿಮಲಂ ವಿಭೂತಿಜನಿತಂ ಹಸ್ತೋಜ್ಝಿತಂ ತತ್ಪಿಬೇತ್
ನಾಧೋ ತ್ಯಾಜ್ಯಮಿದಂ ಸದಾ ತ್ರಿಪುಂಡ್ರರಚಿತಂ ಉಚ್ಛೋಷಣಂ
ಶೋಷಣಂ ।
ಪಾಪಾನಾಂ ಭವತೀ ಭವಾನಿ ಸತತಂ ಆಪಃ ಪುನಂತ್ವಿತ್ಯಮುಂ
ಮಂತ್ರೈಃ ಪಾತ್ರತಮಂ ದ್ವಿಜಂ ಕರೋತಿ ಸುಹಿತಂ ತ್ವೇತತ್ತ್ರಿನೇತ್ರಪ್ರಿಯಂ
॥೩೫॥

---

ಸಂನ್ಯಾಸಿಯು ಪ್ರಣವಮಂತ್ರಜಪದಿಂದ ತನ್ನ ಪಾಪರಾಶಿಯನ್ನೆಲ್ಲಾ ಕಳೆದು ಕೊಳ್ಳಬೇಕಾದರೂ, ಆತನು ಶುಭ್ರವಾದ ಭಸ್ಮದಿಂದ ತ್ರಿಪುಂಡ್ರಧಾರಣೆಮಾಡಿ ಕೊಳ್ಳಲೇಬೇಕು. ಅದೇ ಸಂನ್ಯಾಸಿಗೆ ಜ್ಞಾನಾವರಣವೆನಿಸುವುದು. ॥೩೩॥

ಹಣೆಗೆ ವಿಭೂತಿಯನ್ನಿಡುವುದರಿಂದ ಶಿರಃಕೃತವಾದ ಪಾಪವೆಲ್ಲಾ ನಿರ್ಮೂಲ ವಾಗುವುದು. ಎದೆಗೆ ಭಸ್ಮವಿಡುವುದರಿಂದ ಪರಸ್ತ್ರೀಸಂಗದ ಪಾಪವೂ, ತೋಳುಗಳಿಗೆ ವಿಭೂತಿಧರಿಸುವುದರಿಂದ ಬಾಹುಕೃತದೋಷವೂ ಸರ್ವಾಂಗಭಸ್ಮಧಾರಣೆಯಿಂದ ಸಕಲ ಪಾಪವೂ ನಾಶವೈದುವುದು. ॥೩೪॥

ದೇವಿಯೇ, ಭಸ್ಮತ್ರಿಪುಂಡ್ರವನ್ನು ಧರಿಸಿದ ಅನಂತರ ಕೈಯಲ್ಲಿ ವಿಭೂತಿ ಸಹಿತವಾದ ನೀರನ್ನು 'ಆಪಃಪುನಂತು ಪೃಥಿವೀಂ' ಎಂಬ ಮಂತ್ರಪೂರ್ವಕವಾಗಿ ಪಾನಮಾಡಬೇಕು. ಅದು ಪಾಪನಾಶಕರವಾದುದು. ಅದನ್ನು ಕೆಳಕ್ಕೆ ಚೆಲ್ಲಬಾರದು. ಅದರಪಾನದಿಂದ ಬ್ರಾಹ್ಮಣನು ಸಕಲಕರ್ಮಗಳಿಗೂ ಪಾತ್ರನೆನಿಸುವನು. ಮತ್ತು (ನನ್ನ) ಈಶ್ವರನ ಪ್ರೀತಿಗೆ ಪಾತ್ರನೆನಿಸುವನು. ॥೩೫॥

ಕಾಲತ್ರಯೇಽಪಿ ನಿಶಿ ಧಾರ್ಯಮುಮೇ ತ್ರಿಪುಂಡ್ರಂ
ಕೇಚಿನ್ನಿಶಾಸು ಪರಿಧೂಲನಮಾಮನಂತಿ ।
ತನ್ನ ಪ್ರಶಸ್ತಮಿದಮೇವ ಸದಾ ವಿಧೇಯಂ
ಧಾರ್ಯಂ ತ್ರಿಪುಂಡ್ರಮಖಿಲೈರ್ಮಮ ಶಾಸನಂ ಹಿ ॥೩೬॥

ದೃಷ್ಟಾದೃಷ್ಟಕರಂ ಸದಾ ಧೃತಮುಮೇ ದೃಷ್ಟಾ ತ್ವಶ್ಯರಿಷ್ಟಂಮುದಾ ।
ಧಾರ್ಯಂ ಭಸ್ಮಸಮಂತ್ರಕಂ ಪ್ರವಿಲಯಂ ದುಃಸ್ವಪ್ನಮೇವ ವ್ರಜೇತ್ ।
ಸ್ಪೃಷ್ಟಾಸ್ಪೃಷ್ಟಿವಿನಿಂದ್ಯ ವಿಪ್ರಿಯ ಮಹಾಪಾಪಾಂತ್ಯಜಸ್ಪರ್ಶನಂ ।
ಸದ್ಯೋ ಹೃದ್ಯತಮಂ ಭವೇತ ಭಸಿತಂ ಪಾಪೌಘತಾಪೌಘಭಿತ್ ॥೩೭॥

ಪರ್ವಸ್ವಪ್ಯವಿಶೇಷತೋ ದ್ವಿಜವರ್ಯೈರ್ಧಾರ್ಯಂ ತ್ರಿಪುಂಡ್ರಾತ್ಮನಾ ।
ನಿತ್ಯಾದಪ್ಯಧಿಕಂ ಫಲಂ ಲಭೇತ ಸ ಶಿವೇ ಪೂರ್ಣೇಂದುಸೂರ್ಯಗ್ರಹೇ ।
ಸಂಕ್ರಾಂತಾವಯನದ್ವಯೇಽಪಿ ಚ ಸದಾ ಪಾತೇ ಸ ಪಾಪೌಘಭಿತ್ ।
ಭೂಯೋ ದೇವ ಸಪುಣ್ಯಪುಣ್ಯಪರಮಾನಂದೈಕವೇದ್ಯೈಕಭೂಃ ॥೩೮॥

---

ತ್ರಿಕಾಲಗಳಲ್ಲಿಯೂ, ಅರ್ಧರಾತ್ರಿಯಲ್ಲಿಯೂ ಭಸ್ಮತ್ರಿಪುಂಡ್ರವನ್ನೇ ಧರಿಸಬೇಕು. ಕೆಲವರು ರಾತ್ರಿಯಹೊತ್ತಿನಲ್ಲಿ ವಿಭೂತಿಯನ್ನು ನೀರಿನಲ್ಲಿ ಕಲಸದೆ ಕೇವಲ ದೂಳನ್ನೇ ಹಚ್ಚಿಕೊಳ್ಳುವರು. ಅದು ತಪ್ಪು. ಸರ್ವದಾ ಭಸ್ಮತ್ರಿಪುಂಡ್ರವನ್ನೇ ಧರಿಸಬೇಕು. ಇದು ನನ್ನ ಕಟ್ಟಪ್ಪಣೆ. ॥೩೬॥

ಭಸ್ಮಧಾರಣೆಯಿಂದ, ದೃಷ್ಟವಾದ ಮತ್ತು ಅದೃಷ್ಟವಾಗಿ ಬರುವ ಸಕಲ ಅನಿಷ್ಟಗಳೂ ಪರಿಹಾರವಾಗುವುವು. ಸಮಂತ್ರಕವಾಗಿ ಧರಿಸಿದ ಭಸ್ಮಧಾರಣೆಯಿಂದ ದುಃಸ್ವಪ್ನದ ಕೆಟ್ಟಫಲವೂ, ಸ್ಪರ್ಶಾದಿಗಳ ದೋಷವೂ, ಚಂಡಾಲಾದಿ ಸಂಸರ್ಗ ಪಾಪವೂ ಕೂಡಲೇ ನಾಶವಾಗುವುದು. ಅಲ್ಲದೆ ಭಸ್ಮಧಾರಣೆಯಾದೊಡನೆಯೇ ಸದ್ಯಃ ಆಹ್ಲಾದವೂ, ಮಂಗಳವೂ ಲಭಿಸುವುದರಲ್ಲಿ ಸಂಶಯವಿಲ್ಲ. ॥೩೭॥

ಬ್ರಾಹ್ಮಣರು ಸರ್ವಕಾಲಗಳಲ್ಲಿಯೂ ವಿಶೇಷವಾಗಿ ತ್ರಿಪುಂಡ್ರಾಕಾರದಲ್ಲಿ ಭಸ್ಮವನ್ನು ಧರಿಸಬೇಕು. ಸೂರ್ಯಚಂದ್ರರ ಪೂರ್ಣಗ್ರಹಣಕಾಲದಲ್ಲಿ, ಭಸ್ಮಧಾರಣೆ ಮಾಡುವುದರಿಂದ ನಿತ್ಯಕ್ಕಿಂತಲೂ ಹೆಚ್ಚಿನಫಲವು ದೊರೆಯುವುದು. ಹಾಗೆಯೇ ಸಂಕ್ರಮಣ, ದಕ್ಷಿಣಾಯನ ಉತ್ತರಾಯಣಕಾಲಗಳು, ಮಹಾಪಾತ, ಮುಂತಾದ ವಿಶೇಷಕಾಲಗಳಲ್ಲಿ ಈ ಭಸ್ಮಧಾರಣೆಮಾಡುವುದರಿಂದ ಅತ್ಯಾನಂದವೂ, ಮೋಕ್ಷ

ಇತಿ ಶ್ರೀಶಿವರಹಸ್ಯೇ ಈಶ್ವರಾಖ್ಯೇ ದಶಮಾಂಶೇ ಪೂರ್ವಾರ್ಧೇ
ಭಸ್ಮಧಾರಣಮಹಿಮಾದಿವರ್ಣನಂ ನಾಮ
ಚತುರ್ದಶೋಽಧ್ಯಾಯಃ

---

ಸುಖವೂ ಲಭಿಸುವುದೆಂದು ತಿಳಿಯಬೇಕು. ಎಂದು ಪರಶಿವನು ಪಾರ್ವತಿಗೆ ಹೇಳಿದ ಮಾತನ್ನೇ ಮಂಕಣನಿಗೆ ತಿಳಿಸಿದನೆಂದು ಕುಮಾರಸ್ವಾಮಿಯು ಜೈಗೀಷವ್ಯ ಮಹಾಮುನಿಗೆ ವಿವರಿಸಿಹೇಳಿದನು. ||೩೮||

ಇಲ್ಲಿಗೆ ಶ್ರೀಶಿವರಹಸ್ಯದ ದಶಮಾಂಶ ಪೂರ್ವಾರ್ಧದಲ್ಲಿ ಭಸ್ಮಧಾರಣಮಹಿಮೆಯನ್ನು
ವಿವರಿಸುವ ಹದಿನಾಲ್ಕನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ಶ್ರೀ ಶಿವಾಯನಮಃ ॥

# ಅಥ ಶ್ರೀಶಿವರಹಸ್ಯೇ

## ಈಶಾನಾಖ್ಯೇ

## ದಶಮಾಂಶಪೂರ್ವಾರ್ಧೇ

## ಪಂಚದಶೋಽಧ್ಯಾಯಃ

॥ ಮುನಿರುವಾಚ ॥

ಕುಮಾರ ಸುಕುಮಾರಾಂಗ ಮಾರಮಾರಪ್ರಿಯ ಪ್ರಭೋ ।
ವಾರಂ ವಾರಂ ಪ್ರಪದ್ಯೇಽಹಂ ಶೂರಹಾರಿಪದಾಂಬುಜಂ ॥೧॥

ಶ್ರುತಂ ಮಂಕಣಜಾಖ್ಯಾನಂ ಭಸ್ಮನೋ ಮಹಿಮಾಪಿ ಚ ।
ಶಿರೋವ್ರತವಿಧಿಂ ಚೈವ ಶಿವಪ್ರೋಕ್ತಂ ವಿಶೇಷತಃ ॥೨॥

ಶ್ರುತಂ ವಿಶ್ರುತಮಾಖ್ಯಾನಂ ಶ್ರುತಿಪ್ರೋಕ್ತಂ ಸದಾದ್ಭುತಂ ।
ಕಥಂ ರುದ್ರಾಕ್ಷಮಹಿಮಾ ತನ್ಮೇ ವಿಸ್ತಾರತೋ ವದ ॥೩॥

---

## ಹದಿನೈದನೆಯ ಅಧ್ಯಾಯ

ಆಸ್ತಿಕವರ್ಯನಾದ ಜೈಗೀಷವ್ಯಮಹಾಮುನಿಯು, ಕುಮಾರಸ್ವಾಮಿಯನ್ನು ಸುಕುಮಾರಾಂಗನೆಂದೂ, ಮನ್ಮಥಾಂತಕನಾದ ಶಂಕರನ ಪ್ರಿಯಪುತ್ರನೆಂದೂ ಹೊಗಳುತ್ತಾ, ಕುಮಾರಸ್ವಾಮಿಯು ತಾನು ಕೇಳಿದ ಮಂಕಣಮುನಿಯ ಕಥೆ, ಭಸ್ಮಮಹಿಮೆ, ಶಿರೋವ್ರತವಿಧಿ ಮುಂತಾದ ಈಶ್ವರಪ್ರೋಕ್ತವಾದ ವಿಷಯಗಳನ್ನು ನೆನೆಯುತ್ತಾ, ಮತ್ತೂ ಈರೀತಿ ಪ್ರಶ್ನಿಸಿದನು. ॥೧-೨॥

ಕುಮಾರಸ್ವಾಮಿಯೇ, ನಿನ್ನಿಂದ ಅನೇಕ ಶ್ರುತಿಪ್ರತಿಪಾದಿತವಾದ ವಿಷಯಗಳನ್ನು ನಾನು ತಿಳಿದಂತಾಯಿತು. ಈಗ ರುದ್ರಾಕ್ಷಿಯ ಮಹಿಮೆಯೊಂದನ್ನು ತಿಳಿಯಪಡಿಸು. ರುದ್ರಾಕ್ಷಿಧಾರಣೆಯು ಸಂಸಾರ ಸಮುದ್ರದಿಂದ ಮಾನವರನ್ನು

ನಿಸ್ತಾರಾಯ ಭವಾಂಭೋಧೇರ್ಧಾರಣೇನ ನಗಾ ಇವ ।
ಕಥಂ ರುದ್ರಾಕ್ಷವೃಕ್ಷಾಣಾಮುತ್ಪತ್ತಿಃ ಕೋ ವಿಧಿಃ ಫಲಂ ॥೪॥

ಧಾರಣಂ ವಾ ಕಥಂ ತಸ್ಯ ಕಾಲಸ್ತಸ್ಯ ಮುಖೇನ ಚ ।
ಕಿಮುಕ್ತವಾನ್ ಮಹಾದೇವೋ ದೇವ್ಯೈ ರುದ್ರಾಕ್ಷಜಂ ಫಲಂ ॥೫॥

ಧಾರಣೇ ಚಾಧಿಕಾರೀ ಕಸ್ತನ್ಮೇ ಸ್ಕಂದ ವದಾಧುನಾ ॥೬॥

ಇತಿ ವಾಕ್ಯಂ ಮುನೇಃ ಶ್ರುತ್ವಾ ಕ್ರೌಂಚಾರಿಸ್ತಮಭಾಷತ ।
ಪುರಾ ಕೈಲಾಸಶಿಖರೇ ಯತ್ಪೃಷ್ಟಂ ಸತ್ಕೃತಂ ಸದಾ ॥೭॥

ದೇವ್ಯೈ ದೇವೇನ ಕಥಿತಂ ತದವೋಚತ್ಕಥಾತ್ಮಕಂ ॥೮॥

॥ ಶ್ರೀ ಸ್ಕಂದ ಉವಾಚ ॥

ಶೃಣು ತ್ವಂ ಗಣವೃಂದೈಶ್ಚ ಸುರವೃಂದಮುನೀಶ್ವರೈಃ ।
ಕೈಲಾಸಶೈಲಪ್ರಾಸಾದೇ ಚಂದ್ರಸ್ಫಟಿಕನಿರ್ಮಿತೇ ॥೯॥

---

ಹೇಗೆ ಪಾರುಗಾಣಿಸುವುದು? ರುದ್ರಾಕ್ಷಿಯ ಮರಗಳು ಭೂಲೋಕದಲ್ಲಿ ಉತ್ಪನ್ನವಾದುದು ಹೇಗೆ? ॥೩-೪॥

ರುದ್ರಾಕ್ಷಿಯನ್ನು ಧರಿಸುವುದು ಹೇಗೆ? ಅದಕ್ಕೆ ಕಾಲವಾವುದು? ರುದ್ರಾಕ್ಷಿಯ ವಿಷಯದಲ್ಲಿ ಹಿಂದೆ ಪರಶಿವನು ಪಾರ್ವತಿಗೆ ಹೇಳಿದ ವಿಷಯಗಳಾವುವು? ರುದ್ರಾಕ್ಷಿಧಾರಣೆಗೆ ಅರ್ಹನು ಯಾರು? ಈ ವಿಷಯವೆಲ್ಲವನ್ನೂ ತಿಳಿಯಪಡಿಸಬೇಕೆಂದು ಜೈಗೀಷವ್ಯನು ಪ್ರಾರ್ಥಿಸಲು, ಆಗ ಕ್ರೌಂಚಾರಿಯಾದ ಕುಮಾರಸ್ವಾಮಿಯು ಹಿಂದೆ ಇದೇ ರುದ್ರಾಕ್ಷಿಯ ವಿಷಯವಾಗಿ ಪರಶಿವನು ಪಾರ್ವತಿಗೆ ಹೇಳಿದ ಕಥಾರೂಪವಾದ ಉಪದೇಶವನ್ನು ಜೈಗೀಷವ್ಯಮುನಿಗೆ ಈರೀತಿ ಬೋಧಿಸತೊಡಗಿದನು. ॥೫-೬-೭-೮॥

" ಜೈಗೀಷವ್ಯನೇ, ಗಣವೃಂದದೊಡನೆಯೂ ದೇವತೆಗಳ ಗುಂಪಿನೊಡನೆಯೂ ಕೂಡಿರುವ ನಿನಗೆ ಮಹೇಶ್ವರೋಕ್ತಿಯನ್ನು ತಿಳಿಯಪಡಿಸುವೆನು ಕೇಳು. ಒಂದುಸಾರಿ ಪಾರ್ವತಿಯು ಕೈಲಾಸಶಿಖರದಲ್ಲಿ ಚಂದ್ರಕಾಂತಶಿಲೆಯಿಂದ ನಿರ್ಮಿತವಾದ ಪ್ರಾಸಾದದಲ್ಲಿ, ಸಂತೋಷದಿಂದ ಕುಳಿತಿರುವ ಚಂದ್ರಶೇಖರನೂ, ಗಂಗಾಧರನೂ

ದೇವೀ ಕಾಂತತರಂ ಶಾಂತಂ ಚಂದ್ರಫೇನಮನೋಹರಂ ।
ಸ್ಮಯಮಾನಮುಖಾಂಭೋಜಷಟ್ಪದೀಕೃತಮಾನಸಾ ॥೧೦॥

ಸಸ್ಮಿತಾಸ್ಯಂ ರಹಸ್ಯೇವಮಪೃಚ್ಛತ್ಪರ್ವತಾತ್ಮಜಾ ।
ದಿವ್ಯಾಸನೇ ಸಮಾವಿಷ್ಟಂ ಶಿಪಿವಿಷ್ಟಂ ತದಾಂಬಿಕಾ ॥೧೧॥

॥ ದೇವ್ಯುವಾಚ ॥

ರುದ್ರಾಕ್ಷಮಹಿಮಾ ಶಂಭೋ ನ ಶ್ರುತೋ ವಿಸ್ತರಾನ್ಮಯಾ ।
ತನ್ಮೇ ಕೌತುಕಮುತ್ಕೃಷ್ಟಂ ಶ್ರೋತುಂ ತನ್ಮಹಿಮಾಂ ವಿಭೋ ॥೧೨॥

ತವಾಮೃತಮುಖಾಂಭೋಜಚಂಚರೀಕಾಯತೇ ಮನಃ ।
ಕಥಾಸುಧಾರಸಂ ಪಾತುಮಿಚ್ಛಾ ಸ್ವಚ್ಛಾಸ್ತಿ ಮೇ ಶಿವ ॥೧೩॥

ರಹಸ್ಯಮಪಿ ಮೇ ಬ್ರೂಹಿ ಸಾವಧಾನಾಸ್ಮಿ ಸಾಂಪ್ರತಂ ॥೧೪॥

॥ ಶ್ರೀ ಸ್ಕಂದ ಉವಾಚ ॥

ಇತ್ಯುಕ್ತಂ ಗಿರಿಜಾವಾಕ್ಯಂ ಶ್ರುತ್ವಾ ಚಂದ್ರಕಲಾಧರಃ ।
ಪ್ರಹಸ್ಯಾಹ ಮಹಾದೇವಃ ಕೈಲಾಸೇ ಗಿರಿಜಾಂ ತದಾ ॥೧೫॥

---

ಆದ ಪತಿಯನ್ನು ನೋಡಿ, ಪತಿಯಪಾದದಲ್ಲಿ ಭಕ್ತಿಯಿಟ್ಟವಳಾಗಿ ಏಕಾಂತದಲ್ಲಿ ಈರೀತಿ ಪ್ರಶ್ನಿಸಿದಳು. ಆಗ ಪರಶಿವನು, ದಿವ್ಯಾಸನದಲ್ಲಿ ಕುಳಿತು ಮುಗುಳ್ನಗೆಯ ಕಾಂತಿಯಿಂದ ರಂಜಿಸುತ್ತಿದ್ದನು. ॥೯-೧೦-೧೧॥

'ಪರಶಿವನೇ, ನಾನು ನಿನ್ನಿಂದ ರುದ್ರಾಕ್ಷಮಹಿಮೆಯನ್ನು ಇಲ್ಲಿನವರೆಗೂ ವಿಸ್ತಾರವಾಗಿ ಕೇಳಲಿಲ್ಲ. ಕೇಳಬೇಕೆಂಬ ಕುತೂಹಲವೂ ಬಹಳವಾಗಿದೆ. ನಿನ್ನ ಮುಖಕಮಲದಿಂದ ಹೊರಡುವ ಸತ್ಕಥಾಮಕರಂದವನ್ನು ಪಾನಮಾಡಲು ನನ್ನ ಮನಸ್ಸೆಂಬ ಭ್ರಮರವು ತವಕಪಡುತ್ತಿರುವುದು. ಅದು ಅತ್ಯಂತ ರಹಸ್ಯವಾಗಿರಬಹುದು. ಆದರೂ ನನ್ನಲ್ಲಿ ಪ್ರೀತಿಯಿಟ್ಟು ಅದನ್ನು ವಿವರವಾಗಿ ಹೇಳಬೇಕು. ನಾನು ಸಾವಧಾನದಿಂದ ಕೇಳಲು ಬಯಸುತ್ತೇನೆ'. ॥೧೨-೧೩-೧೪॥

ಆರೀತಿ ಪ್ರಾರ್ಥಿಸಿದ ಪಾರ್ವತಿಯ ಪ್ರಶ್ನೆಗೆ ಉತ್ತರವಾಗಿ ಮಹಾದೇವನು ಈರೀತಿ ಉಪದೇಶಿಸಿದನು 'ಪಾರ್ವತಿಯೇ, ಅರಳಿದ ಕಲ್ಹಾರ ಪುಷ್ಪದಂತೆ ಕೋಮಲ ಗಂಧವುಳ್ಳವನೆ, ಮುಡಿಯಲ್ಲಿ ಮುಡಿದಿರುವ ಮಲ್ಲಿಗೆಯ ಮಂದ ಗಂಧದಿಂದ

|| ಶ್ರೀ ಈಶ್ವರ ಉವಾಚ ||

ಶೃಣು ತ್ವಮಗಜೇ ಜಾಯೇ ಫುಲ್ಲಹಲ್ಲಕಗಂಧಿನಿ ।
ಧಮ್ಮಿಲ್ಲಮಲ್ಲೀವಿಮಲ ಗಂಧಬಂಧಕಚಾಭರೇ ||೧೬||

ಭೌಚ್ಛೇ ಮನ್ವಂತರೇ ಕೇಚಿದ್ದಿತಿಜಾ ವರದರ್ಪಿಣಃ ||
ಕಶ್ಯಪಸ್ಯಾನ್ವಯೇ ಜಾತಾಃ ಮಹಾಬಲಪರಾಕ್ರಮಾಃ ||೧೭||

ದೇವಾನ್ ಜಿಗ್ಯುಶ್ಚ ಸಂಗ್ರಾಮೇತೇ ಸರ್ವೇನ್ಮತ್ಪರಾಯಣಾಃ ।
ಬ್ರಹ್ಮವಿಷ್ಣ್ವಾದಯೋ ದೇವಾಸ್ತೈರ್ಜಿತಂ ಬಲವತ್ತರೈಃ ||೧೮||

ಐರಾವತಸಮಾರೂಢಃ ಸುರವೃಂದಯುತೋನ್ವಹಂ ।
ರಣೇ ನಿರಾಕೃತೋ ದೈತ್ಯೋ ಮದ್ದತ್ತವರದರ್ಪಿತೈಃ ||೧೯||

ವಿಧ್ವಸ್ತಾ ಮುನಯಸ್ಸರ್ವೇ ಲೋಕಾಶ್ಚೈವ ಚತುರ್ದಶ ।
ಅಧರೋತ್ತರಮುದ್ಭ್ರಾಂತಂ ಜಗಚ್ಚಕ್ರೈರ್ಬಲೋದ್ಧತಾಃ ||೨೦||

ಯಜ್ಞಭಾಗಭುಜೋ ದೇವಾಃ ಕೃತಾಸ್ತೇ ಬಲಿಭೋಜನಾಃ ।
ಪಿತರಃ ಕಾತರಾ ಜಾತಾ ಮರುತೋ ಗರುತೋ ಭವನ್ ||೨೧||

---

ಸುಂದರವಾದ ಕೇಶಪಾಶವುಳ್ಳವಳೇ ಕೇಳು. ಈಗ ರುದ್ರಾಕ್ಷಿಯ ಮಹಿಮೆಯನ್ನು ತಿಳಿಯಪಡಿಸುವೆನು. ||೧೫-೧೬||

ಭೌಚ್ಛಮನ್ವಂತರದಲ್ಲಿ ಕಶ್ಯಪರಿಂದ ದಿತೀದೇವಿಯಲ್ಲಿ ಜನಿಸಿದ ಕೆಲವರು ದೈತ್ಯರು ಮಹಾಬಲಿಷ್ಠರಾಗಿದ್ದು, ದಿತೀದೇವಿಯ ವರಬಲದಿಂದ ದೇವತೆಗಳನ್ನೂ, ಬ್ರಹ್ಮವಿಷ್ಣ್ವಾದಿ ದೇವಶ್ರೇಷ್ಠರನ್ನೂ ಯುದ್ಧದಲ್ಲಿ ಜಯಿಸಿದರು. ಆದರೆ ಮಾತ್ರ ಅವರು ನನ್ನನ್ನು ಬಿಡದೇ ಆರಾಧಿಸುತ್ತಿದ್ದರು. ||೧೭-೧೮||

ನನ್ನ ವರಬಲದಿಂದಲೇ ಆ ದೈತ್ಯರು ಇಂದ್ರಾದಿಗಳನ್ನು ಸೋಲಿಸಿ, ಐರಾವತದ ಮೇಲೆ ಕುಳಿತುಕೊಂಡು, ಮುನಿಜನರನ್ನೂ, ಚತುರ್ದಶಲೋಕದ ಪ್ರಜೆಗಳನ್ನೂ ನಾಶಮಾಡುತ್ತಾ, ತಡೆಯಿಲ್ಲದೆ ಸರ್ವತ್ರ ಸಂಚರಿಸುತ್ತಾ ಸ್ವೇಚ್ಛೆಯಾಗಿ ಕಾಲಕಳೆಯುತ್ತಿದ್ದರು. ||೧೯-೨೦||

ಇದರಿಂದ ಯಜ್ಞದಲ್ಲಿ ಹವಿಸ್ಸನ್ನು ತಿನ್ನುತ್ತಿದ್ದ ದೇವತೆಗಳು ಬಲಿಅನ್ನವನ್ನು ತಿನ್ನುವಂತಾದರು. ಪಿತೃದೇವತೆಗಳು ಭಯಚಕಿತರಾದರು. ಮರುದ್ಗಣಗಳು

ವಸವಶ್ಚಾಸುಭಿರ್ಹೀನಾ ವಾಯುರಾಯುರ್ನಿರಾಶವಾನ್ ।
ಗೋವಿಂದೋ ಮಂದಗರ್ವೋ ಭೂದ್ಬ್ರಹ್ಮಾ ಜಿಹ್ಮತ್ವಮಾಪ್ತವಾನ್ ॥೨೨॥

ಆದಿತ್ಯಾಃ ಕ್ಷಿತಿಗತ್ಯಾಂ ಹಿ ವಿಚರಂತಿ ಪೃಥಗ್ಜನೈಃ ।
ವಿಶ್ವಾಸಹೀನಾ ಅಭವನ್ ವಿಶ್ವೇದೇವಾ ತದಾಬಲಾಃ ॥೨೩॥

ರುದ್ರಾ ದರಿದ್ರಾಹ್ಯಭವನ್ ಗರುಡಾ ಮೂಢತಾಂ ಗತಾಃ ।
ಯಕ್ಷಾಶ್ಚ ಧ್ವಂಸಿತಾ ದೈತ್ಯೈರ್ಧ್ವಾಂಕ್ಷಾ ಇವ ಮಹಾಬಲೈಃ ॥೨೪॥

ಸಮೀರಣೋಥ ವರುಣೋ ರಣೇ ದೈತ್ಯೈಃ ಪರಾಜಿತೌ ।
ಅಶ್ವಿನೌ ಶ್ವಾಸಹೀನೌ ತೌ ಕಾಂದಿಶೀಕೌ ದಿಶಾಸು ವೈ ॥೨೫॥

ಕೃಶಃ ಕೃಶಾನುರೇತಾಭೂದ್ಗಂಧರ್ವಾ ಧೈರ್ಯವರ್ಜಿತಾಃ ।
ಮುನಯೋ ಮನವಶ್ಚೈವ ವಾಮನಾಃ ಪ್ರದ್ರವಂತಿ ಚ ॥೨೬॥

ಅಪಸರ್ಪಂತಿ ಸರ್ಪಾಸ್ತೇ ದೈತ್ಯಭೀತ್ಯಾ ದಿಶೋ ದಶ ।
ದಿಶಾಗಜಾ ಮದೋದ್ಧತಾ ಮದಧಾರಾವಿವರ್ಜಿತಾಃ ॥೨೭॥

---

ಹಾರಾಡತೊಡಗಿದರು. ವಸುದೇವತೆಗಳು ಶಕ್ತಿಗುಂದಿದರು. ವಾಯುವಿಗೆ ಆಯುಸ್ಸಿಲ್ಲ ವಾಯಿತು. ವಿಷ್ಣುವು ಮಂಕಾದನು. ಬ್ರಹ್ಮನು ಅವಿತುಕೊಂಡನು. ॥೨೧-೨೨॥

ದ್ವಾದಶಾದಿತ್ಯರೂ ಭೂಮಿಯಲ್ಲಿ ಜನರೊಡನೆಬೆರೆತು ಸಂಚರಿಸತೊಡಗಿದರು. ಮಹಾಬಲಿಷ್ಠರಾದ ವಿಶ್ವೇದೇವತೆಗಳೂ ತಮ್ಮ ಬಲದಲ್ಲಿ ನಂಬಿಕೆಬಿಟ್ಟರು. ಏಕಾದಶ ರುದ್ರರು ಹೊಟ್ಟೆಗಿಲ್ಲದವರಾದರು. ಗರುಡರು, ಯಕ್ಷರೂ, ಮೂಢರಾಗಿ, ದೈತ್ಯರಿಂದ ಕಾಗೆಗಳಂತೆ ಓಡಿಸಲ್ಪಟ್ಟರು. ॥೨೩-೨೪॥

ವಾಯುವರುಣರು ಆ ದೈತ್ಯರಿಗೆ ಸೋತು ದಿಕ್ಕಾಪಾಲಾಗಿ ಓಡಿದರು. ಅಶ್ವಿನೀದೇವತೆಗಳು ದಿಕ್ಕಾಪಾಲಾಗಿ ಚದರಿದರು. ಅಗ್ನಿಯು ಕೃಶನಾದನು. ಗಂಧರ್ವರು, ಮುನಿಗಳು, ಮನುಗಳು, ವಾಮನರು ಧೈರ್ಯಗೆಟ್ಟು ಸಿಕ್ಕಿದಕಡೆ ಓಡತೊಡಗಿದರು. ॥೨೫-೨೬॥

ನಾಗಗಳು ಭಯದಿಂದ ದಿಕ್ಕುಗೆಟ್ಟು ಓಡಿದುವು. ದಿಗ್ಗಜಗಳು ಮದಧಾರೆ ಯಿಲ್ಲದೆ ಕಂಗೆಟ್ಟವು. ರೆಕ್ಕೆಯಿರುವುದೆಂಬಧೈರ್ಯವಿದ್ದರೂ ಪರ್ವತಗಳು ಹೆದರಿದುವು.

ತರ್ಜಿತಾಃ ಪರ್ವತಾಸ್ಸರ್ವೇ ಪಕ್ಷಗರ್ವವಿವರ್ಜಿತಾಃ ।
ವೇದಾ ನಿರ್ವೇದತಾಂ ಪ್ರಾಪ್ತಾಃ ಶಕ್ರಸ್ಸತ್ರಮಯಾಚತ ॥೨೮॥

ದೀನಾ ಹೀನಬಲಾಸ್ಸರ್ವೇ ಸುರಾ ದೈತ್ಯಪರಾಜಿತಾಃ ।
ಪ್ರಣವಃ ಪ್ರಾಣಹೀನೋಽಭೂತ್ಕುಬೇರೋ ಬೇರವರ್ಜಿತಃ ॥೨೯॥

ತ್ರಿವಿಷ್ಟಪನಿವಿಷ್ಟಾಯೇ ತದ್ಭೂಮೌ ಕಷ್ಟಜೀವಿನಃ ।
ಏವಂ ಬ್ರಹ್ಮಾಂಡಮುದ್ದಂಡಂ ದೈತ್ಯದಂಡೇನ ಪೀಡಿತಂ ॥೩೦॥

ನಿಸ್ಸ್ವಾಧ್ಯಾಯವಷಟ್ಕಾರ ಸದಾಮುಖಮುಖೋಜ್ಝಿತಂ ।
ಲೇಖಾದುಃಖಪ್ರದಂ ಚೈವ ಜಗದಾಸೀಚ್ಚರಾಚರಂ ॥೩೧॥

ಸಂತಪ್ತಾ ವ್ಯಥಿತಾಸ್ಸರ್ವೇ ಗೀರ್ವಾಣಾಶ್ಚಾರ್ಣವಂಗತಾಃ ।
ಸಾಗರಾ ಸುರವೇಗೇನ ವಡವಾಗ್ನಿಮುಖೇಽರ್ಪಿತಾಃ ॥೩೨॥

ನ ವಾತಿ ವಾತಪೋತೋಽಪಿ ದೈತ್ಯಭೀತ್ಯಾ ನಿಶಂ ಶಿವೇ ।
ಅಗ್ನಿರೂರ್ಧ್ವಶಿಖಶ್ಚಾಪಿ ಶಿಖಾಭೂಚ್ಚಾಪ್ಯಧೋಮುಖಂ ॥೩೩॥

---

ವೇದರಾಶಿಗೆ ದಿಕ್ಕೇ ಇಲ್ಲದಂತಾಯಿತು. ಇಂದ್ರನು ಯಾಗವನ್ನು ಕಾಣದಂತಾದನು. ॥೨೭-೨೮॥

ದೇವತೆಗಳೆಲ್ಲರೂ ಹೀಗೆ ಪರಾಜಿತರಾಗಿ ನಿರ್ವೀರ್ಯರಾದರು. ಪ್ರಣವ ಮಂತ್ರಕ್ಕೆ ಪ್ರಾಣವೇ ಇಲ್ಲದಂತಾಯಿತು. ಕುಬೇರನಿಗೆ ಶರೀರವಿಲ್ಲದಂತಾಯಿತು. ದೇವಲೋಕದಲ್ಲಿದ್ದವರೆಲ್ಲಾ ಭೂಮಿಗೆ ಬಂದು ಕಷ್ಟಜೀವಿಗಳಾದರು. ಹೀಗೆ ಬ್ರಹ್ಮಾಂಡವೆಲ್ಲಾ ಈ ದೈತ್ಯರ ಹಾವಳಿಗೆ ಸಿಕ್ಕಿ ಹಿಂಸೆಗೊಳಗಾಯಿತು. ॥೨೯-೩೦॥

ಪ್ರಪಂಚದಲ್ಲಿ ವೇದಾಧ್ಯಯನವಷಟ್ಕಾರಾದಿಗಳು ಇವುಗಳೆಲ್ಲಾ ನಿಂತುಹೋಗಿ ಯಾಗಾದಿಸತ್ಕರ್ಮಗಳು ಮಾಯವಾದವು. ಇದರಿಂದ ದೇವತೆಗಳಿಗೆ ಆಹಾರವೇ ಇಲ್ಲದಂತಾಗಿ ದುಃಖವುಪ್ರಾಪ್ತವಾಯಿತು. ಆ ರೀತಿ ದುಃಖಿತರಾದ ದೇವತೆಗಳೆಲ್ಲರೂ ಸಮುದ್ರವನ್ನು ಹೊಕ್ಕರು. ಸಮುದ್ರಗಳಾದರೋ ಆ ವೇಗವನ್ನು ತಡೆಯಲಾರದೆ ಬಡಬಾಗ್ನಿಯಲ್ಲಿ ಸೇರಿದುವು. ॥೩೧-೩೨॥

ಆ ದೈತ್ಯರಿಗೆ ಹೆದರಿ ರಾತ್ರಿಯಲ್ಲಿ ಮಂದಮಾರುತವು ಸಹ ಬೀಸುತ್ತಿರಲಿಲ್ಲ. ಮೇಲ್ಮುಖವಾದ ಜ್ವಾಲೆಯುಳ್ಳ ಅಗ್ನಿಯು ಅಧೋಮುಖವಾಗಿ ಜ್ವಲಿಸಲಾರಂಭಿ

ವಿದ್ಯುತೋ ದ್ಯುತಿಹೀನಾಶ್ಚ ಸೋಮೋಮ್ಲಾನವಪುರ್ಧರಃ ।
ಚಂಡರಶ್ಮಿರ್ಮಂದಶಶ್ಮಿರಭೂದ್ದೈತ್ಯ ಪರಾಜಿತಃ ॥೩೪॥

ಕ್ರೂರಾಕ್ಷೇಣಾಥ ತೇ ದೇವಿ ತಾರಾಕ್ಷೇಣ ಪರಾಜಿತಾಃ ।
ತಾರಾಧಾರಾ ದ್ಯುತಾ ಪೇತುರ್ಮಕರಾಕ್ಷೇಣ ಪೀಡಿತಾಃ ॥೩೫॥

ವಿದ್ಯುನ್ಮಂಡಲಮುತ್ಕೃಷ್ಟಮಾಕೃಷ್ಟಂ ಮೇಘಮಂಡಲಂ ।
ಕಲ್ಪವೃಕ್ಷಾ ಕ್ಷಿತಿತಲೇ ಸಮಾನೀತಾಶ್ಚ ನಂದನಾತ್ ॥೩೬॥

ಮಲವದ್ಧಿಕೃತಂ ಲೋಕಂ ತದಾ ವಿದ್ಯುತ್ಸುಮಾಲಿನಾ ।
ಏವಂ ಕ್ರೂರರಣಕ್ಷೋಣ್ಯಾಂ ಬಾಣಾಸಿಪರಿಘೈಶ್ಶರೈಃ ॥೩೭॥

ಐರಾವತೋ ರಾವಿತಶ್ಚ ಶಕ್ರೋ ವಿಕ್ರಮವರ್ಜಿತಃ ।
ಅಸಕೃತ್ತರ್ಜಿತಾ ದೇವಾ ಜಗಚ್ಚಕ್ರಂ ಚ ಭರ್ಜಿತಂ ॥೩೮॥

ನಿರ್ವೀರ್ಯವೀರ್ಯಾಃ ಸರ್ವೇಽಪಿ ಆರ್ಯಧರ್ಮವಿವರ್ಜಿತಾಃ ।
ತತ್ರ ದೇವ್ಯಸ್ಸುತೋ ದೇವಿ ಬ್ರಹ್ಮವಿಷ್ಣುಪುರೋಗಮ್ಯಃ ॥೩೯॥

---

ಸಿದನು. ಮಿಂಚು ಹೊಳೆಯದೆಹೋಯಿತು. ಚಂದ್ರನು ಕಾಂತಿಹೀನನಾದನು. ಸೂರ್ಯನಲ್ಲಿ ತೇಜಸ್ಸೇ ಕಮ್ಮಿಯಾಯಿತು. ॥೩೩-೩೪॥

ಕ್ರೂರಾಕ್ಷ, ತಾರಾಕ್ಷ, ಮಕರಾಕ್ಷರೆಂಬ ರಾಕ್ಷಸರಿಂದ ಪ್ರಪಂಚವೇ ಧ್ವಂಸವಾಯಿತು. ನಕ್ಷತ್ರಗಳು ಭೂಮಿಗೆ ಉದುರಿದುವು ಅವರು ಮಿಂಚಿನಿಂದ ತುಂಬಿದ ಮೇಘಮಂಡಲವನ್ನು ಭೂಮಿಗೆಳೆದರು. ನಂದನವನದಿಂದ ಕಲ್ಪವೃಕ್ಷವನ್ನು ಕಿತ್ತು ತಂದರು. ॥೩೫-೩೬॥

ವಿದ್ಯುತ್ಸುಮಾಲಿಯೆಂಬ ದೈತ್ಯನು ಪ್ರಪಂಚವನ್ನೆಲ್ಲಾ ಮಲರಾಶಿಯಂತೆ ವಿಕಾರವನ್ನಾಗಿಮಾಡಿದನು. ಬಾಣ, ಕತ್ತಿ, ಪರಿಘ ಮೊದಲಾದ ಆಯುಧಗಳಿಂದ ರಣಭೂಮಿಯೆಲ್ಲಾ ಭಯಂಕರವಾಗಿ ಕಾಣುತ್ತಿತ್ತು. ವಿದ್ಯುತ್ಸುಮಾಲಿಯೂ ಕೂಡ ಐರಾವತವನ್ನು ಹೊಡೆದು, ಇಂದ್ರನನ್ನು ಸೋಲಿಸಿ, ದೇವತೆಗಳನ್ನೆಲ್ಲಾ ಹೆದರಿಸಿ, ಜಗತ್ತನ್ನೇ ಭಯಗೊಳಿಸಿದನು. ॥೩೭-೩೮॥

ಒಟ್ಟಿನಲ್ಲಿ ಮಾನವದೇವವರ್ಗವೆಲ್ಲಾ ನಿಸ್ಸತ್ವವಾಗಿ, ತಂತಮ್ಮ ಧರ್ಮಗಳಿಂದ ದೂರರಾದರು. ಆಸಮಯದಲ್ಲಿ ಬ್ರಹ್ಮ, ವಿಷ್ಣು ಮೊದಲಾದ ಸಕಲದೇವತೆಗಳೂ

ತ್ರಿಪುರಾಣಾಂ ವಧಾರ್ಥಾಯ ಮತಿಂ ಕೃತ್ವಾಹಮಾಸ್ಥಿತಃ ॥೪೦॥

ಬ್ರಹ್ಮಾದಿಸ್ತುತಿತೋಷಿತೋಽಹಮಗಜೇ ತ್ರೈಲೋಕ್ಯರಕ್ಷಾಕ್ಷಮೈ
ರ್ಮನ್ನೇತ್ರ ಪ್ರಭವಾಶ್ರುತಿಪ್ರಭವಿತಾ ರುದ್ರಾಕ್ಷವೃಕ್ಷಾಃ ಕ್ಷಿತೌ ।
ದ್ವಾತ್ರಿಂಶತ್ಪ್ರಭವಾ ಭವಂತಿ ನಿಯತಂ ತದ್ಬೀಜಮೇವಾಮಲೇ
ಧಾರ್ಯಂ ವೈದಿಕಸಂಮತಂ ಶ್ರುತಿಶಿರೋವಾರ್ತಾಸು ನಿರ್ವರ್ತಿತಂ ॥೪೧॥

ತ್ರ್ಯಕ್ಷಾನುಕ್ಷಣವೀಕ್ಷಣೇನ ಭಗದೃಕ್ಸಂಧುಕ್ಷಲಿಂಗಾರ್ಚಕೋ
ರುದ್ರಾಕ್ಷೋರುವಲಕ್ಷದಿವ್ಯಭಸಿತಾಲಂಕಾರಪುಂಡ್ರಾಂಕಧೃಕ್ ।
ಪಾಪಧ್ವಾಂಕ್ಷನಿವಾರಣಾಯ ಸಕರಾಸಂಗಾಶ್ಮಸಂಶ್ಲೇಷಕೋ
ಮೋಕ್ಷಶ್ರೀಕರಸಂಗಸಂಭವಮಹಾನಂದಾಂಬುಪಾನೋದ್ಯತಃ ॥೪೨॥

---

ಒಟ್ಟುಗೂಡಿ ನನ್ನನ್ನು ಪ್ರಾರ್ಥಿಸಿದರು. ಆಗ ನಾನು ಆ ತ್ರಿಪುರಾಸುರರನ್ನು ಕೊಲ್ಲಲು ಯತ್ನಿಸಿ ಅವರಿಗೆ ಪ್ರತ್ಯಕ್ಷನಾದೆನು. ॥೩೯-೪೦॥

ಬ್ರಹ್ಮನೇ ಮೊದಲಾದ ದೇವತೆಗಳಿಂದ ಸ್ತುತ್ಯನಾದ ನಾನು ತ್ರೈಲೋಕ್ಯಗಳನ್ನೂ ರಕ್ಷಿಸಲೋಸುಗ ನನ್ನ ನೇತ್ರದಿಂದ ಮೂವತ್ತೆರಡು ಬಿಲ್ವವೃಕ್ಷಗಳನ್ನು ನಿರ್ಮಿಸಿದೆನು. ಅದೇವೃಕ್ಷದ ಬೀಜಗಳೇ ಈಗ ರುದ್ರಾಕ್ಷಿಗಳೆಂಬ ಹೆಸರಿನಿಂದ ಸರ್ವತ್ರವ್ಯಾಪಿಸಿವೆ. ಅದನ್ನು ಆಸ್ತಿಕರು ಧರಿಸುವರು. ಅದು ಶ್ರುತಿಸಂಮತವಾದುದು ಮತ್ತು ಬಲಪ್ರದವಾದುದು. ॥೪೧॥

ತ್ರಿನಯನನೆನಿಸಿದ ಪರಶಿವನ ದಯೆಯನ್ನು ಪಡೆದು ಭಗನೇತ್ರಹಾರಿಯಾದ ಶಿವಲಿಂಗವನ್ನು ಸದಾ ಪೂಜಿಸುತ್ತಾ, ರುದ್ರಾಕ್ಷಿಯಮಾಲೆ, ದಿವ್ಯಭಸ್ಮ, ಭಸ್ಮತ್ರಿಪುಂಡ್ರ, ಇವುಗಳನ್ನು ಧರಿಸಿ, ಪಾಪನಿವಾರಣೆಗಾಗಿ ಶಿವಲಿಂಗಾರಾಧನೆಯಲ್ಲಿಯೇ ಆಸಕ್ತನಾಗಿರುವವನು, ಮೋಕ್ಷಲಕ್ಷ್ಮಿಯನ್ನು ಅನಾಯಾಸವಾಗಿ ಪಡೆದು, ಸದಾನಂದಾನುಭವವನ್ನು ಅನುಭವಿಸುತ್ತಾ, ಜನ್ಮರಹಿತವಾದ ಶಿವಸಾಯುಜ್ಯವನ್ನು ಪಡೆಯುವನು ಎಂದು, ಪರಶಿವನು ಪಾರ್ವತಿಗೆ ಹೇಳಿದವಿಷಯವನ್ನು ಕುಮಾರಸ್ವಾಮಿಯು ಜೈಗೀಷವ್ಯಮಹಾಮುನಿಗೆ ವಿವರಿಸಿ ಹೇಳಿದನೆಂದು ಸೂತಮಹರ್ಷಿಗಳು ವಾಜಶ್ರವಸಾದಿ ಸಕಲಮುನಿಗಳಿಗೂ ಉಪದೇಶಿಸಿದರು. ॥೪೨॥

**ಇತಿ ಶ್ರೀಶಿವರಹಸ್ಯೇ ಈಶ್ವರಾಖ್ಯೇ ದಶಮಾಂಶೇ ಪೂರ್ವಾರ್ಧೇ
ರುದ್ರಾಕ್ಷಮಹಿಮಾ ಪ್ರಶ್ನಂ ತ್ರಿಪುರಾಸುರಪ್ರಭಾವವರ್ಣನಂ
ನಾಮ ಪಂಚದಶೋಽಧ್ಯಾಯಃ**

---

**ಇಲ್ಲಿಗೆ ಶ್ರೀಶಿವರಹಸ್ಯದ ದಶಮಾಂಶದಲ್ಲಿ ರುದ್ರಾಕ್ಷಮಹಿಮೆಯನ್ನು ವಿವರಿಸುವ
ಹದಿನೈದನೆಯ ಅಧ್ಯಾಯವು ಸಂಪೂರ್ಣವಾದುದು.**



॥ ಶ್ರೀಃ ॥

॥ ಶ್ರೀ ಶಿವಾಯನಮಃ ॥

# ಅಥ ಶ್ರೀಶಿವರಹಸ್ಯೇ

## ಈಶಾನಾಖ್ಯೇ

## ದಶಮಾಂಶಪೂರ್ವಾರ್ಧೇ

## ಷೋಡಶೋಽಧ್ಯಾಯಃ

॥ ಶ್ರೀ ದೇವ್ಯುವಾಚ ॥

ಏತಾದೃಶಬಲೈರ್ಯುಕ್ತಾಃ ಕಥಮಾಸನ್ ದಿತೇಸ್ಸುತಾಃ ।
ಕಿಂ ತಪ್ತಂ ಕೈಸ್ತಪೋ ದೇವ ತ್ವತ್ಪ್ರೀತೇರ್ಜನಕಂ ಮಹತ್ ॥೧॥

ತನ್ಮೇ ವದ ವಿಶೇಷೇಣ ದಿತಿಜಾನಾಂ ವಿಚೇಷ್ಟಿತಂ ।
ಶ್ರವಣೇನ ಧೃತಾಂ ಶಂಭೋ ತನ್ಮಹ್ಯಂ ವಕ್ತುಮರ್ಹಸಿ ॥೨॥

॥ ಶ್ರೀ ಸ್ಕಂದ ಉವಾಚ ॥

ಇತ್ಥಂ ದೇವ್ಯಾ ತದಾ ಪೃಷ್ಟಃ ಶಂಕರಃ ಕರುಣಾಕರಃ ।
ತಾಂ ಪ್ರಾಹಾಥ ತಪಶ್ಚರ್ಯಾಂ ದೈತ್ಯಾನಾಂ ಪರಮಾದ್ಭುತಾಂ ॥೩॥

---

## ಹದಿನಾರನೆಯ ಅಧ್ಯಾಯ

ದಿತೀದೇವಿಯ ಮಕ್ಕಳ ದುಷ್ಟಸ್ವಭಾವವನ್ನು ಕೇಳಿ ಪಾರ್ವತಿಯು ಪರಶಿವ ನೊಡನೆ, 'ಶಂಭುವೇ, ಅವರು ಅಷ್ಟು ಬಲಿಷ್ಠರಾದುದು ಹೇಗೆ? ಅದಕ್ಕಾಗಿ ಅವರು ಮಾಡಿದ ತಪಸ್ಸಿನ ಕ್ರಮವೆಂತು? ಮುಂದೆ ಅವರ ವ್ಯಾಪಾರಾದಿಗಳು ಹೇಗೆ ಪರಿಣಾಮಗೊಂಡುವು? ಇವೆಲ್ಲವನ್ನೂ ಕೇಳಲಪೇಕ್ಷಿಸುವ ನನಗೆ ಅದೆಲ್ಲವನ್ನೂ ವಿವರವಾಗಿ ತಿಳಿಸಬೇಕು' ಎಂದು ಪ್ರಾರ್ಥನೆಮಾಡಿಕೊಂಡಳು. ॥೧-೨॥

ಆಗ ಕರುಣಾಕರನಾದ ಶಂಕರನು ಪಾರ್ವತಿಗೆ ದೈತ್ಯರುಮಾಡಿದ ತಪಶ್ಚರ್ಯೆಯ ವೈಚಿತ್ರ್ಯವನ್ನು ವಿವರವಾಗಿ ಹೇಳತೊಡಗಿದನು. 'ದೇವಿಯೇ, ವಿಶಾಲಾಕ್ಷಿಯೇ,

॥ ಶ್ರೀ ಈಶ್ವರ ಉವಾಚ ॥

ಶೃಣು ದೇವಿ ವಿಶಾಲಾಕ್ಷಿ ದಿತಿಜಾನಾಂ ವಿಚೇಷ್ಟಿತಂ ।
ತೈರ್ಯತ್ತ್ವಪ್ತಂ ತಪೋಘೋರಂ ನ ತಥಾ ಸುರಸತ್ತಮೈಃ ॥೪॥

ಮುನಿಭಿರ್ಗಣವೃಂದೈರ್ವಾ ತನ್ಮತ್ತಃ ಶ್ರೋತುಮರ್ಹಸಿ ।
ತಾರಾಕ್ಷೋ ಮಕರಾಕ್ಷಶ್ಚ ವಿದ್ಯುನ್ಮಾಲೀ ಚ ತೇ ತ್ರಯಃ ॥೫॥

ತ್ರೇತಾಗ್ನಿವರ್ಚಸಃ ಸರ್ವೇ ಬಲಸ್ಯೈವ ತನೂಭವಾಃ ।
ಭವಪಾದಾಬ್ಜಸಂಸಕ್ತಾಃ ತ್ರಿಪುಂಡ್ರಪರಿಶೋಭಿತಾಃ ॥೬॥

ರುದ್ರಾಕ್ಷಹಾರವಲಯಾಸ್ತೇಽಸ್ಯಾಸನ್ ಕರುಣಾಲಯಾಃ ।
ಶಿವಲಿಂಗಾರ್ಚನಾಸಕ್ತಾಃ ಸರ್ವದಾ ಬಿಲ್ವಪಲ್ಲವೈಃ ॥೭॥

ಬಲೇ ಹತೇ ತದೇಂದ್ರೇಣ ತತ್ಪುತ್ರಾಸ್ತೇ ತ್ರಯೋಽಂಬಿಕೇ ।
ಶುಕ್ರಂ ವೈ ಶರಣಂ ಯಾತಾ ರಣೇ ಸುರಪರಾಜಿತಾಃ ॥೮॥

ಪ್ರಣಮ್ಯ ಕಾವ್ಯಂ ದಿತಿಜಾ ದುಃಖಭಾರಾ ನತಾನನಾಃ ।
ಪ್ರೋಚುರ್ವೃತ್ತಾಂತಮಖಿಲಂ ಸ್ವಪಿತುರ್ಮರಣಂ ರಣೇ ॥೯॥

---

ಆ ದೈತ್ಯರವಿಷಯವನ್ನು ಕೇಳು. ಅವರು ಮಾಡಿದಷ್ಟು ಭಯಂಕರವಾದ ತಪಸ್ಸನ್ನು ಮತ್ತಾವ ತಪಸ್ವಿಗಳೂ, ದೇವತೆಗಳೂ ನಡೆಸಲಿಲ್ಲ. ॥೩-೪॥

ಬಲಾಸುರನಿಗೆ ತಾರಾಕ್ಷ, ಮಕರಾಕ್ಷ, ವಿದ್ಯುನ್ಮಾಲಿಯೆಂಬ ಮೂವರು ಮಕ್ಕಳಿದ್ದರು. ಅವರು ಅಗ್ನಿತ್ರಯಗಳಂತೆ ಪ್ರಕಾಶಿಸುತ್ತಾ, ಸರ್ವದಾ ಶಿವಾರಾಧಕರಾಗಿ, ತ್ರಿಪುಂಡ್ರಾಂಕಿತರಾಗಿ, ರುದ್ರಾಕ್ಷಿಯಸರವನ್ನು ಧರಿಸಿಕೊಂಡು, ಬಿಲ್ವಪಲ್ಲವಗಳಿಂದ ಶಿವಲಿಂಗಾರ್ಚನೆಮಾಡುತ್ತಾ ಕಾಲಕಳೆಯುತ್ತಿದ್ದರು. ॥೫-೬-೭॥

ಇವರ ತಂದೆಯಾದ ಬಲಾಸುರನನ್ನು ಇಂದ್ರನು ಕೊಂದುಬಿಟ್ಟನು. ಆಗ ಆ ಮೂವರು ಮಕ್ಕಳು ದುಃಖಿತರಾಗಿ, ದೇವತೆಗಳಿಗೆ ಸೋತು ಹೆದರಿ ಶುಕ್ರಾಚಾರ್ಯರ ಸಮೀಪಕ್ಕೆ ಹೋಗಿ, ತಮಗೊದಗಿದ್ದ ಪಿತೃವಿಯೋಗವನ್ನೂ, ಅವಮಾನವನ್ನೂ ತಮ್ಮ ಗುರುವಿನಲ್ಲಿ ಹೇಳಿಕೊಂಡರು. ॥೮-೯॥

॥ ದೈತ್ಯಾ ಊಚುಃ ॥

ದೇವೈಃ ಪರಾಜಿತಾಃ ಸರ್ವೇ ದೈತ್ಯಾ ವಾತ್ಯಾ ಇವಾಹತಾಃ ।
ಬಲಶ್ಚ ಬಲಿನಾಂ ಶ್ರೇಷ್ಠೋ ನಿಹತೋ ರಣಮೂರ್ಧನಿ ॥೧೦॥

ಶರಾಸಾರೈಶ್ಚ ಲಗುಡೈಃ ಖಡ್ಗ ಖೇಟಧರೈಸ್ಸುರೈಃ ।
ವಿಪ್ರದ್ರುತಬಲಾಸ್ಸರ್ವೇ ಹತನಾಥಹೃತೌಜಸಃ ॥೧೧॥

ಕಾಂದಿಶೀಕಾ ನ್ಯಸ್ತಶಸ್ತ್ರಾಸ್ತ್ವಾಮೇವ ಶರಣಂ ಗತಾಃ ।
ಭವಾನ್ ಗುರುರ್ಭವಾಂಸ್ತ್ರಾತಾ ಭವಪಾದಾರ್ಚನೇರತಃ ॥೧೨॥

॥ ಸೂತ ಉವಾಚ ॥

ವದಾಸ್ಮಭ್ಯಂ ಜಪೋಪಾಯಂ ಯೇನ ಜೇಷ್ಯಾಮ್ಯಹಂ ಸುರಾನ್ ॥೧೩॥

ಸ ಶುಕ್ರೋ ದೈತ್ಯವಚನಾತ್ತಾನಾಹೂಯಾಥ ಸಾಂತ್ವಯನ್ ॥೧೪॥

॥ ಶುಕ್ರ ಉವಾಚ ॥

ಅಹ ಯೂಯಂ ದಿತಿಭವಾಃ ಸರ್ವ ಏವ ಮಹೌಜಸಃ ।
ಸುರೈರ್ವಿಪ್ರದ್ರುತಾ ಭೀತ್ಯಾ ವಾತ್ಯಾಪರ್ಣ ಇವಾಹತಾಃ ॥೧೫॥

---

'ಮಹರ್ಷಿಯೇ, ದೇವತೆಗಳು ನಮ್ಮನ್ನು ಹೊಡೆದಟ್ಟಿದರು. ಇಂದ್ರನು ನಮ್ಮ ತಂದೆಯನ್ನು ಕೊಂದನು. ಗಾಳಿಯಿಂದ ತೂರಿಹೋದವರಂತೆ ನಾವು ಅವರಿಗೆ ಹೆದರಿ ದಿಕ್ಕಾಪಾಲಾಗಿ ಓಡಿಬಂದಿರುವೆವು. ಈಗ ನಮ್ಮಲ್ಲಿ ಯಾವ ಆಯುಧಗಳೂ ಇಲ್ಲ. ಶಕ್ತಿ ಉತ್ಸಾಹಗಳು ಮಾಯವಾಗಿವೆ. ನಮ್ಮ ಒಡೆಯನನ್ನು ಕಳೆದುಕೊಂಡೆವು. ಈಗ ಗುರುವೂ, ಶಿವಪಾದಪೂಜಕನೂ ಎನಿಸಿದ ನೀನೇ ನಮ್ಮ ರಕ್ಷಕನು. ನಮ್ಮನ್ನುದ್ಧರಿಸು. ॥೧೦-೧೧-೧೨॥

ಮತ್ತು ದೇವತೆಗಳನ್ನು ಸುಲಭವಾಗಿ ಗೆಲ್ಲುವ ಉಪಾಯವೊಂದನ್ನು (ಜಪವನ್ನು) ವಿವರಿಸುವವನಾಗು' ಎಂದು ದೈತ್ಯರು ಶುಕ್ರಾಚಾರ್ಯನನ್ನು ಬಹುವಾಗಿ ಪ್ರಾರ್ಥಿಸಿಕೊಳ್ಳಲು, ಆಗ ಶುಕ್ರಾಚಾರ್ಯನು ಇಂತೆಂದನು 'ಎಲೈ ದೈತ್ಯರೇ, ಪರಾಕ್ರಮಿಗಳಾದ ನೀವು ಈರೀತಿ ಗಾಳಿಗೆ ತರಗೆಲೆಯುತೂರಿ ಬಂದಂತೆ ದೇವತೆಗಳಿಗೆ ಹೆದರಿ ಬಂದಿರುವಿರಾ! ಆಹಾ ಎಂತಹ ಅನರ್ಥವಾಯಿತು. ॥೧೩-೧೪-೧೫॥

ಉಪಾಯಂ ವೋದ್ಯ ವಕ್ಷ್ಯಾಮಿ ತಚ್ಛೃಣುಧ್ವಮತಂದ್ರಿತಾಃ ।
ಪ್ರಸಂಪೂಜ್ಯ ಮಹಾದೇವಂ ತಪಸಾರಾಧ್ಯ ಶಂಕರಂ ॥೧೬॥

ತಸ್ಮಾಲ್ಲಬ್ಧವರಾ ಯೂಯಂ ವಿಜೇಷ್ಯಾಮ ರಣೇ ಸುರಾನ್ ।
ಅಷಾಢಾರ್ಚನಯುಕ್ತಾಯಾಂ ತುರಾಷಾಡಪಿ ನೋ ಸಮಃ ॥೧೭॥

ಹಿಮವಚ್ಛಿಖರಂ ಗತ್ವಾ ಕಂದಮೂಲಫಲಾಶನಾಃ ।
ಭಸ್ಮರುದ್ರಾಕ್ಷ ಸಂಪನ್ನಾಸ್ತಪಃಕುರುತ ಮಾಚಿರಂ ॥೧೮॥

ಭವತಾಮಚಿರಾದೇವ ವರಂ ದಾಸ್ಯತಿ ಶಂಕರಃ ।
ಅರಿಪಕ್ಷಜಯೋಪಾಯಃ ಶಂಕರಸ್ಯೈವ ಪೂಜನಂ ॥೧೯॥

ಭುಕ್ತಿಮುಕ್ತಿಪ್ರದಂ ದೈತ್ಯಾಶ್ಯಂಕರಸ್ಯೈವ ಪೂಜನಂ ।
ಭೋಗಭಾಗ್ಯಪ್ರದಂ ಪುಂಸಾಂ ಶಂಕರಸ್ಯೈವ ಪೂಜನಂ ॥೨೦॥

ಸ್ವರ್ಗ್ಯಂ ಸಂತಾನಮಾಯುಷ್ಯಂ ಶಂಕರಸ್ಯೈವ ಪೂಜನಂ ।
ಬ್ರಹ್ಮತ್ವಮಮರತ್ವಂ ಚ ಶಂಕರಸ್ಯೈವ ಪೂಜನಾತ್ ॥೨೧॥

---

ಈಗ ನಿಮಗೆ ಅವರನ್ನು ಗೆಲ್ಲುವ ಉಪಾಯವನ್ನು ತಿಳಿಯಪಡಿಸುವೆನು. ಸಾವಧಾನದಿಂದ ಕೇಳಿರಿ. ಮೊದಲು ಪರಶಿವನನ್ನು ತಪಸ್ಸಿನಿಂದ ಆರಾಧಿಸಿರಿ. ಶಂಕರನನ್ನು ತೃಪ್ತಿಪಡಿಸಿ, ವರಪಡೆದರೆ ಸುಲಭವಾಗಿ ದೇವತೆಗಳನ್ನು ಜಯಿಸ ಬಹುದು. ಪರಶಿವನನ್ನು ಅರ್ಚಿಸಿದವರಿಗೆ ಇಂದ್ರನೂ ಶೌರ್ಯದಲ್ಲಿ ಸಮನಾಗಲಾರನು. ||೧೬-೧೭||

ನೀವು ಈಗಲೇ ಹಿಮಗಿರಿಶಿಖರಕ್ಕೆ ಹೋಗಿ ಕಂದಮೂಲಫಲಗಳನ್ನು ಸೇವಿಸುತ್ತಾ, ಭಸ್ಮರುದ್ರಾಕ್ಷಿಗಳನ್ನು ಧರಿಸಿ ಪರಶಿವನನ್ನು ಕುರಿತು ತಪಸ್ಸುಮಾಡಿರಿ. ಪರಶಿವನು ಕಾಲವಿಳಂಬಮಾಡದೆ ನಿಮಗೆ ಪ್ರತ್ಯಕ್ಷವಾಗಿ ವರಪ್ರದಾನಮಾಡುವನು. ಶತ್ರುವರ್ಗವನ್ನು ಗೆಲ್ಲಲು ಶಂಕರಾರಾಧನೆಯೇ ಮುಖ್ಯವಾದ ಉಪಾಯ. ||೧೮-೧೯||

ಐಹಿಕಸುಖ, ಆಮುಷ್ಮಿಕಸುಖ, ಭೋಗಭಾಗ್ಯಗಳು, ಸ್ವರ್ಗಪ್ರಾಪ್ತಿ, ಸಂತಾನಪ್ರಾಪ್ತಿ, ದೀರ್ಘಾಯುಸ್ಸು, ಬ್ರಹ್ಮತ್ವ, ದೇವತ್ವ, ಜನ (ಪಶು) ಗಳಿಗೆ ಒದಗುವ ಬಂಧನಾದಿಗಳು, ವಿದ್ಯಾ, ಸುಖ, ಧನ ಇವುಗಳ ಪ್ರಾಪ್ತಿ, ವಿಷ್ಣು, ಇಂದ್ರ,

ಪಶುಪಾಶವಿಮೋಕ್ಷಂ ಚ ಶಂಕರಸ್ಯೈವ ಪೂಜನಾತ್ ।
ವಿದ್ಯಾಸುಖಧನಾವಾಪ್ತಿಃ ಶಂಕರಸ್ಯೈವ ಪೂಜನಾತ್ ॥೨೨॥

ವಿಷ್ಣುತ್ವಂ ವಾಸವತ್ವಂ ಚ ಶಂಕರಸ್ಯೈವ ಪೂಜನಾತ್ ।
ದಿಕ್ಪಾಲತ್ವಂ ಮುನಿತ್ವಂ ಚ ಶಂಕರಸ್ಯೈವ ಪೂಜನಾತ್ ॥೨೩॥

ಗಂಧರ್ವಗರುಡೇಶತ್ವಂ ಚ ಶಂಕರಸ್ಯೈವ ಪೂಜನಾತ್ ।
ಯದ್ಯದ್ವಿಭೂತಿಮತ್ಸತ್ತ್ವಂ ಶಂಕರಸ್ಯೈವ ಪೂಜನಾತ್ ॥೨೪॥

ತಸ್ಮಾತ್ಪೂಜಾ ಪರಂ ಶ್ರೇಯೋ ದದಾತಿ ದಿತಿಜಾಃ ಸದಾ ।
ಗಚ್ಛಧ್ವಂ ದ್ರುತಮತ್ಯುಗ್ರಂ ತಪಶ್ಚರತ ಸುವ್ರತಾಃ ॥೨೫॥

ಶಿವಲಿಂಗಾರ್ಚಕಾ ಯೂಯಂ ಭಸ್ಮರುದ್ರಾಕ್ಷಭೂಷಣಾಃ ।
ರುದ್ರಪಂಚಾಕ್ಷರಾವೃತ್ತ್ಯಾ ತೋಷಯಧ್ವಂ ಮಹೇಶ್ವರಂ ॥೨೬॥

ಇತ್ಯುಕ್ತಾಸ್ತೇಽಥ ಕಾವ್ಯೇನ ನತ್ವಾ ದುಃಖವಿವರ್ಜಿತಾಃ ।
ಕಾವ್ಯಮನ್ವಾಹತೈಶ್ವರ್ಯಂ ಸ್ತವ್ಯಂ ಸ್ತುತ್ವಾದಿತೇಸ್ಸುತಾಃ ॥೨೭॥

ಯಯುಃ ಪ್ರಾಲೇಯಶಿಖರಿಂ ತಪಸೋ ಧೃತನಿಶ್ಚಯಾಃ ।
ರಮ್ಯಂ ವೃಕ್ಷಶತೋಪೇತಂ ಮೃಗಪಕ್ಷಿವಿರಾಜಿತಂ ॥೨೮॥

---

ದಿಕ್ಪಾಲಕರು, ಮುನಿಗಳು, ಗಂಧರ್ವರು, ಗರುಡರು, ಇವರ ಸ್ಥಾನಲಾಭ, ಇನ್ನೂ ಇತರವಿಧವಾದ ಮಹಾಸ್ಥಾನಗಳನ್ನು ಹೊಂದುವಿಕೆ, ಇವೆಲ್ಲವೂ ಮಹಾದೇವನ ಆರಾಧನೆಯಿಂದಲೇ ಲಭಿಸುವುವು. ಎಲೈ ದೈತ್ಯರೇ, ನೀವು ಸಾವಕಾಶಮಾಡದೆ ಈಗಲೇ ಅಲ್ಲಿಗೆ ಹೋಗಿ, ಉಗ್ರವಾದ ತಪಶ್ಚರ್ಯೆಯನ್ನು ಕೈಗೊಳ್ಳಿರಿ. ನಿಮಗೆ ಶಿವಾನುಗ್ರಹವು ಲಭಿಸುವುದು. ॥೨೦-೨೧-೨೨-೨೩-೨೪-೨೫॥

ನೀವು ಶಿವಲಿಂಗಾರ್ಚನೆಮಾಡುತ್ತಾ ಭಸ್ಮರುದ್ರಾಕ್ಷಿಗಳನ್ನು ಧರಿಸಿ, ಶ್ರೀರುದ್ರ, ಶಿವಪಂಚಾಕ್ಷರೀ ಇವುಗಳನ್ನು ಜಪಿಸುತ್ತಾ ಶಂಕರನನ್ನು ತೃಪ್ತಿಪಡಿಸಿರಿ.' ಎಂದು ಹೇಳಿದ ಶುಕ್ರಾಚಾರ್ಯನಿಗೆ ಈ ದೈತ್ಯರು ವಂದಿಸಿ, ಸ್ತುತಿಸಿ ಸಂತೋಷದಿಂದ ಹೊರಟರು. ॥೨೬-೨೭॥

ತಪಸ್ಸುಮಾಡುವ ದೃಢನಿಶ್ಚಯದಿಂದ ಅವರು ಹಿಮಾಲಯಶಿಖರಕ್ಕೆ ಹೋದರು. ಅಲ್ಲಿ ಅನೇಕವೃಕ್ಷಗಳೂ, ಮೃಗಪಕ್ಷಿಗಳೂ, ಕಮಲಕಲ್ಹಾರಗಳಿಂದ

ಸರೋವರೋರುಸಂರಾಜದ್ರಾಜೀವೋತ್ಫುಲ್ಲಹಲ್ಲಕಂ ।
ತತ್ತೀರೇ ಸರಿತಾಭೋಗತರಂಗಕ್ಲಾಂತ ಮಾರುತೇ ॥೨೯॥

ರುತೇ ಪಕ್ಷಿನಿಕಾಯಾನಾಂ ವಸಂತೋತ್ಫುಲ್ಲಶಾಖಿಷು ।
ನಿರುಧ್ಯಸ್ವಮನೋದಗ್ರಮುಗ್ರಾರ್ಜನಪರಾಸ್ತದಾ ॥೩೦॥

ತ್ರಿಕಾಲಂ ಸ್ನಾನಪರಮಾ ಭಸ್ಮರುದ್ರಾಕ್ಷಧಾರಣಾಃ ।
ತ್ಯಕ್ತೇಷಣಾಃ ತ್ರಿಷವಣಮುದಕಾಪ್ಲಾವಿವಿಗ್ರಹಾಃ ॥೩೧॥

ಪಂಚಾಗ್ನಿನಿರತಾಃ ಸರ್ವೇ ಮೂರ್ಧ್ನಿ ಸೂರ್ಯಕರಾರ್ದಿತಾಃ ।
ಹೇಮಂತೇ ಸರಸಿ ಸ್ವಸ್ಥಾಃ ವರ್ಷಾಸ್ವಭ್ರಾವಕಾಶಕಾಃ ॥೩೨॥

ಕಟುಧೂಮಾಶನಾಸ್ಸರ್ವೇ ಸೂಚ್ಯಗ್ರೇ ಸಮವಸ್ಥಿತಾಃ ।
ವಾಯುಪರ್ಣಾಂಬುಫಲಜಛದಭೋಜನಕಾರಿಣಃ ॥೩೩॥

ಶರಣಂ ಪ್ರತಿಪನ್ನಾಸ್ತೇ ಮಹಾದೇವಪದಾಂಬುಜಂ ।
ಪ್ರತ್ಯೇಕಮೇಷಾಂ ವರ್ಷಾಣಾಂ ಸಹಸ್ರಾಣಿ ತಪೋರತಾಃ ॥೩೪॥

---

ಶೋಭಿಸುವ ಸರೋವರಗಳೂ, ನದಿಯ ಅಲೆಗಳಮೇಲಿನ ತುಂತುರುಗಳನ್ನು ಹೊತ್ತು ಮಂದವಾಗಿ ಬೀಸುವ ಮಂದಮಾರುತವೂ, ವಸಂತಋತುವಿನಲ್ಲಿ ಚಿಗುರಿದ ಮರಗಳಲ್ಲಿ ಹಾರಾಡುತ್ತಾ ಗೂಡುಗಳಲ್ಲಿ ವಾಸಿಸುವ ಹಕ್ಕಿಗಳೂ, ಮನೋಹರವಾಗಿ ಕಾಣುತ್ತಿದ್ದುವು. ಇಂತಹ ಸ್ಥಳದಲ್ಲಿ ಮನಸ್ಸನ್ನು ದೃಢವಾಗಿರಿಸಿಕೊಂಡು ತಪಸ್ಸನ್ನಾಚರಿಸಲು ಪ್ರಯತ್ನಿಸಿದರು. ॥೨೮-೨೯-೩೦॥

ತ್ರಿಕಾಲಗಳಲ್ಲಿಯೂ ನದಿಗಳಲ್ಲಿ ಮುಳುಗಿ ಸ್ನಾನಮಾಡಿ, ಪತ್ನೀಪುತ್ರ, ಮೋಹಾದಿಗಳನ್ನು ತೊರೆದು, ಭಸ್ಮರುದ್ರಾಕ್ಷಿಧಾರಿಗಳಾಗಿ, ನಾಲ್ಕು ಕಡೆಗಳಲ್ಲಿಯೂ ಅಗ್ನಿಯನ್ನು ಪ್ರತಿಷ್ಠಿಸಿ, ಮೇಲೆ ಸೂರ್ಯಬಿಂಬವನ್ನು ನೋಡುತ್ತಾ, ತಪಸ್ಸಿಗೆ ಆರಂಭಿಸಿದರು. ಹಿಮಂತಋತುವಿನಲ್ಲಿ ಸರೋವರದ ಮಧ್ಯದಲ್ಲಿಯೂ, ವರ್ಷಋತುವಿನಲ್ಲಿ ಬಯಲಿನಲ್ಲಿಯೂ ನಿಂತು ತಪಸ್ಸನ್ನು ಮುಂದುವರಿಸಿದರು. ॥೩೧-೩೨॥

ಖಾರವಾದ ಹೊಗೆಯನ್ನು ಕುಡಿಯುತ್ತಾ ಸೂಜಿಗಳಮೇಲೆ ನಿಂತು ಕೆಲವು ಕಾಲ ತಪಸ್ಸುಮಾಡಿದರು. ಗಾಳಿ, ಎಲೆ, ನೀರು, ಹಣ್ಣು, ಚಿಗುರು ಇವುಗಳೇ ಅವರಿಗೆ ಆಗಾಗ ಆಹಾರವಾಗುತ್ತಿದ್ದುವು. ಅತ್ಯಂತನಿಯಮದಿಂದ ಶಂಕರನ

ನಿರುಚ್ಛ್ವಾಸಪರಾಃ ಸರ್ವೇ ಸ್ಥಾಣುವತ್ ಸ್ಥಾಣುತತ್ಪರಾಃ ।
ತೇಷಾಂ ತಪಸ್ಯಯಾ ತಪ್ತೈರ್ದೇವೈರುತ್ಸಾದಿತಾಪ್ಸರಾಃ ॥೩೫॥

ತೇ ಚಾಪ್ಸರಸವರ್ಗಾಣಾಮಾಲೋಕನವಿವರ್ಜಿತಾಃ ।
ದೇವಾನಾಂ ಭಯಮಾಜಹ್ರುರ್ದೈತ್ಯಾಸ್ತೇ ವೈ ತಪೋರತಾಃ ॥೩೬॥

ತೇಷಾಂ ತಪೋ ಮಹದ್ದೃಷ್ಟ್ವಾ ಸುರಾಯಾತಾಃ ಪಿತಾಮಹಂ ।
ಭೀತಾ ದೈತ್ಯತಪಸ್ಸ್ಯಾಭಿಃ ಶರಣಂ ಪದ್ಮಜಂ ತದಾ ॥೩೭॥

ಪ್ರೋಚುಃ ಪ್ರಾಂಜಲಯಸ್ಸರ್ವೇ ಶಕ್ರಮುಖ್ಯಾ ದಿವೌಕಸಃ ॥೩೮॥

॥ ಸೂತ ಉವಾಚ ॥

ಬಲಪುತ್ರಾ ಸದಾ ಬ್ರಹ್ಮನ್ ತಪೋನಿಷ್ಠಾ ಜಿತಕ್ರೋಧಾಃ ।
ತಾರಾಕ್ಷೋ ಮಕರಾಕ್ಷಶ್ಚ ವಿದ್ಯುನ್ಮಾಲೀ ಮಹಾಬಲಃ ॥೩೯॥

ಬಲಪ್ರಮಥನಾರ್ಚಾತೋ ಮಹಾಬಲಪರಾಕ್ರಮಾಃ ।
ನಾಸ್ಮಾಭಿರ್ಧರ್ಷಿತುಂ ಶಕ್ಯಾ ತೇಷಾಂ ಚೈವ ತಪಸ್ಯಯಾ ॥೪೦॥

ಸುರಾಸ್ಸಂತೋಷಿತಾ ಬ್ರಹ್ಮನ್ ತಾನ್ವರೇಣಾಭಿಯೋಜಯ ॥೪೧॥

---

ಪಾದಕಮಲವನ್ನೇ ಮೊರೆಹೊಕ್ಕು ಸಹಸ್ರವರ್ಷಪರ್ಯಂತ ತಪಸ್ಸನ್ನು ಮಾಡಿದರು. ॥೩೩-೩೪॥

ಪರಶಿವನಲ್ಲಿ ನೆಟ್ಟಮನಸ್ಸುಳ್ಳವರಾಗಿ, ಉಸಿರನ್ನೂ ಸಹ ಆಡದೆ ಮೋಟು ಮರದಂತೆ ನಿಂತು ಉಗ್ರತಪಸ್ಸನ್ನಾಚರಿಸಿದರು. ಆ ತಪೋಜ್ವಾಲೆಯಿಂದ ಲೋಕವೆಲ್ಲಾ ಸುಡಲಾರಂಭಿಸಿತು. ಅಪ್ಸರಾದಿಸಕಲದೇವತೆಗಳೂ ಕುರುಡರಂತಾದರು. ದೇವತೆಗಳು ದಿಗ್ಭ್ರಾಂತರಾದರು. ಕೊನೆಗೆ ಇಂದ್ರಾದಿದೇವತೆಗಳೂ ದಿಕ್ಕುಗೆಟ್ಟು ಬ್ರಹ್ಮನಸಮೀಪಕ್ಕೆ ಹೋಗಿ, ಅವನನ್ನು ಸ್ತುತಿಸಿ ಮೊರೆಹೊಕ್ಕು ಅಂಜಲಿಬದ್ಧರಾಗಿ ಈರೀತಿ ಹೇಳಿಕೊಂಡರು. ॥೩೫-೩೬-೩೭-೩೮॥

" ಪರಬ್ರಹ್ಮನೇ, ಬಲಾಸುರನ ಮಕ್ಕಳಾದ ತಾರಾಕ್ಷ, ಮಕರಾಕ್ಷ, ವಿದ್ಯುನ್ಮಾಲಿಯೆಂಬ ಮೂವರು ರಾಕ್ಷಸರು ಬಲಪ್ರಮಥನನಾದ ಶಂಕರನನ್ನು ಪೂಜಿಸುತ್ತಾ ವರವನ್ನು ಹೊಂದಲಿರುವರು. ಅಂತಹವರನ್ನು ಹಿಂಸಿಸಲು ನಮಗೆ ಸಾಮರ್ಥ್ಯವಿಲ್ಲ

ಇತ್ಥಂ ಗೀರ್ವಾಣವಚಸಾ ಸಹಸಾ ಪದ್ಮಜಸ್ತದಾ ।
ಯಯೌ ಹಂಸಸಮಾರೂಢೋ ಸುರೈರ್ದೈತ್ಯವರಾಂತಿಕಂ ॥೪೨॥

॥ ಸೂತ ಉವಾಚ ॥

ದೃಷ್ಟ್ವಾ ದೈತ್ಯಾಂಸ್ತಪೋಯುಕ್ತಾನಭ್ಯಭಾಷತ ಪದ್ಮಜಃ ।
ಭೋಭೋ ದೈತ್ಯಸುತಾ ಯೂಯಂ ಮತ್ತಃ ಕಿಮಭಿವಾಂಛತ ॥೪೩॥

ಭವತಾಂ ತಪಸಾ ತುಷ್ಟೋ ವೃಣುಧ್ವಂ ವರಮೀಪ್ಸಿತಂ ।
ವಾಣೀಪತೇಸ್ತದಾ ವಾಣೀಂ ಶ್ರುತ್ವಾ ತೇ ದಾನವೋತ್ತಮಾಃ ॥೪೪॥

ಪ್ರಣಮ್ಯ ಪದ್ಮಜಂ ಪ್ರೋಚುಃ ಸುರಾಣಾಂ ವಶ್ಯತಾಂ ಶಿವೇ ॥೪೫॥

॥ ದೈತ್ಯಾ ಊಚುಃ ॥

ಸ್ವಚ್ಛಂದಂ ಮರಣಂ ನೋಸ್ತು ಅವಧ್ಯಾಶ್ಚ ಸುರೈಸ್ಸದಾ ।
ಅಯೋರಜತಹೇಮಾದಿಪುರಂ ಪಕ್ಷಸಮನ್ವಿತಂ ॥೪೬॥

ಪುರಾಣಿ ಯತ್ರ ನೋ ಬ್ರಹ್ಮನ್ ಗತಿಸ್ತತ್ರ ವ್ರಜಂತು ನಃ ।
ಯದಾ ಸರ್ವೇ ಸಮೇಷ್ಯಾಮೋ ಯದ್ಯೇಕಸ್ಮಿನ್ ಕ್ಷಣೇವಿಧೇ ॥೪೭॥

---

ವಾಗಿದೆ. ನಾವೂ ಸಹ ಆ ತಪಸ್ಸಿಗೆ ಮೆಚ್ಚಿರುವೆವು. ನೀನಾದರೂ ಹೋಗಿ ಅವರಿಗೆ ವರವಿತ್ತು ತಪಸ್ಸನ್ನು ನಿಲ್ಲಿಸುವಂತೆ ಮಾಡು." ॥೩೯-೪೦-೪೧॥

ಎಂದು ಪ್ರಾರ್ಥಿಸಿದ ದೇವತೆಗಳ ಮೊರೆಯನ್ನು ಕೇಳಿ ಬ್ರಹ್ಮನು ಜಾಗ್ರತೆ ಅವರೊಡನೆ ಹಂಸಾರೂಢನಾಗಿ ಹೊರಟು, ಆ ಮೂವರು ದೈತ್ಯತಪಸ್ವಿಗಳ ಸವಿಾಪಕ್ಕೆ ಹೋಗಿ, "ದೈತ್ಯಶ್ರೇಷ್ಠರೇ, ನಾನು ಬ್ರಹ್ಮನು. ನಿಮ್ಮ ತಪಸ್ಸಿಗೆ ನಾನು ಮೆಚ್ಚಿರುವೆನು. ನನ್ನಿಂದ ಬೇಕಾದ ವರವಾವುದು? ಕೇಳಿರಿ. ಈಗಲೇ ಕೊಡುವೆನು" ಎಂದು ನಯವಾಗಿ ಮಾತನಾಡಲು ಬ್ರಹ್ಮನ ಆ ಮಾತನ್ನು ಕೇಳಿ ದೈತ್ಯಮುನಿಗಳು ದೇವತೆಗಳೆದುರಿನಲ್ಲಿ ಹೀಗೆ ವರಬೇಡಿದರು. ॥೪೩-೪೪-೪೫॥

"ಪರಬ್ರಹ್ಮನೇ, ನಮಗೆ ಸ್ವೇಚ್ಛಾಮರಣವು ಸಂಭವಿಸಬೇಕು. ನಾವು ಯಾವ ದೇವತೆಗಳಿಗೂ ಸೋಲಕೂಡದು. ಯಾರಿಂದಲೂ ನಮಗೆ ಮರಣವಿರಕೂಡದು. ನಮ್ಮ ಮೂವರಿಗೂ ಕಬ್ಬಿಣ, ಬೆಳ್ಳಿ, ಚಿನ್ನ ಈ ಮೂರು ಲೋಹಗ

ಏಕೇನೈವೇಷುಣಾ ಹನ್ಯಾತ್ತದಾ ನೋಽಸ್ತು ವಧೋ ಧ್ರುವಂ ।
ಇತಿ ದೈತ್ಯವಚಶ್ಶ್ರುತ್ವಾ ವಿಧಿಸ್ತಾನಭ್ಯಭಾಷತ ॥೪೮॥

ಏಷ ವೋಽಸ್ತು ವರೋ ದೈತ್ಯಾಃ ನಿವರ್ತಧ್ವಂ ತಪೋನಿಧೇಃ ॥೪೯॥

ತಥೇತಿ ತೇ ದೈತ್ಯಸುತಾ ಜಹರ್ಷುರ್
ವಿಧೇಃ ಸುವಾಕ್ಯೇನ ಬಲೋನ್ನತಿಂ ಗತಾಃ ।
ಪುರಾಣಿ ತೇಷಾಂ ಪ್ರಬಭೂವುರಂಬಿಕೇ
ಮೋದಾಯ ವ್ಯಕ್ತಾನಿ ತ್ರಯಣಾನಿ ತೇಷಾಂ ॥೫೦॥

ವಿಧಿಸ್ಸುರೈಶ್ಚಾಭಿಜಗಾಮ ಲೋಕಂ
ಪ್ರತಾರಿತಾಶ್ಚೇತಿ ತದಾ ಸುರಾ ಜಗುಃ ।
ತದೈವ ತೇ ದೈತ್ಯಸುತಾ ಬಲಿಷ್ಠಾ
ಜಿಗ್ಯುಃ ಸುರಾಂಶ್ಚಾಪಿ ನಿಜಘ್ನುರುದ್ಧತಾಃ ॥೫೧॥

---

ಳಿಂದ ನಿರ್ಮಿತವಾಗಿ ರೆಕ್ಕೆಗಳಿಂದ ಕೂಡಿದ ಮೂರು ಊರುಗಳು ನಿರ್ಮಾಣವಾಗಬೇಕು. ನಾವು ಸಂಚರಿಸುವಾಗಲೆಲ್ಲಾ ನಮ್ಮ ಜೊತೆಯಲ್ಲಿಯೇ ಆ ಊರುಗಳೂ ಬರುವಂತಿರಬೇಕು. ಈ ನಾವು ಮೂವರೂ ಪುರಸಹಿತರಾಗಿ ಒಂದುಕಡೆ ಸಂಧಿಸಿ, ನಮ್ಮ ಮೂವರನ್ನೂ ಒಂದು ಕಡೆ ಸೇರಿಸಿ, ನಮ್ಮ ಮೂವರನ್ನೂ ಒಂದೇ ಬಾಣದಿಂದ ಒಂದೇ ಕ್ಷಣದಲ್ಲಿ ಯಾರಾದರೂ ಹೊಡೆಯಬಲ್ಲವರಾದರೆ ಆಗ ನಮಗೆ ಮರಣ ಸಂಭವಿಸಲಿ. ಇದೇ ನಮ್ಮ ಮುಖ್ಯ ಕೋರಿಕೆ" ಎಂದು ಬೇಡಿಕೊಳ್ಳಲು ಬ್ರಹ್ಮನು ಆ ದೈತ್ಯರನ್ನು ನೋಡಿ, ನಿಮ್ಮಿಷ್ಟದಂತೆಯೇ ಆಗಲಿ ಎಂದು ವರವಿತ್ತು ತಪಸ್ಸನ್ನು ನಿಲ್ಲಿಸುವಂತೆ ಆಜ್ಞಾಪಿಸಿದನು. ॥೪೬-೪೭-೪೮-೪೯॥

ಬ್ರಹ್ಮನ ಮಾತಿನಂತೆ ಆ ದೈತ್ಯರು ತಪಸ್ಸನ್ನು ನಿಲ್ಲಿಸಿ ಹರ್ಷದಿಂದ ಮಹಾಬಲಿಷ್ಠರೆನಿಸಿದರು. ಅವರ ಇಷ್ಟದಂತೆ ಕೂಡಲೇ ತ್ರಿಪುರಗಳು ಸ್ಪಷ್ಟವಾಗಿ ಅಂತರಿಕ್ಷದಲ್ಲಿ ನಿಂತುಬಿಟ್ಟವು. ॥೫೦॥

ದೇವತೆಗಳೊಡನೆ ಬ್ರಹ್ಮನು ಸ್ವಸ್ಥಾನಕ್ಕೆ ತೆರಳಿದನು. ಆ ದೈತ್ಯರು ಮೋಸಹೊಂದಿದರೆಂದು ದೇವತೆಗಳು ತಿಳಿದರು. ಆಗಲೇ ಆ ದೈತ್ಯರು ಮಹಾಬಲಿಷ್ಠರಾಗಿ ಯುದ್ಧಕ್ಕೆ ಹೊರಟು ದೇವಲೋಕದಲ್ಲಿದ್ದ ಸಕಲ ದೇವತೆಗಳನ್ನೂ ಸೋಲಿಸಿ ಅಟ್ಟಿದರು. ॥೫೧॥

ಹಸ್ತನ್ಯಸ್ತೋರುಶಸ್ತ್ರೈಃ ಕರಮುಖವಿಧೃತೈಃ ಕಾರ್ಮುಕಜ್ಯಾವಿನಿರ್ಯ
ದ್ಧಾರಾಸಾರಶರಾವರ್ಶ್ಯೆಃ ಸುರಗಣಂ ಜಘ್ನುಶ್ಚ ತೇ ವೈ ರಣೇ ।
ಸನ್ನದ್ಧೋದ್ಧತ ಬಾಹುದಂಡವಿಧೃತೈರ್ದಂಡೈಶ್ಚ ಖಂಡೀಕೃತಾ
ಮುಂಡೈಃ ಷಂಡವರಾಂಡಭಾಂಡಮುಸಕೃತ್ಕುರ್ವಂತಿ ಶಂಖೈರಣೇ ॥೫೨॥

ಇತಿ ಶ್ರೀ ಶಿವರಹಸ್ಯೇ ಈಶ್ವರಾಖ್ಯೇ ದಶಮಾಂಶೇ ಪೂರ್ವಾರ್ಧೇ
ತ್ರಿಪುರಾಸುರತಪಶ್ಚರ್ಯಾಯಾಂ ಬ್ರಹ್ಮಣಾ ವರಪ್ರದಾನಕಥನಂ ನಾಮ
ಷೋಡಶೋಽಧ್ಯಾಯಃ

---

ಆ ದೈತ್ಯರು ಪ್ರಬಲವಾದ ಅಸ್ತ್ರಶಸ್ತ್ರಾದಿಗಳನ್ನು ಹಿಡಿದು ಧನುಸ್ಸಿನಿಂದ ಬಾಣಗಳ ಮಳೆಯನ್ನು ಸುರಿಸುತ್ತಾ ದೇವತೆಗಳನ್ನು ಧ್ವಂಸಮಾಡುತ್ತಿದ್ದರು. ಅಲ್ಲದೆ ಕೈಯ್ಯಲ್ಲಿ ಬಲಿಷ್ಠವಾದ ದಂಡಾಯುಧಗಳನ್ನೂ ಕತ್ತಿಗಳನ್ನೂ ಹಿಡಿದು ಶತ್ರುಗಳ ರುಂಡಮುಂಡಗಳನ್ನು ಬೇರೆಮಾಡಿ ರಣಾಂಗಣವನ್ನೆಲ್ಲಾ ಶವಮಯವನ್ನಾಗಿ ಮಾಡಿದರು. ಮತ್ತು ಶಂಖಧ್ವನಿಯಿಂದ ಜಗತ್ತನ್ನೇ ಮರುಳುಗೊಳಿಸಿದರು. ಎಂದು ಪರಶಿವನು ಪಾರ್ವತಿಗೂ ಮಂಕಣಮುನಿಗೂ ತಿಳಿಸಿದುದನ್ನು ಜೈಗೀಷವ್ಯ ಮಹಾಮುನಿಗೆ ಕುಮಾರಸ್ವಾಮಿಯು ವಿವರಿಸಿದನು. ॥೫೨॥

ಇಲ್ಲಿಗೆ ಶ್ರೀ ಶಿವರಹಸ್ಯದಲ್ಲಿ ದಶಮಾಂಶದಲ್ಲಿ ಹದಿನಾರನೆಯ ಅಧ್ಯಾಯವು
ಮುಗಿದುದು.



॥ ಶ್ರೀಃ ॥

॥ ಶ್ರೀ ಶಿವಾಯ ನಮಃ ॥

# ಅಥ ಶ್ರೀಶಿವರಹಸ್ಯೇ

## ಈಶಾನಾಖ್ಯೇ

## ದಶಮಾಂಶಪೂರ್ವಾರ್ಧೇ

## ಸಪ್ತದಶೋಽಧ್ಯಾಯಃ

॥ ಶ್ರೀಈಶ್ವರ ಉವಾಚ ॥

ತತೋ ದೈತ್ಯಾ ಮದಾವಿಷ್ಟಾಸ್ತ್ರಿವಿಷ್ಟಪನಿವಾಸಿನಾಂ ।
ಮದಂ ಚ ಮದಯಂತಸ್ತೇ ಸ್ವೇನಾನೀಕೇನ ದಂಶಿತಾಃ ॥೧॥

ರಣಮೂರ್ಧನಿ ತೇ ದೈತ್ಯಾ ದೈವತೈಃ ಸಮಯೋಧಯನ್ ।
ಶಸ್ತ್ರಾಸ್ತ್ರದಂಡಪಾಷಾಣೈರ್ಮುಸಲೈಸ್ತೈರ್ಗದಾಯುಧೈಃ ॥೨॥

ಅಸಿಕುಂತಹಲೈರ್ಯಂತ್ರೈರ್ಬಾಣೈರ್ಬಾಣಾಸನಚ್ಯುತೈಃ ।
ಧುರಂಧರೈಸ್ಸಿಂಧುರೈಶ್ಚ ಚತುರಂಗಬಲೈಸ್ತಥಾ ॥೩॥

ಹಯಾಹಯೈರ್ಗಜೈಶ್ಚೈವ ದಂತಿಭಿಶ್ಚ ರಥಾರಥೈಃ ।
ಪತ್ತಿನಃ ಪತ್ತಿಭಿಸ್ಸಾರ್ಧಂ ಕವಚೈಃ ಸುನಿಷಂಗಿಣಃ ॥೪॥

---

## ಹದಿನೇಳನೆಯ ಅಧ್ಯಾಯ

ಅನಂತರ ಆ ಮೂವರು ದೈತ್ಯರು ಬಲಯುತರಾಗಿ ದೇವಲೋಕದವರನ್ನೆಲ್ಲಾ ಸದೆಬಡಿಯಲಾರಂಭಿಸಿದರು. ದೇವತೆಗಳೂ ಅವರೊಡನೆ ಹೊಡೆದಾಡಿದರು. ಶಸ್ತ್ರಾಸ್ತ್ರಗಳು, ದಂಡಾಯುಧಗಳು, ಬಂಡೆಗಳು, ಒನಕೆ, ಗದೆ, ಕತ್ತಿ, ಕುಂತ, ಹಲ, ಬಲಿಷ್ಠವಾದ ಧನುಸ್ಸು ಇವುಗಳನ್ನು ಬಹಳವಾಗಿ ಉಪಯೋಗಿಸುತ್ತಿದ್ದರು. ಮಹಾಬಲಿಷ್ಠವಾದ ಕುದುರೆಗಳು, ಆನೆಗಳು, ಚತುರಂಗಬಲಗಳು, ಆನೆಗಳ ಕಾಲಾಳುಗಳ ತಂಡತಂಡಗಳು, ಒಟ್ಟುಗೂಡಿ ಬಲಿಷ್ಠಗಳಾದ ಆವರಣಗಳನ್ನು ಪಡೆದು ಕಾಪಾಡುತ್ತಿದ್ದವು. ॥೧-೨-೩-೪॥

ಖಡ್ಗಖೇಟಧರಾ ದೈತ್ಯಾಸ್ಸುರಾಶ್ಚ ಯುಯುಧುರ್ಯುಧಿ ।
ವಸಂತ ಸೂರ್ಯೋರುಕರಚಾಕಚಕ್ಯಾಸಿಭಿರ್ಮುದೇ ॥೫॥

ಮಂಡಲಾನಿ ತದಾ ಚಕ್ರುರಸಿನಿಕ್ಷೇಪಣೈಸ್ತದಾ ।
ಶತಂ ಸಹಸ್ರಂ ನಿಯುತಂ ಅಯುತಂ ಪ್ರಯುತಂ ತಥಾ ॥೬॥

ನಿಜಘ್ನುಃ ಶರವರ್ಷೈಸ್ತೇ ಅನ್ಯೋನ್ಯಂ ತೌ ತತಕ್ಷತುಃ ।
ಶರಾಂಚಿತಾಂಗಸರ್ವಸ್ವೌ ವಸಂತೇ ಕಿಂಶುಕಾವಿವ ॥೭॥

ಮಕರಾಕ್ಷೋಥ ಯುಯುಧೇ ದೇವೇಂದ್ರೇಣ ಸುರೈಸ್ಸಮಂ ।
ದೈತ್ಯಾಶ್ಚೋದ್ರಿಕ್ತಶಸ್ತ್ರಾಸ್ತ್ರೇ ತಾರಾಕ್ಷೇಣಾಪ್ಯಪಾಂಪತಿಃ ॥೮॥

ಯುಯುಧೇ ಪಾಶಸರ್ವಸ್ವೈರ್ವಾರುಣೈಃ ಸ್ವಗಣೈಸ್ಸಹ ।
ಮಯೂಖಮಾಲೀ ಸ ತದಾ ವಿದ್ಯುನ್ಮಾಲಿನಮಾಹ್ವಯನ್ ॥೯॥

ನಿಸ್ಸಾಣಭೇರೀಭಾಂಕಾರ ಗರ್ಜಿತಾನಕಗೋಮುಖೈಃ ।
ತರ್ಜಿತಾಂಭೋನಿಧಿರವೈರ್ಭೀರೂಣಾಂ ಭಯದಾಯಕೈಃ ॥೧೦॥

ಗದಾನಿಪಾತಶಬ್ದೈಶ್ಚ ಕವಚಾನಾಂ ಕಚಾಕಚೈಃ ।
ಕರಿಬೃಂಹಿತಯೋದ್ಧಾನಾಂ ಕೂಜಿತಾಮಿತರೇತರಂ ॥೧೧॥

---

ವಸಂತಋತುವಿನ ಸೂರ್ಯಕಿರಣಗಳಂತೆ ತಳತಳನೆ ಹೊಳೆಯುವ ಖಡ್ಗಾದ್ಯಾಯುಧಗಳನ್ನು ಹಿಡಿದು, ದೇವರಾಕ್ಷಸರು ಪರಸ್ಪರವಾಗಿ ಹೊಡೆದಾಡಲಾರಂಭಿಸಿದರು. ನೂರು, ಸಾವಿರ, ಹತ್ತುಸಾವಿರ, ಲಕ್ಷೋಪಲಕ್ಷ ಸಂಖ್ಯೆಗಳಿಂದ ಬಾಣ ಪ್ರಯೋಗಮಾಡುತ್ತಾ ಒಬ್ಬರನ್ನೊಬ್ಬರು ಹೊಡೆಯುತ್ತಿದ್ದರು. ದೇಹದಲ್ಲಿ ಗಾಯಗೊಂಡು ನಿಂತಿದ್ದ ಅವರು ವಸಂತಋತುವಿನಲ್ಲಿ ಹೂಬಿಟ್ಟ ಮುತ್ತುಗದ ಮರದಂತೆ ಕಾಣುತ್ತಿದ್ದರು. ಮಕರಾಕ್ಷನೆಂಬ ದೈತ್ಯನು ದೇವೇಂದ್ರನೊಡನೆಯೂ, ತಾರಾಕ್ಷನು ವರುಣನೊಡನೆಯೂ ಘೋರಯುದ್ಧಮಾಡಿದರು. ||೫-೬-೭-೮||

ವರುಣನು ತನ್ನ ನಾನಾವಿಧವಾದ ಪಾಶಾಯುಧಗಳನ್ನು ಆ ರಾಕ್ಷಸನ ಮೇಲೆ ಪ್ರಯೋಗಿಸಿದನು. ಸೂರ್ಯದೇವನು ವಿದ್ಯುನ್ಮಾಲಿಯೊಡನೆ ಹೋರಾಡಿದನು. ತಮ್ಮಟೆ, ನಗಾರಿ, ಭಾಂಕಾರ ಇವೇ ಮೊದಲಾದ ವಾದ್ಯಘೋಷವು ಸಮುದ್ರದ ಭಾಂಕಾರವನ್ನು ಕಮ್ಮಿಮಾಡುತ್ತಿದ್ದಿತು. ಯುದ್ಧಕಾಲದಲ್ಲಿ ಆಯುಧಗಳ ಖಣಿಖಣಿ

ಹಯಹೇಷಿತಶಬ್ದೈಶ್ಚ ರಥನೇಮಿಸ್ವನಾಂ ತಥಾ ।
ಖಂ ದ್ಯಾಂ ನಿರುಂಧತಸ್ತದಾ ಖಂ ರಾವೋತ್ಯಂತದಾರುಣಃ ॥೧೨॥

ವಸಂತಾರ್ಕಕರಾಸಾರ ಪ್ರವಿದ್ಯುದಸಿಭಿಃ ಸ್ಫುಟೈಃ ।
ವರ್ಷಾಸು ಶಲಭಾಸಂಘಸಮಾವೃತನಭೋ ಯಥಾ ॥೧೩॥

ತಥಾ ಶರಾಸಾರವರಂ ನಭೋಭೂದ್ವೈತ್ಯದಾರುಣಂ ।
ಅನ್ಯೋನ್ಯಮತ್ಸರಾರಾವಕನಕತ್ಸರುಸತ್ಕರೈಃ ॥೧೪॥

ಮಂಡಲೀಕೃತಕೋದಂಡ ಚಾರುಕಾಂಡಶರಾವರೈಃ ।
ಕಂಕರೂಕ್ಷಮಹಾಪಕ್ಷ್ಮಲಕ್ಷೀಕೃತಶರೈಸ್ಸುರಾಃ ॥೧೫॥

ನಾರಾಚೈರ್ವತ್ಸದಂತೈಶ್ಚ ಕ್ಷುರಪ್ರೈಃ ಪ್ರೇಕ್ಷಿತಾಂಗಕಾಃ ।
ವಿಪಾಟಿಪಾಟಿತೋರಸ್ಕಾಃ ದೈತ್ಯಾಶ್ಚೈವ ಸುರಾಸ್ತಥಾ ॥೧೬॥

---

ಧ್ವನಿಯೂ, ಆನೆ ಕುದುರೆಗಳ ನುಗ್ಗಾಟವೂ, ಕೂದಲುಗಳನ್ನು ಪರಸ್ಪರವಾಗಿ ಹಿಡಿದು ಹೊಡೆಯುವ ಯೋಧರ ರಭಸವೂ ಮಿತಿಮೀರಿ ಕೇಳುವಂತಾಯಿತು. ॥೯-೧೦-೧೧॥

ಕುದುರೆಗಳ ಕೆನೆಯುವ ಧ್ವನಿಯೂ, ರಥಚಕ್ರಧ್ವನಿಯೂ ಅಂತರಿಕ್ಷವನ್ನು ಮುಚ್ಚಿದ್ದಿತು. ವಸಂತಋತುವಿನ ಸೂರ್ಯಕಿರಣದಂತೆ ಹೊಳೆಯುವ ಕತ್ತಿಯ ಹೊಳಪು ಎಲ್ಲೆಲ್ಲಿಯೂ ವ್ಯಾಪಿಸಿದ್ದಿತು. ಆ ಕತ್ತಿಗಳು ವರ್ಷಋತುವಿನಲ್ಲಿ ಕಪಟಗಳು ಹಾರಾಡುವಂತೆ ಕಾಣುತ್ತಿದ್ದುವು. ॥೧೨-೧೩॥

ಅಂತರಿಕ್ಷವೆಲ್ಲಾ ಬಾಣಗಳ ಮಳೆಯಿಂದ ತುಂಬಿಹೋಯಿತು. ದೇವರಾಕ್ಷಸರ ಪರಸ್ಪರ ಅಸೂಯಾಪರವಾದ ವಾಕ್ಯಗಳಿಂದಲೂ, ದುಂಡಾಗಿರುವ ಹದ್ದಿನ ಗರಿಗಳಿಂದ ಕೂಡಿ ಗುರಿಯನ್ನು ಹಿಡಿದು ಹೋಗುತ್ತಿರುವ ಬಾಣಗಳಿಂದಲೂ, ವತ್ಸದಂತವೇ ಮೊದಲಾದ ಬಾಣಗಳಿಂದ ಕತ್ತರಿಸಲ್ಪಟ್ಟ ಅವಯುವಗಳಿಂದಲೂ, ಎದೆಯೊಡೆದು ರಕ್ತಸುರಿಯುವ ದೇವರಾಕ್ಷಸರಿಂದಲೂ ಆ ಸಮರಾಂಗಣವು ತುಂಬಿಹೋಗಿದ್ದಿತು. ॥೧೪-೧೫-೧೬॥.

ನಾರಾಚೋತ್ಪನ್ನಕವಚಾಃ ವತ್ಸದಂತೈಶ್ಚ ದಂಶಿತಾಃ ।
ನಿಜಘ್ನುಶ್ಶರವರ್ಷೈಸ್ತೇ ಸ್ವಮರ್ಮಸು ಮುಮೂರ್ಷವಃ ॥೧೭॥

ಅನ್ಯೋನ್ಯಂ ಚಿಚ್ಛಿದುರ್ಬಾಣೈಶ್ಶತಶೋಽಥ ಸಹಸ್ರಶಃ ।
ಮಕರಾಕ್ಷಃ ಸಹಸ್ರಾಕ್ಷಂ ವಿವ್ಯಾಧ ನಿಶಿತೈಶರೈಃ ॥೧೮॥

ಕರಟೇ ಕಲಭಾಗೇ ಚ ಶತೇನಾನತಪರ್ವಣಾ ।
ಕುಂಭಾಂತರೇ ಸಹಸ್ರೈಶ್ಚ ದಂತವೇಷ್ಟೈಶ್ಶತೋತ್ತರೈಃ ॥೧೯॥

ನಖಸಂಧಿಷು ಸರ್ವೇಷು ಕರೀಂದ್ರಂ ಸಮವಾಕಿರತ್ ।
ಸಫಲೈರಫಲೀಭೂತೈಃ ಸ್ವಶರೈರಾವೃತೋರಸಿ ॥೨೦॥

ನಿಜಘಾನ ಸ ದೈತ್ಯೇಂದ್ರಸ್ತಮಿಂದ್ರಮಪಿ ಸತ್ತಮ ।
ಇಂದ್ರೋಽಪಿ ಮಕರಾಕ್ಷಂ ತಂ ಶರೈರ್ವಿವ್ಯಾಧ ಸಪ್ತಭಿಃ ॥೨೧॥

ವಕ್ಷೇ ಶೀರ್ಷೇ ತಥಾ ಮುಷ್ಟೌ ಕವಚೈಶ್ಚ ಶತಂ ಶರೈಃ ।
ಧನುರ್ಜ್ಯಾಮಚ್ಛಿನತ್ತಸ್ಯ ಯಂತಾರಂ ತರಸಾ ರಣೇ ॥೨೨॥

---

ಆ ದೈತ್ಯರ ಕವಚಗಳು ಬಾಣಗಳಿಂದಲೂ ವತ್ಸದಂತವೆಂಬ ಬಾಣಗಳಿಂದಲೂ ಕತ್ತರಿಸಿಹೋಗುತ್ತಿದ್ದಿತು. ಪ್ರತಿಪಕ್ಷದಿಂದ ಬರುವ ಬಾಣಪರಂಪರೆಯು ಪರಸ್ಪರ ಮರ್ಮಸ್ಥಳವನ್ನು ಭೇದಿಸುತ್ತಿದ್ದಿತು. ಹೀಗೆ ನೂರು, ಸಹಸ್ರ, ಈ ಸಂಖ್ಯೆಗಳಾದ ಬಾಣಗಳಿಂದ ಮಕರಾಕ್ಷನು ದೇವೇಂದ್ರನನ್ನು ನಾನಾರೀತಿಯಾಗಿ ಹೊಡೆಯುತ್ತಿದ್ದನು. ॥೧೭-೧೮॥

ಹೆಣ್ಣಾನೆಗಳ ಕಪೋಲಪ್ರದೇಶದಲ್ಲಿಯೂ, ಕುಂಭಸ್ಥಳಗಳಲ್ಲಿಯೂ, ದಂತಪ್ರದೇಶಗಳ ಮೇಲೆಯೂ, ಉಗುರುಸಂದಿಗಳಿಗೂ ಶತ್ರುಪಕ್ಷದವರು ಅಸಂಖ್ಯಾತವಾದ ಕ್ರೂರ ಬಾಣಗಳನ್ನು ಎಸೆಯುತ್ತಿದ್ದರು. ಅವರಿಂದ ಪ್ರಯೋಗಿಸಲ್ಪಟ್ಟ ಕೆಲವು ಬಾಣಗಳು ನಿಷ್ಫಲವಾಗಿಯೂ, ಸಫಲವಾಗಿಯೂ ಆಗುತ್ತಿದ್ದುವು. ॥೧೯-೨೦॥

ಮಕರಾಕ್ಷನು ಬಹುವಾಗಿ ಇಂದ್ರನ ಮೇಲೆ ಬಾಣಪ್ರಯೋಗಮಾಡುತ್ತಿರುವಾಗ ಇಂದ್ರನೂ ಸಹ ಮಕರಾಕ್ಷನ ಎದೆ, ತಲೆ, ಮುಷ್ಟಿ, ಕವಚ ಮುಂತಾದುವುಗಳು ನಾಶವಾಗುವಂತೆ ಏಳು ಬಾಣಗಳನ್ನೂ, ಹಾಗೆಯೇ ಅನೇಕ ಬಾಣಗಳನ್ನು

ರಥೇ ಧ್ವಜೇ ಚ ಕವಚೇ ಯೋಕ್ತ್ರೇ ಚ ಹಯಸಾರಥೌ ।
ಪಾತಯಂತಃ ಶರಾಸಾರಮನ್ಯೋನ್ಯಂತೇ ಸುರಾಸುರಾಃ ॥೨೩॥

ಮಯೂಖಮಾಲಿನಂ ಚಾಪಿ ವಿದ್ಯುನ್ಮಾಲೀ ತದಾಚ್ಛಿನತ್ ।
ಶರಾಸಾರೈರ್ಯಥೈವಾರ್ಕಂ ಪ್ರಾವೃಟ್ಕಾಲಪಯೋದವತ್ ॥೨೪॥

ತದಾರ್ಕೋಽಪಿ ತದಾಚ್ಛನ್ನೋಽಪ್ಯಚ್ಛನ್ನೋ ವಾರ್ಷಕಾಲಿಕಃ ।
ನ ಚ ವ್ಯಕ್ತಂ ನಚಾವ್ಯಕ್ತಮಭೂತ್ತಚ್ಛರಪೀಡಿತಃ ॥೨೫॥

ತದ್ರಥೇ ಧ್ವಜವೃಂದೇ ಚ ತದ್ವಕ್ಷಸಿ ಹಯೇ ತಥಾ ।
ತದ್ಯಂತರಿ ಶರಾಸಾರಮವರ್ಷತ್ ಸ್ವಕರಚ್ಯುತೈಃ ॥೨೬॥

ಯಥಾ ಸೂರ್ಯಕರೋತ್ಸೃಷ್ಟಾ ವೃಷ್ಟಿಸ್ಸಸ್ಯಾಭಿವೃದ್ಧಯೇ ।
ತದ್ದೈತ್ಯಹಯಮುಖ್ಯೇಷು ಪಾತಯನ್ ಖಂಡಯನ್‌ರವಿಃ ॥೨೭॥

---

ಪ್ರಯೋಗಿಸಿ, ಮಕರಾಕ್ಷನ ಧನುಸ್ಸಿನ ಮೌರ್ವಿಯನ್ನೂ ಅವನ ಸಾರಥಿಯನ್ನೂ ಕತ್ತರಿಸಿ ಹಾಕಿದನು. ॥೨೧-೨೨॥

ಹೀಗೆ ದೇವರಾಕ್ಷಸರು ಬಾಣವರ್ಷಗಳನ್ನು ಸುರಿಸುತ್ತಾ, ತಮ್ಮ ಶತ್ರುರಥ, ಧ್ವಜ, ಕವಚ, ಕಡಿವಾಣ, ಸಾರಥಿ ಇವರನ್ನು ಬೀಳಿಸುತ್ತಾ ಯುದ್ಧಮಾಡುತ್ತಿದ್ದರು. ವಿದ್ಯುನ್ಮಾಲಿಯು ಮಯೂಖಮಾಲಿಯನ್ನು (ಸೂರ್ಯದೇವ) ವರ್ಷಋತುವಿನ ಮೇಘವು ಸೂರ್ಯಮಂಡಲವನ್ನು ಮುಚ್ಚುವಂತೆ ಬಾಣಪರಂಪರೆಯಿಂದ ಮುಚ್ಚಿದನು. ॥೨೩-೨೪॥

ಆಗ ಸೂರ್ಯನು ಮೇಘಮಧ್ಯವರ್ತಿಯಾದ ರವಿಮಂಡಲದಂತೆ ಆ ರಾಕ್ಷಸನ ಬಾಣಪರಂಪರೆಯ ಮಧ್ಯದಲ್ಲಿ ಸಿಕ್ಕಿಬಿದ್ದು, ವ್ಯಕ್ತವಾಗಿ ಮತ್ತು ಅವ್ಯಕ್ತವಾಗಿಯೂ ಕಾಣಲಾರಂಭಿಸಿದನು. ಮತ್ತೂ ಮೇಘ ಮಧ್ಯೇ ತನ್ನ ಕಿರಣಗಳನ್ನು ನುಗ್ಗಿಸಿ ವೃಷ್ಟಿಯನ್ನುಂಟುಮಾಡಿ ಭೂಲೋಕದ ಸಸ್ಯವೃಂದವನ್ನು ರಕ್ಷಿಸುವಂತೆ, ಮಯೂಖಮಾಲಿಯು ತನ್ನ ಬಾಣವೃಷ್ಟಿಯಿಂದ ಆ ರಾಕ್ಷಸನ ರಥ, ಧ್ವಜ, ಸಾರಥಿ, ಕುದುರೆ ಮೊದಲಾದುವುಗಳನ್ನು ಕತ್ತರಿಸಲಾರಂಭಿಸಿದನು. ॥೨೫-೨೬-೨೭॥

ಕೇಷಾಂಚಿದ್ಬಾಹವಶ್ಛಿನ್ನಾಃ ಶಿರಾಂಸಿ ನ್ಯಪತನ್ ಕ್ಷಿತೌ ।
ಮಹಾವಾತಸಮುತ್ಥೇನ ವೃಂತಾತ್ತಾಲಚ್ಯುತಿರ್ಯಥಾ ॥೨೮॥

ತಾರಾಕ್ಷೋಽಪಿ ತದಾ ತತ್ರ ವರುಣಂ ಸಮರಾಂಗಣೇ ।
ರಥಸ್ಥೋಽಭಿಜಘಾನಾಥ ಶರೈರಾನರ್ತಪರ್ವಭಿಃ ॥೨೯॥

ಶಿಂಶುಮಾರೋಽಸುರಾರೀಣಾಂ ಸಮರೇ ಸೋಽರಿಮರ್ದನಃ ।
ತಾರಾಕ್ಷಸ್ಯ ಮಹಾವಕ್ಷೋ ವಿದದಾರ ಶಿತೈಃ ಶರೈಃ ॥೩೦॥

ಯಂತಾರಂ ಚ ತ್ರಿಷಷ್ಟ್ಯಾ ತು ಸಪ್ತತ್ಯಾ ವಾಜಿನಸ್ತಥಾ ।
ಸಸ್ರೌ ತತ್ರ ಮಹಾವೇಗಾ ಅಸೃಗ್ಘೋರಾ ತರಂಗಿಣೀ ॥೩೧॥

ಮೇದೋ ವಸಾಮಾಂಸಪಂಕಾಗಜೋರುಪುಲಿನಾ ತದಾ ।
ಛತ್ರಚಾಮರಫೇನೌಘಾ ಭೀರೂಣಾಂ ಭಯವರ್ಧನಾಃ ॥೩೨॥

---

ಆ ಮಧ್ಯದಲ್ಲಿ ಕೆಲವರ ತೋಳುಗಳು ಕತ್ತರಿಸಿಹೋದವು. ಕೆಲವರ ತಲೆಗಳು ಉರುಳಿದುವು. ಗಾಳಿಯಿಂದ ತಾಳೆ ಹಣ್ಣುಗಳು ತೊಟ್ಟು ಕಳಚಿ ನೆಲಕ್ಕೆ ಬೀಳುವಂತೆ ಶತ್ರುಶಿರಸ್ಸುಗಳು ಉರುಳುತ್ತಿದ್ದುವು. ಅತ್ತ ರಾಕ್ಷಸನಾದರೋ, ಬಲಿಷ್ಠ ವಾದ ರಥದ ಮೇಲೆ ಕುಳಿತುಕೊಂಡು, ಯುದ್ಧರಂಗದಲ್ಲಿ ವರುಣನನ್ನು ಎದುರಿಸುತ್ತಾ, ತನ್ನ ಬೆರಳಿನ ಶಕ್ತಿಯನ್ನೆಲ್ಲಾ ಬಿಟ್ಟು ಬಾಣಪ್ರಯೋಗಮಾಡಿ, ಅವನನ್ನು ನಾನಾರೀತಿ ನೋಯಿಸಿದನು. ಅಷ್ಟರಲ್ಲಿ ಶಿಂಶುಮಾರನು (ಸೂರ್ಯನು) ರಾಕ್ಷಸರನ್ನು ಧ್ವಂಸಮಾಡುತ್ತಾ ಮುನ್ನುಗ್ಗಿ ತಾರಾಕ್ಷನ ಎದೆಯನ್ನು ಕ್ರೂರಬಾಣಗಳಿಂದ ಸೀಳಿಬಿಟ್ಟನು. ॥೨೮-೨೯-೩೦॥

ಅರುವತ್ತುಮೂರು ಬಾಣಗಳಿಂದ ಸಾರಥಿಯನ್ನೂ, ಎಪ್ಪತ್ತು ಬಾಣಗಳಿಂದ ಕುದುರೆಗಳನ್ನೂ ಕತ್ತರಿಸಿದನು. ಆಗ ರಕ್ತಪ್ರವಾಹವು ಹರಿಯಲಾರಂಭಿಸಿತು. ಶತ್ರುಗಳ ಮೇದಸ್ಸು, ವಪೆ, ಮಾಂಸ ಇವುಗಳ ಮೇಳನವೇ ಆ ನದಿಗೆ ಕೆಸರಾಯಿತು. ದೊಡ್ಡ ಆನೆಗಳ ಶರೀರವೇ ಮರಳಿನ ರಾಶಿಯಾಯಿತು. ಛತ್ರಿ ಚಾಮರಗಳೇ ನೊರೆಯಂತೆ ಕಾಣುತ್ತಿದ್ದುವು. ಒಟ್ಟಿನಲ್ಲಿ ಆ ಯುದ್ಧವೆಂಬ ನದಿಯು ನೋಡಲು ಭಯಂಕರವಾಗಿತ್ತು. ॥೩೧-೩೨॥

ಯುಯುಧುಃ ಸಮರೇ ದೇವಾಃ ದೈತ್ಯಾ ರಕ್ಷೋಽತಿಹರ್ಷದಂ ।
ನಿಜಘ್ನುಃ ಸಮರೇ ವೀರಾಃ ಶಿರಾಂಸಿ ತನವಃ ಕ್ಷಿತೌ ॥೩೩॥

ಏವಂ ಶತಂ ತೇ ವರ್ಷಾಣಿ ಶರವರ್ಷೈಸ್ಸುರಾಸುರೈಃ ।
ಹಸ್ತಾನ್ ಸಹಸ್ತಾಭರಣಾನ್ ಅಸಿಭಿರ್ದ್ಯೋತಿತಪ್ರಭಾನ್ ॥೩೪॥

ಸ ಕುಂಡಲಶಿರಸ್ತ್ರಾಣೈರಾಸ್ತೃತಾ ರಣಭೂರಭೂತ್ ।
ಗಜಾನಾಂ ಚ ಶರೀರೌಘೈರ್ಹಯಭಗ್ನರಥೈಸ್ತದಾ ॥೩೫॥

ಪಾತಯಂತಿ ತದಾ ದೈತ್ಯಾ ಸುರಾಂಶ್ಚ ದಿತಿಜಾನ್ ಸುರಾಃ ।
ಏವಮನ್ಯೋಽನ್ಯಮುದ್ಭ್ರಾಂತಂ ತುಮುಲಂ ರೋಮಹರ್ಷಣಂ॥೩೬॥

ನೃತ್ಯತ್ಕಬಂಧಾಃ ಸಂಭ್ರಾಂತಂ ಮುಷ್ಟೀಮುಷ್ಟೀ ಕಚಾಕಚಾ ।
ಯುದ್ಧಂ ವಿಧ್ವಸ್ತದೇವೌಘಂ ಭೀಕರಂ ಸಮುಪದ್ಯತ ॥೩೭॥

ಸಹಸ್ರವಾರಂ ದೇವಾನಾಂ ದೈತ್ಯಾನಾಂ ವಿಷ್ಣುಪಾತಯಾ ।
ತತಸ್ತೇ ವಿಫಲಾ ದೇವಾಃ ಪಲಾಯನಪರಾಯಣಾಃ ॥೩೮॥

---

ಹೀಗೆ ದೇವರಾಕ್ಷಸರು ರಣರಂಗದಲ್ಲಿ ಶತ್ರುಗಳ ತಲೆಯನ್ನೂ ದೇಹವನ್ನೂ ತುಂಡರಿಸುತ್ತಾ ನೂರಾರು ವರ್ಷಗಳು ಯುದ್ಧಮಾಡಿದರು. ರಣರಂಗದಲ್ಲಿ ಕತ್ತಿಯಿಂದಲೂ ಹಸ್ತಾಭರಣಗಳಿಂದಲೂ ರಂಜಿಸುವ ಕೇವಲ ತೋಳುಗಳು ಅಲ್ಲಲ್ಲಿ ತೋರಿಬರುತ್ತಿದ್ದುವು. ||೩೩-೩೪||

ಕಿರೀಟಕುಂಡಲಗಳಿಂದ ರಂಜಿಸುವ ತಲೆಗಳು ಅಲ್ಲಲ್ಲಿ ಬಿದ್ದಿದ್ದುವು. ಮುರಿದು ಬಿದ್ದ ರಥಗಳೂ, ಸತ್ತುಬಿದ್ದಿರುವ ಗಜತುರಗಗಳೂ ರಾಶಿರಾಶಿಯಾಗಿದ್ದುವು. ಹೀಗೆ ಉಭಯತ್ರರಿಗೂ ಭಯವನ್ನುಂಟುಮಾಡುವ ದೊಂಬಿಯುದ್ಧವು ಅಲ್ಲಿ ಬಹುಕಾಲ ನಡೆಯಿತು. ||೩೫-೩೬||

ಅನೇಕ ಮುಂಡಗಳು ರಣರಂಗದಲ್ಲಿ ಕುಣಿದಾಡಲಾರಂಭಿಸಿದುವು. ಮುಷ್ಟಿಯಿಂದಲೂಜುಟ್ಟನ್ನು ಹಿಡಿದುಕೊಂಡು ಕೆಲವರು ಹೊಡೆದಾಡಿದರು. ಹೀಗೆ ದೇವಲೋಕದ ಆಸೆಗಾಗಿ ದೇವರಾಕ್ಷಸರು ಬಹು ಭಯಂಕರವಾಗಿ ಯುದ್ಧಮಾಡಿದರು. ಕೊನೆಗೆ ರಾಕ್ಷಸರಕೈಮೇಲಾಗಿ ದೇವತೆಗಳು ಸೋತು ಓಡಲಾರಂಭಿಸಿದರು.||೩೭-೩೮||

ನ್ಯಸ್ತಶಸ್ತ್ರಾ ಕ್ಷಿತಿತಲೇ ತೃಣವಕ್ರ್ರಹೃತೌಜಸಃ ।
ವಿವಾಹನಾಯುಧಾಸ್ಸರ್ವೇ ವಿಸ್ರಸ್ತಮುಕುಟಾಸ್ತದಾ ॥೩೯॥

ಧಾವಂತ್ಯನಭಿವೀಕ್ಷಂತೋ ಸುರಾಸ್ತೇ ಮುಕ್ತಮೂರ್ಧಜಾಃ ।
ಹಾ ಕಷ್ಟಮಿತಿ ಧಾವಂತಿ ತ್ರಿವಿಷ್ಟಪನಿವಾಸಿನಃ ॥೪೦॥

ಸ್ಥಾನಾನಿ ತತ್ಯಜುರ್ಭೀತಾ ಬ್ರಹ್ಮಾಣಂ ಶರಣಂ ಗತಾಃ ।
ದೈತ್ಯಾಸ್ತ್ರಿವಿಷ್ಟಪಗತಾ ನಂದನೇ ವಿಹರಂತಿ ತೇ ॥೪೧॥

ತದಾಪ್ಸರೋಭಿರ್ದಿವ್ಯಾಭಿಃ ಸ್ರಕ್ಚಂದನವಿಭೂಷಿತಾಃ ।
ದೇವೋಪಭೋಗ್ಯಂ ಬುಭುಜುರ್ಭೋಗಂ ತೇ ದೈತ್ಯನಾಯಕಾಃ ॥೪೨॥

ಶಕ್ರಾನುಶಾಸಿತಾಸ್ಸರ್ವೇ ಸ್ಥಿತಾಃ ಶಕ್ರಪದೇ ತಥಾ ।
ದಿಕ್ಪಾಲಪದವೀಂ ಸರ್ವೇ ಶಾಸಂತೋ ಬಲವತ್ತರಾಃ ॥೪೩॥

ಯಜ್ಞಭಾಗಭುಜೋಭೂವನ್ ಮುನೀನಾಂ ಭಯಭಾವನಾಃ ।
ಉದ್ವೇಜಯಂತೋ ಲೋಕಾಂಸ್ತ್ರೀನ್ ಬಲವೀರ್ಯಮದೋತ್ಕಟಾಃ ॥೪೪॥

---

ದೇವತೆಗಳೆಲ್ಲರೂ ತೃಣವಕ್ರನೆಂಬ ರಾಕ್ಷಸನಿಂದ ಸೋತು ಓಡಲಾರಂಭಿಸಿದರು. ಅವರ ಆಯುಧಗಳೂ ವಾಹನಗಳೂ ನಾಶವಾದುವು. ಕಿರೀಟಗಳು ಕಳಚಿ ಬಿದ್ದುವು. ಉಳಿದ ದೇವತೆಗಳು ತಲೆಯನ್ನು ಕೆದರಿಕೊಂಡು ಅಯ್ಯೋ, ಎಂದು ಕೂಗುತ್ತಾ ದಿಕ್ಕಾಪಾಲಾಗಿ ಓಡಲಾರಂಭಿಸಿದರು. ॥೩೯-೪೦॥

ದೈತ್ಯರಿಗೆ ಹೆದರಿ ದೇವತೆಗಳು ತಮ್ಮ ಸ್ಥಾನಮಾನಗಳನ್ನು ಬಿಟ್ಟು ಬ್ರಹ್ಮಲೋಕಕ್ಕೆ ಹೋಗಿ ಅವನನ್ನು ಮೊರೆಹೊಕ್ಕರು. ದೈತ್ಯರು ದೇವಲೋಕದ ನಂದನವನವನ್ನು ಆಕ್ರಮಿಸಿದರು. ದೇವತೆಗಳು ಅನುಭವಿಸುತ್ತಿದ್ದ ಸಕಲ ಭೋಗ್ಯ ವಸ್ತುಗಳನ್ನೂ ಅಲ್ಲಿ ಅನುಭವಿಸತೊಡಗಿದರು. ಅವರ ಸರ್ವಾಂಗಸುಂದರಿಯರಾದ ಅಪ್ಸರಸ್ತ್ರೀಯರನ್ನು ಸ್ವೇಚ್ಛೆಯಾಗಿ ಉಪಭೋಗಿಸತೊಡಗಿದರು. ॥೪೧-೪೨॥

ದೇವೇಂದ್ರಪದವಿ, ದಿಕ್ಪಾಲಕರಸ್ಥಾನ ಇವೆಲ್ಲವನ್ನೂ ದೈತ್ಯರೇ ಆಕ್ರಮಿಸಿದರು. ಮತ್ತು ದೇವತೆಗಳು ಸ್ವೀಕರಿಸುತ್ತಿದ್ದ ಯಜ್ಞಭಾಗದ ಹವಿಸ್ಸನ್ನು ತಾವೂ ಮುನಿಗಳಿಂದ ಬಲಾತ್ಕಾರವಾಗಿ ಆಕ್ರಮಿಸುತ್ತಿದ್ದರು. ಹೀಗೆ ರಾಕ್ಷಸರು ಮಹಾಬಲಿಷ್ಠರಾಗಿ ಲೋಕತ್ರಯಗಳನ್ನೂ ಭಯಪಡಿಸತೊಡಗಿದರು. ॥೪೩-೪೪॥

ಪಪುಃ ಪಾನಾನಿ ಸೋಮೇನ ಮುನೀನಾಮಾಶ್ರಮೇಷು ಚ ।
ಪುರಾಣಿ ನೃಪತೀನಾಂ ತೇ ಸ್ವಪುರಃ ಪಾತನೇನ ವೈ ॥೪೫॥

ವಿನಾಶಯಂತಿ ತೇ ದೈತ್ಯಾ ಮತ್ತಾ ಬ್ರಹ್ಮವರೋದ್ಧತಾಃ ।
ದೇವಾ ಬ್ರಹ್ಮಾಣಮಾಹುಸ್ತೇ ಭಯಭೀತಾಸ್ಸವಾಸವಾಃ ॥೪೬॥

॥ ದೇವಾ ಊಚುಃ ॥

ನಿರ್ವಿಣ್ಣಾಸ್ತೇಥ ಗೀರ್ವಾಣಾ ನಿರ್ಗೀರ್ಣಾ ದೈತ್ಯಭೀತಿತಃ ।
ಸಾಸ್ರಾವಿಲೇಕ್ಷಣಾ ದೇವಾಃ ಪ್ರಣತಾಸ್ತೇಬ್ರುವನ್ವಿಧಿಂ ॥೪೭॥

ಪಿತಾಮಹ ನಮಸ್ತೇಸ್ತು ತ್ವದ್ವರಾದ್ದೈತ್ಯನಾಯಕೈಃ ।
ರಣೇ ಪರಾಜಿತಾಸ್ಸರ್ವೇ ಕಥಂಚಿತ್ತ್ವಾಂ ಸಮಾಗತಾಃ ॥೪೮॥

ಭಸ್ಮರುದ್ರಾಕ್ಷಯುಕ್ತಾಂಗೈಃ ಸ್ವಾಂಗೈ ಸ್ತ್ವಾಮಾಗತಾ ವಯಂ ।
ಸ್ಥಾನಾನಿ ಚಾಸ್ಮದೀಯಾನಿ ತೇ ಹೃತಾನ್ಯೇವನೋಜಸಾ ॥೪೯॥

ಚಂದ್ರಾಗ್ನ್ಯನಿಲವಾಯೂನಾಂ ವಸ್ವೀಶಾನಂ ಮರುತ್ವತಾಂ ।
ಇಂದ್ರದಿಕ್ಪಾಲಸೂರ್ಯಾಣಾಂ ಶಿಕ್ಷಿತಾಸ್ಸುರಸತ್ತಮಾಃ ॥೫೦॥

---

ಋಷ್ಯಾಶ್ರಮಗಳಿಗೆ ಹೋಗಿ ತಾವೂ ಸೋಮಪಾನಮಾಡಿದರು. ಇತರ ರಾಜರ ಪಟ್ಟಣಗಳನ್ನೆಲ್ಲಾ ಧ್ವಂಸಮಾಡಿದರು. ಹೀಗೆ ದೈತ್ಯರು ಬ್ರಹ್ಮನ ವರಬಲದಿಂದ ಕೊಬ್ಬಿದವರಾಗಿ ಲೋಕವನ್ನೇ ಕಷ್ಟದಲ್ಲಿ ಮುಳುಗಿಸುತ್ತಿದ್ದರು. ಇತ್ತ ದೇವತೆಗಳು ಭಯಭೀತರಾಗಿ ಇಂದ್ರನೊಡನೆ ಕೂಡಿ ಬ್ರಹ್ಮನನ್ನು ಮೊರೆಹೊಕ್ಕರು. ॥೪೫-೪೬॥

ದೈತ್ಯಭಯದಿಂದ ಹೆದರಿ ಕಣ್ಣೀರಿಡುತ್ತಾ ದೇವತೆಗಳು ಬ್ರಹ್ಮನಿಗೆ ವಂದಿಸಿ ಈರೀತಿ ಪ್ರಾರ್ಥಿಸಿದರು :—ಪಿತಾಮಹನೇ, ಪರಬ್ರಹ್ಮನೇ, ನಿನ್ನ ವರಬಲದಿಂದ ಕೊಬ್ಬಿದ ದೈತ್ಯರು ನಮ್ಮನ್ನು ಈರೀತಿ ಸೋಲಿಸಿ ಓಡಿಸಿರುವರು. ॥೪೭-೪೮॥

ಅವರು ಭಸ್ಮರುದ್ರಾಕ್ಷಿಧಾರಿಗಳಾಗಿ ಯುದ್ಧದಲ್ಲಿ ನಮ್ಮನ್ನು ಎದುರಿಸಿ ಸೋಲಿಸಿದರು. ನಾವೂ ಸಹ ಈಗ ನಮ್ಮ ಸ್ಥಾನಮಾನಗಳನ್ನು ಕಳೆದುಕೊಂಡು, ಚಂದ್ರ, ಅಗ್ನಿ, ವಾಯು, ವಸುಗಳು, ಮರುತ್ತುಗಳು, ಇಂದ್ರಾದಿ ದಿಕ್ಪಾಲಕರು, ಸೂರ್ಯ ಇವರೆಲ್ಲರೂ ತಮ್ಮ ತಮ್ಮ ಸ್ಥಾನಗಳನ್ನು ಅವರಿಗೊಪ್ಪಿಸಿ ಓಡಿಬಂದಿರುವೆವು. ನಾನಾರೀತಿ ನಮ್ಮ ದೇವತೆಗಳು ದೈತ್ಯರಿಂದ ಶಿಕ್ಷಿಸಲ್ಪಟ್ಟಿರುವರು. ॥೪೯-೫೦॥

ನಂದನೇ ವಿಹರಂತ್ಯೇವ ದೈತ್ಯಾ ಯುಜ್ಞಭುಜಸ್ಸದಾ ।
ವಿಹರಂತ್ಯಪ್ಸರೋಭಿಸ್ತೇ ದೇವಭೋಗ್ಯೈರ್ಮಹೋತ್ಸವೈಃ ॥೫೧॥

ಶಿವದ್ರೋಹಃ ಕೃತಃ ಕೋವಾ ಅಸ್ಮಾಭಿರ್ಭೋಗತತ್ಪರೈಃ ।
ಕಿಂಚಾಸ್ಮಾಭಿರ್ಮಹಾದೇವಃ ಪ್ರದೋಷೇ ಪೂಜಿತೋ ನಹಿ ॥೫೨॥

ನ ಭೂತಿರ್ವಿಮಲಾ ಫಾಲೇ ನ ಧೃತಾಸ್ತಿ ವಿಧೇ ಕಿಮು ।
ರುದ್ರಾಕ್ಷಧಾರಣಂ ಪುಣ್ಯಂ ವಿಸ್ಮೃತೋ ರುದ್ರಜಾಪಕಃ ॥೫೩॥

ನ ಚ ಪಂಚಾಕ್ಷರೀ ಜಪ್ತಾ ತತ್ಫಲಂ ವಾ ಕಿಮಾಗತಂ
ಕಿಂ ಕುರ್ಮಃ ಶಾಧಿ ನೋ ಬ್ರಹ್ಮನ್ ದೇವಾನಾಂ ಭಯಮಾಗತಂ ॥೫೪॥

॥ ಶ್ರೀ ಸ್ಕಂದ ಉವಾಚ ॥

ಇತಿ ತದ್ವಚನಂ ನಿಶಮ್ಯ ವೇಧಾಃ
ಸುರವರ್ಯಾನಥ ಸಾಂತ್ವಯನ್ನುವಾಚ ।
ಭವತಾಂ ಭವಪಾದಸಂಶ್ರಿತಾನಾಂ
ಭಯನಾಶಂ ಪ್ರವದಾಮಿ ಸದ್ಯ ಏವ ॥೫೫॥

---

ದೈತ್ಯರೆಲ್ಲರೂ ಈಗ ಅಪ್ಸರಸ್ತ್ರೀಯರಿಂದಲೂ, ದೇವಭೋಗ್ಯವಾದ ವಸ್ತುಗಳಿಂದಲೂ ಕೂಡಿ ನಂದನವನದಲ್ಲಿ ವಿಹರಿಸುತ್ತಿರುವರು. ನಮ್ಮ ಐಶ್ವರ್ಯವೆಲ್ಲಾ ನಮ್ಮ ಪಾಲಿಗೆ ಹಾಳಾಯಿತು. ನಾವು ಎಂದೋ ಪ್ರದೋಷಕಾಲದಲ್ಲಿ ಮಹಾದೇವಾರ್ಚನೆ ಮಾಡದೆ ಅವಿವೇಕದಿಂದ ಶಿವದ್ರೋಹವೆಸಗಿರುವೆವು. ॥೫೧-೫೨॥

ಬ್ರಹ್ಮನೇ, ನಾವು ಪರಿಶುದ್ಧವಾದ ವಿಭೂತಿಯನ್ನು ಹಣೆಗೆ ಧರಿಸಲಿಲ್ಲವೆ? ರುದ್ರಾಕ್ಷಿಧಾರಣೆಯನ್ನೂ, ಶ್ರೀರುದ್ರ ಮತ್ತು ಪಂಚಾಕ್ಷರೀಮಂತ್ರಪುರಶ್ಚರಣೆಯನ್ನು ಮರೆತೆವೆ? ಏನೋ ಶಿವಾಪರಾಧವಾಗಿರಬೇಕು. ಆದರಿಂದಲೇ ಇಂತಹ ಭಯವು ದೇವತೆಗಳಿಗೆ ಒದಗಿದೆ. ಮುಂದೇನು ಮಾಡುವುದು? ಇದಕ್ಕೆ ಪ್ರಾಯಶ್ಚಿತ್ತವೇನು? ಹೇಳು. ॥೫೩-೫೪॥

ಹೀಗೆ ದೇವತೆಗಳಾಡಿದ ಮಾತನ್ನು ಕೇಳಿ ಬ್ರಹ್ಮನು ದೇವತೆಗಳಿಗೆ ಸಮಾಧಾನ ಹೇಳುತ್ತಾ, ಈಶ್ವರಪಾದಸೇವಕರಾದ ಅವರ ಭಯವು ಕೂಡಲೇ ಪರಿಹಾರವಾಗುವಂತಹ ಉಪಾಯವನ್ನು ತಿಳಿಸುವೆನೆಂದು ಭರವಸೆಯಿತ್ತನು. ॥೫೫॥

 

ದಿತಿಜಾ ತಪಸಾ ಬಲೋನ್ನತಾ
ಮಮ ಚೈವಾದ್ಯವರೇಣ ಶಂಭುಭಕ್ತ್ಯಾ ।
ಪ್ರಭವಾಮ ವಯಂ ಚ ಭೂತಿಹೇತೌ
ಶಿವಮೇವಾಶುಭಜಾ ಮನೋಹಿತಾಯ ॥೫೬॥

ಇತಿ ಸರ್ವೈಃ ಸುರಸಂಘಸಂವೃತೋ
ಮಮ ಕೈಲಾಸವರಂ ವಿಧಿಸ್ಸಮಾಜಗಾಮ ।
ಮಮ ಗಂಗಾತಟಸೀಮ್ನಿ ಸಂಗತೋ
ಅಭಜನ್ಮಾಂ ಸಸುರೈರ್ಮುದಾ ವಿಧಿಶ್ಚ ॥೫೭॥

ಇತಿ ಶ್ರೀಶಿವರಹಸ್ಯೇ ದಶಮಾಂಶೇ ಪೂರ್ವಾರ್ಧೇ ದೇವಾಸುರಯುದ್ಧೇ
ದೇವಪರಾಜಯವರ್ಣನಂ ನಾಮ ಸಪ್ತದಶೋಽಧ್ಯಾಯಃ

---

"ದೇವತೆಗಳಿರಾ, ಆ ದೈತ್ಯರು ತಪಸ್ಸಿನಿಂದ ಬಲಿಷ್ಠರೆನಿಸಿರುವರು. ಅದಕ್ಕೆ ತಕ್ಕಂತೆ ಈಶ್ವರಭಕ್ತಿಯೂ ನನ್ನ ವರವೂ ಅದರಲ್ಲಿರುವುದು. ಈಗ ಅವರನ್ನು ನಾಶಗೊಳಿಸಲು ನಾವೆಲ್ಲರೂ ಈಗಲೇ ಶಂಕರನನ್ನು ಸೇವಿಸೋಣ, ಅದರಿಂದಲೇ ನಮಗೆ ಈಗ ಇಷ್ಟಾರ್ಥಸಿದ್ಧಿ ಲಭಿಸುವುದು" ॥೫೬॥

ಹೀಗೆಂದು ಹೇಳುತ್ತಾ ಬ್ರಹ್ಮನು ದೇವಸಂಘದೊಡಗೂಡಿ, ನನ್ನ ಆವಾಸ ಸ್ಥಾನವೆನಿಸಿದ ಕೈಲಾಸಗಿರಿಯನ್ನು ಕುರಿತು ತೆರಳಿದನು. ಹಾಗೆಯೇ ದಾರಿಯಲ್ಲಿ ಬರುತ್ತಾ ಗಂಗಾನದಿಯ ದಡದಲ್ಲಿ ತಂಗಿ, ಸಕಲ ದೇವತೆಗಳೊಡನೆ ಬ್ರಹ್ಮನೂ ಸಹ ನನ್ನನ್ನು ವಿಶೇಷವಾಗಿ ಪ್ರಾರ್ಥಿಸತೊಡಗಿದನು ಎಂದು, ಪರಶಿವನು ಮಂಕಣಮುನಿಗೆ ಹೇಳಿದ ವಿಚಾರವನ್ನು ಕುಮಾರಸ್ವಾಮಿಯು ಜೈಗೀಷವ್ಯಮಹಾಮುನಿಗೆ ಹೇಳಿದನೆಂದು ಸೂತಮಹಾಮುನಿಯು ವಾಜಶ್ರವಸಾದಿ ಸಕಲ ಮುನಿಗಣಕ್ಕೂ ಶಿವಮಹಿಮೆಯನ್ನು ವಿವರವಾಗಿ ತಿಳಿಸಿದನು. ॥೫೭॥

ಇಲ್ಲಿಗೆ ಶ್ರೀಶಿವರಹಸ್ಯದ ಹತ್ತನೆಯ ಅಂಶದ ಪೂರ್ವಾರ್ಧದಲ್ಲಿ ದೇವಾಸುರಯುದ್ಧ
ನುತ್ತು ತತ್ಪರಾಜಯವನ್ನು ವರ್ಣಿಸುವ ಹದಿನೇಳನೆಯ ಅಧ್ಯಾಯವು
ಮುಗಿದುದು.

॥ ಶ್ರೀಃ ॥

॥ ಶ್ರೀ ಶಿವಾಯನಮಃ ॥

# ಅಥ ಶ್ರೀ ಶಿವರಹಸ್ಯೇ

## ಈಶಾನಾಖ್ಯೇ

## ದಶಮಾಂಶೇ ಪೂರ್ವಾರ್ಧೇ

## ಅಷ್ಟಾದಶೋಽಧ್ಯಾಯಃ

॥ ಶ್ರೀಸ್ಕಂದ ಉವಾಚ ॥

ತತೋ ಬ್ರಹ್ಮಮುಖಾ ದೇವಾ ವಿಷ್ಣ್ವಾದ್ಯಾಸ್ತ್ರಿಪುರಾರ್ದಿತಾಃ ।
ಮಾಮೇವ ಶರಣಂ ಪ್ರಾಪ್ತಾ ಮಮ ಕೈಲಾಸಭೂಧರೇ ॥೧॥

ಶತಂ ವರ್ಷಾಣಿ ತೇ ದೇವಾಸ್ತಪಂತಿ ಪರಮಂ ತಪಃ ।
ಮದ್ದರ್ಶನಾರ್ಥಮಗಜೇ ಭಸ್ಮರುದ್ರಾಕ್ಷಧಾರಿಣಃ ॥೨॥

ಮಮ ಲಿಂಗಾರ್ಚನೇ ವ್ಯಗ್ರಾ ರುದ್ರಪಂಚಾಕ್ಷರಾದರಾಃ ।
ಬ್ರಹ್ಮಾ ಬ್ರಹ್ಮೇಶ್ವರೇ ಲಿಂಗೇ ವಿಷ್ಣುರ್ವಿಷ್ಣ್ವೀಶ್ವರೇ ತಥಾ ॥೩॥

---

## ಹದಿನೆಂಟನೆಯ ಅಧ್ಯಾಯ

ಮತ್ತೆ ಪರಶಿವನು ಪಾರ್ವತಿಯನ್ನು ಕುರಿತು ತ್ರಿಪುರಾಸುರರ ವೃತ್ತಾಂತವನ್ನು ಮುಂದುವರಿಸಿದನು.—ಪಾರ್ವತಿಯೇ, ಹಾಗೆ ತ್ರಿಪುರಾಸುರರಿಂದ ಪೀಡಿತರಾದ ಬ್ರಹ್ಮವಿಷ್ಣ್ವಾದಿಗಳು ನನ್ನ ನಿವಾಸಸ್ಥಾನವಾದ ಕೈಲಾಸಪರ್ವತಕ್ಕೆ ಬಂದು ನೂರು ವರ್ಷಕಾಲ ನನ್ನನ್ನು ಮೆಚ್ಚಿಸಲು ತಪಸ್ಸುಮಾಡಿದರು. ನನ್ನ ದರ್ಶನಾಪೇಕ್ಷಿಗಳಾದ ಅವರು ಸದಾ ಭಸ್ಮರುದ್ರಾಕ್ಷಧಾರಿಗಳಾಗಿದ್ದು ಶಿವಲಿಂಗವನ್ನು ತಪ್ಪದೆ ಅರ್ಚಿಸುತ್ತಿದ್ದರು. ॥೧-೩॥

ಬ್ರಹ್ಮ, ವಿಷ್ಣು, ಇಂದ್ರ, ಸೂರ್ಯ, ವರುಣ, ಅಶ್ವಿನೀದೇವತೆಗಳು, ಪಿತೃದೇವತೆಗಳು, ಋಭುಗಳು, ರುದ್ರದೇವತೆಗಳು, ಮುನಿಗಳು, ವಿಶ್ವೇದೇವತೆಗಳು

ಇಂದ್ರಶ್ಚೇಂದ್ರೇಶ್ವರೇ ದೇವಿ ಚಂದ್ರಶ್ಚಂದ್ರೇಶ್ವರಾಭಿಧೇ ।
ಸೂರ್ಯಸ್ಸೂರ್ಯೇಶ್ವರೇ ದೇವಿ ವರುಣೋ ವರುಣೇಶ್ವರೇ ॥೪॥

ಅಶ್ವೀಶ್ವರೇ ಅಶ್ವಿನೌ ತೌ ಪಿತರಃ ಪೈತೃಕೇಶ್ವರೇ ।
ಋಭ್ವೀಶ್ವರೇಥ ಋಭವೋ ರುದ್ರಾ ರುದ್ರೇಶ್ವರೇ ತಥಾ ॥೫॥

ಮುನೀಶ್ವರೇಥ ಮುನಯೋ ವಿಶ್ವೇದೇವೇಶ್ವರೇ ಸುರಾಃ ।
ಮತ್ಕೈಲಾಸೇ ಪ್ರತಿಷ್ಠಾಪ್ಯ ಲಿಂಗಾನ್ಯೇತಾನಿ ಶಂಕರಿ ॥೬॥

ಮಣಿಪದ್ಮಗತಾನ್ಯೇವ ಕೃತ್ವಾ ಪಾಶುಪತವ್ರತಂ ।
ಅಗ್ನಿರಿತ್ಯಾದಿಭಿರ್ಮಂತ್ರೈರ್ಧೂಲಿತಾಂಗಾಸ್ತದಾ ಸುರಾಃ ॥೭॥

ರುದ್ರಾಕ್ಷಹಾರವಲಯಾಃ ರುದ್ರಪಂಚಾಕ್ಷರಾದರಾಃ ।
ಬ್ರಹ್ಮವಿಷ್ಣ್ವಾದಯೋ ದೇವಾಃ ಪೂಜಯಂತಿ ಚ ಮಾಂ ಸದಾ ॥೮॥

ಪಂಚಾಮೃತೈರ್ಗಂಧಧೂಪೈಃ ಪುಷ್ಪೈರ್ನೈವೇದ್ಯಕಲ್ಪನೈಃ ।
ಬಿಲ್ವಪತ್ರಾರ್ಚನೈಶ್ಚೈವ ಲಿಂಗಾನಭ್ಯರ್ಚ್ಯ ಭಕ್ತಿತಃ ॥೯॥

ಸ್ತುವಂತಿ ಸ್ತುತಿಭಿರ್ದೇವಿ ತತ್ಸ್ತುತಿಂ ಮೇ ನಿಶಾಮಯ । ॥೧೦॥

---

ಇವರೆಲ್ಲರೂ ತಮ್ಮ ತಮ್ಮ ಹೆಸರನ್ನೇ ಇಟ್ಟು ಈಶ್ವರಲಿಂಗಗಳನ್ನು ಆ ಕೈಲಾಸದ ತಪ್ಪಲಿನಲ್ಲಿ ಪ್ರತಿಷ್ಠಾಪಿಸಿ ಭಕ್ತಿಯಿಂದರ್ಚಿಸಲಾರಂಭಿಸಿದರು. ॥೩-೪-೫-೬॥

ಆ ಶಿವಲಿಂಗಕ್ಕೆ ಮಣಿಮಯವಾದ ಶಿವಾಲಯವನ್ನು ನಿರ್ಮಿಸಿಕೊಂಡು, ಅಲ್ಲಿ ಪಾಶುಪತವ್ರತವನ್ನಾಚರಿಸಿದರು. 'ಅಗ್ನಿರಿತಿಭಸ್ಮ' ಎಂಬ ಮಂತ್ರಪೂರ್ವಕವಾಗಿ ಭಸ್ಮಧಾರಣೆ ಮಾಡಿಕೊಂಡು, ರುದ್ರಾಕ್ಷಿಯಹಾರ, ರುದ್ರಪಂಚಾಕ್ಷರೀಮಂತ್ರ ಜಪ ಇವುಗಳಿಂದ ಆ ಬ್ರಹ್ಮಾದಿದೇವತೆಗಳು ನನ್ನನ್ನು ಬಹಳವಾಗಿ ಪೂಜಿಸಿದರು. ॥೭-೮॥

ಮತ್ತು ಪಂಚಾಮೃತದ್ರವ್ಯಗಳಿಂದಲೂ, ಗಂಧಪುಷ್ಪಧೂಪದೀಪನೈವೇದ್ಯಾದಿಗಳಿಂದಲೂ ನನ್ನನ್ನು ತೃಪ್ತಿಪಡಿಸಿ ಪ್ರತಿ ದೇವತೆಗಳೂ ಈ ರೀತಿ ನನ್ನನ್ನು ಸ್ತುತಿಸಲಾರಂಭಿಸಿದರು. ಅದರಲ್ಲಿ ಬ್ರಹ್ಮನು ನನ್ನನ್ನು ಸ್ತುತಿಸಿದ ಕ್ರಮವನ್ನು ಹೇಳುವೆನು ಕೇಳು. "ಪಂಚಭೂತಗಳಿಗೂ ಒಡೆಯನೆನಿಸಿ, ಪಿನಾಕಪಾಣಿಯಾಗಿ ಹಾಲಾಹಲ

॥ ಬ್ರಹ್ಮೋವಾಚ ॥

ಭವ ಭೂತಪತೇ ಪಿನಾಕಪಾಣೇ
ತ್ರಿಪುರಗ್ರಸ್ತಮಿದಂ ಸುನಾಕಿಜಾಲಂ ।
ಗರಭಕ್ಷಾತುಲಚಾರುದೃಷ್ಟ್ಯಾ
ಅಭಿರಕ್ಷಾದ್ಯ ತವಾದ್ಯ ಸಂಪ್ರಪದ್ಯೇ ॥೧೧॥

॥ ವಿಷ್ಣುರುವಾಚ ॥

ಮದನಾರ್ದನ ಗಾಂಗಸತ್ಕಪರ್ದ ಶಂಭೋ
ದುರಿತಂ ಮೇ ಶಮಯಾಶು ಚಾರುದೃಷ್ಟ್ಯಾ ।
ಪರಿಹರ ಭಯಮೇತದುಗ್ರದೈತ್ಯೋ
ದ್ಭವಮದ್ಯ ತ್ವಮಹೋ ಭವೈಕವೇದ್ಯಃ ॥೧೨॥

॥ ಇಂದ್ರ ಉವಾಚ ॥

ತ್ರ್ಯಕ್ಷಾಕ್ಷಯ್ಯಫಲಪ್ರದಾವ್ಯಯ ಗರೀಭೂತೋರುಕಂಠೋಜ್ಜ್ವಲ
ರಕ್ಷಾಸ್ಮಾನ್ ಶರಣಾಗತಾನ್ ಕರುಣಯಾ ದೈತ್ಯಾನ್ ಪ್ರಹೃತ್ಯಾದರಾತ್ ।
ತ್ವತ್ಪಾದಾಂಬುರುಹಂ ಪ್ರಯಾಮಿ ಶರಣಂ ಭಸ್ಮತ್ರಿಪುಂಡ್ರೋಜ್ಜ್ವಲೋ
ನಾನ್ಯಾಮೇಸ್ತಿ ಗತಿಸ್ತ್ವಮೇವ ಭಗವನ್ ರುದ್ರಶ್ರುತೌ ವಿಶ್ರುತ ॥೧೩॥

---

ವಿಷಭಕ್ಷಕನಾಗಿ ಎಷ್ಟೋ ವೇಳೆ ನಮ್ಮನ್ನು ರಕ್ಷಿಸಿದ ಮಹಾದೇವನೇ, ನಿನ್ನ ಕರುಣಾ ಪಾಂಗದಿಂದ ನಮ್ಮನ್ನು ನೋಡಿ ಈಗ ಒದಗಿರುವ ತ್ರಿಪುರರ ಭಯವನ್ನು ತಪ್ಪಿಸಿ ಕಾಪಾಡು. ನಿನ್ನನ್ನು ನಾನು ಮೊರೆಹೊಕ್ಕಿರುವೆನು." ॥೯-೧೦-೧೧॥

ಮನ್ಮಥನಾಶಕನೇ, ನೀನು ದಿವ್ಯಗಂಗೆಯನ್ನು ಶಿರದಲ್ಲಿ ಧರಿಸಿರುವೆಯಲ್ಲವೆ! ಇಂತಹ ಪವಿತ್ರಮೂರ್ತಿಯಾದ ನೀನು ನನ್ನನ್ನು ಒಂದುಸಾರಿ ನೋಡಿ ಪವಿತ್ರ ಗೊಳಿಸು. ನಮ್ಮ ಸಮಸ್ತ ಪಾಪವನ್ನೂ, ಈ ಉಗ್ರದೈತ್ಯರಿಂದ ಒದಗಿರುವ ಮಹಾ ಭಯವನ್ನೂ ಹೋಗಲಾಡಿಸಿ ನನ್ನನ್ನು ಸಲಹು. ನೀನು ಭಕ್ತರನ್ನು ಕಷ್ಟದಿಂದ ಸಲಹುವ ಸಾಮರ್ಥ್ಯವುಳ್ಳವನಲ್ಲವೆ!" ಎಂದು ವಿಷ್ಣುವು ಸ್ತುತಿಸಿದನು. ॥೧೨॥

ಇಂದ್ರನಾದರೋ 'ತ್ರಿಲೋಚನನೇ, ಶಾಶ್ವತವಾದ ಫಲವನ್ನು ಕೊಡು ವವನೇ, ವಿಷಕಂಠನೇ, ಈಗ ನಮ್ಮನ್ನು ಪೀಡಿಸುತ್ತಿರುವ ದೈತ್ಯರನ್ನು ಕೊಂದು,

॥ ಚಂದ್ರ ಉವಾಚ ॥

ಸೋಮೋತ್ತಂಸ ಗಜಖದೋತ್ತಮ ವಸಾನೋಯ ಪ್ರಭೋ ಮಾಂ ಸದಾ
ದಿಗ್ವಾಸಾ ವಸ ಮೇ ಹೃದಂಬುಜವರೇ ವಾಸೀಕೃತಾಂಗಾಖಿಲ ।
ದಕ್ಷೋದ್ಧೃತ್ತಮುಖಪ್ರಮಥನಾರೇ ವಾಸವಾದ್ಯರ್ಚಿತ
ಪಾಹ್ಯಸ್ಮಾನ್ ದಯಯಾ ಸದೈವ ಕರುಣಾಸಿಂಧೋದ್ಯ ಬಂಧಂ ಹರ ॥೧೪॥

॥ ಸೂರ್ಯ ಉವಾಚ ॥

ಪತಂಗನಯನ ಪ್ರಭೋ ಶಿಶುತುರಂಗಹಸ್ತಾಂಬುಜ
ವರಾಂಗಧೃತಗಾಂಗಸದ್ವರ ತರಂಗಮಾಲಾಧರ ।
ಹರಾಮರ ವರೋತ್ತಮ ಪ್ರಬಲಪಾಪತಾಪಂ ಹರ
ಸ್ಮರಾಂಗದಮನಪ್ರಭೋ ತ್ರಿಪುರದೈತ್ಯಭೀತಿಂ ಹರ ॥೧೫॥

---

ಶರಣಾಗತರಾದ ನಮ್ಮನ್ನು ಸಲಹು. ನಿನ್ನ ಪಾದಪದ್ಮಗಳನ್ನು ನಾನು ನಂಬಿರುವೆನು. ಶ್ರೀರುದ್ರಸೂಕ್ತವನ್ನು ಪಾರಾಯಣ ಮಾಡುತ್ತಾ, ಭಸ್ಮತ್ರಿಪುಂಡ್ರಧಾರಿಯಾಗಿ ನಿಂತಿರುವ ನನಗೆ ನೀನೇ ಗತಿ" ಎಂದು ಪ್ರಾರ್ಥಿಸಿದನು. ॥೧೩॥

ಚಂದ್ರಶೇಖರನೇ, ಗಜಚರ್ಮಧಾರಿಯೇ, ದಿಗಂಬರನೇ, ನೀನು ನನ್ನ ಹೃದಯಕಮಲದಲ್ಲಿ ಸದಾ ನೆಲಸು. ಪ್ರಪಂಚವನ್ನೇ ಹೃದಯದಲ್ಲಿ ಅಡಗಿಸಿ, ದಕ್ಷಯಜ್ಞವನ್ನೂ, ಶತ್ರುಸಮೂಹವನ್ನೂ ನಾಶಗೊಳಿಸಿದವನೇ ಇಂದ್ರಾದಿಗಳಿಂದ ಪೂಜಿತನೇ, ದಯಾಸಾಗರನೇ, ದೀನರಾಗಿ ಬಂದಿರುವ ನಮ್ಮನ್ನು ಕೃಪಾದೃಷ್ಟಿಯಿಂದ ಸಲಹು. ನಮಗೊದಗಿರುವ ಈ ಬಂಧನವನ್ನು ಪರಿಹರಿಸು" ಎಂದು ಚಂದ್ರನು ಬೇಡಿಕೊಂಡನು. ॥೧೪॥

"ಸೂರ್ಯನನ್ನೇ ನೇತ್ರವನ್ನಾಗಿಯೂ, ಜಿಂಕೆಯ ಮರಿಯನ್ನೂ ಕಮಲವನ್ನೂ ಹಸ್ತಾಭರಣವನ್ನಾಗಿಯೂ ಹೊಂದಿರುವ ಗಂಗಾಧರನೇ, ದೇವತೆಗಳಲ್ಲೆಲ್ಲಾ ಪರಮಶ್ರೇಷ್ಠನೆನಿಸಿಕೊಂಡಿರುವ ಮತ್ತು ದುಷ್ಟನಾದ ಮನ್ಮಥನ ಸೊಕ್ಕನ್ನು ಇಳಿಸಿದ ನೀನು ಈಗ ಈ ತ್ರಿಪುರರ ಹಾವಳಿಯನ್ನು ನಾಶಮಾಡಿ ನಮ್ಮನ್ನು ಸಲಹು" ಎಂದು ಸೂರ್ಯದೇವನು ಮೊರೆಯಿಟ್ಟನು. ॥೧೫॥

|| ವರುಣ ಉವಾಚ ||

ತವ ಶಿವಕರುಣಾಕಟಾಕ್ಷಸಾರೈಃ
ಶರಣಂ ಮೇ ಚರಣಂ ಭವೇನ್ಮದೇ ತೇ ।
ಕರುಣಾವರಣಂ ಭವಾಬ್ಧಿಜನ್ಮ
ಜನತಾಪಾಪಹರಂ ಭವಂ ಪ್ರಪದ್ಯೇ ॥೧೬॥

|| ವಸವ ಊಚುಃ ||

ಅಸುಭಿರ್ವಸವೋ ವಿಹೀನಭಾಸಃ
ಸ್ಮರವೈರಿನ್ನಧುನಾ ಮುಖಸ್ಮಿತಂ ತೇ ।
ಸುದೃಶಾಸ್ಮದದೃಶ್ಯ ದುರ್ದಶಾಂ
ಪರಿಹಾರ್ಯೈವ ಹರಾವ ಸರ್ವದಾ ನಃ ॥೧೭॥

|| ಮರುತ ಊಚುಃ ||

ರಕ್ಷಾಸ್ಮಾನ್ ಭಗವನ್ ಅಧೋಕ್ಷಜವಿಧಿಪ್ರೇಕ್ಷಾದಿದೂರಾಂಘ್ರಿಕ
ಪಾಹೀಂದುದ್ಯುತಿಮೌಳಿಧಾರಿತಮಹಾಗಂಗಾತರಂಗೋಜ್ವಲ ।
ಕಾಮಾಂಗಾಹತಿಭೀತಿದಾಂ ತವ ದೃಶಂ ದೈತ್ಯೇಷು ಸಂಪಾತಯ * ॥೧೮॥

---

ವರುಣನು " ಶಂಕರನೇ, ನಿನ್ನ ಕರುಣಾಕಟಾಕ್ಷವನ್ನು ನಮ್ಮಲ್ಲಿ ಬೀರು. ನಿನ್ನ ಪಾದವನ್ನೇ ನಾವು ಮೊರೆಹೊಕ್ಕಿರುವೆವು. ಸಂಸಾರಸಾಗರದಲ್ಲಿ ಮುಳುಗಿರುವವರ ದುಃಖವನ್ನೆಲ್ಲಾ ನಾಶಗೊಳಿಸುವ ನಿನ್ನನ್ನೇ ನಾನು ಮೊರೆಹೊಕ್ಕಿರುವೆನು ಕಾಪಾಡು " ಎಂದು ಶ್ಲಾಘಿಸಿದನು. ॥೧೬॥

" ಮಾರಾರಿಯೇ, ವಸುದೇವತೆಗಳಾದ ನಮಗೆ ಅಸುವೇ ಹೋದಂತಿದೆ. ನಿನ್ನ ಮುಗುಳ್ನಗೆಯನ್ನೂ, ಕೃಪಾದೃಷ್ಟಿಯನ್ನೂ ಒಂದುಸಾರಿ ನಮ್ಮ ಮೇಲೆ ಬೀರಿ, ನಮಗೊದಗಿರುವ ದುರ್ದಶೆಯನ್ನು ಪರಿಹರಿಸಿ ಸದಾ ನಮ್ಮನ್ನು ಕಾಪಾಡು " ಎಂದು ಅಷ್ಟವಸುಗಳೂ ಪ್ರಾರ್ಥಿಸಿದರು. ॥೧೭॥

" ಬ್ರಹ್ಮ, ವಿಷ್ಣು ಮೊದಲಾದವರಿಗೂ ದೂರನಾಗಿರುವ, ಚಂದ್ರಶೇಖರನೇ, ಗಂಗಾಧರನೇ, ನಮ್ಮನ್ನು ರಕ್ಷಿಸು. ದುಷ್ಟನಾದ ಮನ್ಮಥನನ್ನು ನಾಶಗೊಳಿಸಿದ

---

* ಇಲ್ಲಿ ಒಂದುಪಾದವು ಮೂಲದಲ್ಲಿಲ್ಲ.

॥ ಅಗ್ನಿರುವಾಚ ॥

ಶ್ರೀಫಾಲಾನಲಲೋಚನಾಂತಕ ಹರ ವ್ಯೋಮಾವಕಾಶಪ್ರಭೋ
ದೇವಾನಾಮವನಾಯ ಚಾರುಸುದೃಶಾಪಾಂಗೇನ ಸಂವೀಕ್ಷಯ ।
ಉದ್ಧೃತ್ಯಾಸುರಹೃತ್ತ್ರಿದೀಯ ಕರಜಶೂಲಾನಲೋತ್ಪಾಟಿತಂ
ತದ್ದೈತ್ಯಪ್ರವರೋರುಸಃ(?) ಸುರವರಂ ಪ್ರಾಕಾರಭಂಗಂ ಕುರು ॥೧೯॥

॥ ಯಮ ಉವಾಚ ॥

ಶ್ರೀವಾಮದೇವ ಜಿತಕಾಮಲಲಾಮಸೋಮ
ಭೀಮಾವ್ಯಯೇಶ ಮಖಶಾಸನ ವ್ಯೋಮಕೇಶ ।
ವ್ಯೋಮೋತ್ತಮಾಂಗ ವರಸಾಮಸಮಸ್ತಸೀಮ
ಭೂಮಾ ತ್ವಮೇವ ಭಗವನ್ನವ ಮಾಂ ಸದೈವ ॥೨೦॥

॥ ನಿಋತಿರುವಾಚ ॥

ದೇವೇಂದುಚೂಡ ಭಗವನ್ನಮರಾರಿ ಪೀಡಾಂ
ಭೂರ್ಯುದ್ಯತಾಮಗವರಾತ್ಮಜದೇಹಭಾಗ ।

---

ಅದೇ ಅಗ್ನಿನೇತ್ರವನ್ನು ಈ ತ್ರಿಪುರಾಸುರರ ಮೇಲೆ ಪ್ರಯೋಗಿಸು. ಶರಣಾಗತರಾದ ನಮ್ಮನ್ನುದ್ಧರಿಸು" ಎಂದು ಮರುತ್ತುಗಳು ಯಾಚಿಸಿದರು. ||೧೮||

"ಅಗ್ನಿನಯನದಿಂದ ಯಮನನ್ನು ಸಂಹರಿಸಿದ ವ್ಯೋಮಕೇಶನೇ, ಈಗ ದೇವತೆಗಳನ್ನು ನಿನ್ನ ಕರುಣಾಪಾಂಗದಿಂದ ನೋಡಿ ಕಾಪಾಡು. ನಿನ್ನ ಮಹಾ ಬಲಿಷ್ಠವಾದ ತ್ರಿಶೂಲಾಗ್ರದಿಂದ ಆ ದೈತ್ಯರ ವಕ್ಷಸ್ಸನ್ನು ತಿವಿದು ಕೊಂದು, ದೇವತೆಗಳ ಬಂಧನವನ್ನು ಬಿಡಿಸು" ಎಂದು ಅಗ್ನಿದೇವನು ಬೇಡಿಕೊಂಡನು. ||೧೯||

"ವಾಮದೇವನೇ, ಮನ್ಮಥನನ್ನು ಜಯಿಸಿದವನೇ, ಚಂದ್ರಚೂಡನೇ, ದಕ್ಷಯಜ್ಞವಿನಾಶಕನೇ, ನೀನು ಸಾಮಗಾನಪ್ರಿಯನಲ್ಲವೆ? ಅಂತರಿಕ್ಷವೇ ನಿನ್ನ ಶಿರೋಭಾಗವಾಗಿರುವುದು. ಪ್ರಪಂಚಸ್ವರೂಪಿಯೇ ನೀನಾಗಿರುವೆ. ಇಂತಹ ಮಹಾಮಹಿಮನಾದ ನೀನು ನನ್ನನ್ನು ಸಲಹು" ಎಂದು ಯಮನು ಪ್ರಾರ್ಥಿಸಿ ಕೊಂಡನು. ||೨೦||

ಚಂದ್ರಶೇಖರನೇ, ಉಮಾದೇಹಾರ್ಧಧಾರಿಯೇ, ಕಮಲನೇತ್ರನೆನಿಸಿದ ವಿಷ್ಣುವಿನಿಂದ ಪೂಜಿತವಾದ ಪಾದಪದ್ಮವುಳ್ಳವನೇ, ಶಂಕರನೇ, ಈಗ ನಮಗೆ

ಸಂವಾರಯಾಶು ನಿತರಾಮರವಿಂದನೇತ್ರ
ಪೂಜಾಬ್ಜಪಾದ ಸಹಸಾ ಮನಸಾ ಪ್ರಪದ್ಯೇ ॥೨೧॥

॥ ಈಶಾನ ಉವಾಚ ॥

ಶಂಭೋ ಶಂಕರ ಶಾಂತಖಂಡಪರಶೋ ದೇವೇಶ ವಿಶ್ವಾರ್ತಿಹನ್
ಉಗ್ರಾನೇಯ ಭವೋದ್ಭವ ತ್ರಿನಯನ ಮಾಮದ್ಯಪಾಹಿ ಪ್ರಭೋ ।
ಅಸ್ಮಾನ್ ರಕ್ಷ ಸದೈವ ಸೌಮ್ಯಕರುಣಾಸಾರೇಕ್ಷಣೋದ್ವೀಕ್ಷಿತಾನ್
ರುದ್ರಾನ್ ರುಗ್ನಿವಾರಯಾಶು ಭಗವನ್ ಮಸ್ತೇನ ಶಸ್ತಂ ನಮಃ ॥೨೨॥

॥ ಅಶ್ವಿನಾವೂಚತುಃ ॥

ಶಂಭೋ ತ್ವಂ ಭವಭೇಷಜೋ ಭಸಿತಯುಕ್ ಭೂಷಾಹಿಶೇಷೋಜ್ಜ್ವಲೋ
ನಿಶ್ಶೇಷಂ ವರಪಾತಕಂ ಹರಹರ ಶ್ರೀಸಾಂಬರಕ್ಷಾದ್ಯ ನೌ ।
ದೈತ್ಯೋದ್ಭೂತ್ತಭಯಂ ಹರಾಪಹರ ವೈ ಶ್ರೀಕಂಠ ಶಂಭೋಧುನಾ
ವೈಕುಂಠಾರ್ಚಿತಪಾದಪಂಕಜಹರಾನೇಯ ಪ್ರಭೋ ಶಂಕರ ॥೨೩॥

---

ಅತಿಶಯವಾಗಿ ಒದಗಿಗುವ ರಾಕ್ಷಸಭಯವನ್ನು ತಪ್ಪಿಸಿ ಕಾಪಾಡು. ನಾನು ನಿನ್ನನ್ನೇ ಮೊರೆಹೊಕ್ಕಿರುವೆನು. ಎಂದು ನಿಋುಋುತಿಯು ಎರಗಿದನು. ॥೨೧॥

"ಶಂಭೋ, ಶಂಕರ, ಖಂಡವಾದ ಪರಶುವನ್ನೇ ಆಯುಧವನ್ನಾಗಿ ಉಳ್ಳವನೇ, ನೀನು ಪ್ರಪಂಚಕ್ಕೆ ಒದಗುವ ಪೀಡೆಯನ್ನು ಪರಿಹರಿಸುವವನು. ಭಯಂಕರ ಸ್ವರೂಪನಾದರೂ ಶಾಂತನು. ಸಂಸಾರದುಃಖದಲ್ಲಿ ಮುಳುಗಿದವರನ್ನು ಉದ್ಧರಿಸುವವನು. ಇಂತಹ ಸೌಮ್ಯಸ್ವರೂಪನೂ ಕರುಣಾಶಾಲಿಯೂ ಆದ ನೀನು ಭಯಂಕರರಾಗಿ ಕಾಣುತ್ತಿರುವ ಈ ರಾಕ್ಷಸರನ್ನು ನಾಶಗೊಳಿಸಿ ನಮ್ಮನ್ನು ಉದ್ಧರಿಸು. ನಿನ್ನನ್ನು ಪ್ರಶಸ್ತವಾದ ಮಸ್ತಕಭಾಗದಿಂದ ವಂದಿಸುವೆನು" ಎಂದು ಈಶಾನನು ಭಜಿಸಿದನು. ॥೨೨॥

"ಮಹಾದೇವನೇ, ನೀನು ಭವರೋಗವೈದ್ಯನು. ವಿಭೂತಿಯಿಂದಲೂ, ನಾಗಾಭರಣದಿಂದಲೂ ಭೂಷಿತನು. ನೀನು ಮಹಾವಿಷ್ಣುವಿನಿಂದ ಪೂಜಿತವಾದ ಪಾದಪದ್ಮವುಳ್ಳವನು. ಸರ್ವವ್ಯಾಪಿಯು. ಸರ್ವರಕ್ಷಕನು. ಶಂಕರನೇ, ಮಹಾಪಾಪಿಗಳಾದ ನಮ್ಮಿಬ್ಬರ ಪಾಪವನ್ನೂ ಪರಿಹರಿಸಿ, ಈ ದೈತ್ಯಭಯದಿಂದ ನಮ್ಮನ್ನು ರಕ್ಷಿಸು! ಎಂದು ಅಶ್ವಿನೀ ದೇವತೆಗಳು ಗೋಳಿಟ್ಟರು. ॥೨೩॥

॥ ಋಭವ ಊಚುಃ ॥

ಮಾತಂಗಾನಂಗಭಂಗ ತ್ರಿಪುರಸುರವರೋದ್ಭೂತಭೀತಿಂ ಹರಾಶು
ಚಂದ್ರಾಸಾರಕಿರೀಟಶೋಭಿತಕರಾಧಾರೈಕಶೂಲಪ್ರಭೋ ।
ಬಂಧಂ ನೋ ಹರ ಸಾಂಬ ಸಂಸೃತಿಭವಂ ಪಾಪೌಘತಾಪಂ ಹರ
ತ್ರ್ಯಕ್ಷಾಕ್ಷಯ್ಯಗತಿಪ್ರದಾನಕುಶಲೇನಾಕ್ಷ್ಣಾ ವಿಲೋಕ್ಯಾಶು ನಃ ॥೨೪॥

॥ ಪಿತರ ಊಚುಃ ॥

ಹೇ ಸೋಮಧಾಮ ಶಕಲಾಕಲಿತೋತ್ತಮಾಂಗ
ಗಂಗಾತರಂಗ ಸುಜಟಾಭರಸಂಗಭಂಗ ।
ಪಾಹ್ಯಸ್ಮದುಸ್ಮಯಗತಂ ಜ್ವರವರ್ಗರೂಪಂ
ದೈತ್ಯಾಧಮೋರುಜನಿತಂ ಭಯನಾಶಹೇತೋ ॥೨೫॥

॥ ವಿಶ್ವೇದೇವಾ ಊಚುಃ ॥

ಅನ್ನಾನಾಂ ಪತಿರೇಕ ಏವ ಭಗವಾನ್ ರುದ್ರೋಽವ ರುದ್ರೋಽಪಿಥೃಕ್
ಕದ್ರುದ್ರಃ ಶ್ರುತಿಶೇಖರಾಂಕಿತಪದೋ ದೈತ್ಯಾ ಯದುದ್ಧ್ವಂಸಕೃತ್ ।

---

'ಮದ್ದಾನೆಯಂತಿದ್ದ ಮನ್ಮಥನನ್ನು ನಾಶಗೊಳಿಸಿದ ಮಹಾದೇವನೇ, ಚಂದ್ರಿಕೆಯಿಂದ ಶೋಭಿತವಾದ ಕಿರೀಟವುಳ್ಳವನೇ, ತ್ರಿಶೂಲದಿಂದ ಪ್ರಕಾಶಿತವಾದ ಹಸ್ತವುಳ್ಳವನೇ, ನಮ್ಮ ಸಾಂಸಾರಿಕವಾದ ದುಃಖವನ್ನು ಪರಿಹರಿಸು. ನಿನ್ನ ದಯಾದೃಷ್ಟಿಯನ್ನು ನಮ್ಮ ಮೇಲೆ ಬೀರಿ, ಅಕ್ಷಯ್ಯವಾದ ಗತಿಯನ್ನು ಅನುಗ್ರಹಿಸು' ಎಂದು ಋಭುದೇವತೆಗಳು ಬೇಡಿದರು. ॥೨೪॥

ಅರ್ಧಚಂದ್ರಧಾರಿಯಾದ ಚಂದ್ರಶೇಖರನೇ, ಗಂಗಾಜಲದಿಂದ ತುಂಬಿದ ಜಟಾಭಾರವುಳ್ಳವನೇ, ಈಗ ದೈತ್ಯಾಧಮರಿಂದಒದಗಿ ಬಂದು ಮನಸ್ಸನ್ನು ಜ್ವರದಂತೆ ಬಾಧಿಸುತ್ತಿರುವ ಭಯವನ್ನು ನಿವಾರಿಸು. ನಿನ್ನಿಂದಲ್ಲದೆ ಮತ್ತಾರಿಂದಲೂ ಈ ಭಯವು ನಿವಾರಣೆಯಾಗಲಾರದು, ಎಂದು ಪಿತೃದೇವತೆಗಳು ಪ್ರಾರ್ಥಿಸಿದರು. ॥೨೫॥

'ಮಹಾದೇವನೇ, ಸಕಲ ವಿಧವಾದ ಆಹಾರಗಳಿಗೂ ಒಡೆಯನಾಗಿದ್ದು ಭಕ್ತರಿಗೆ ಅದನ್ನು ಒದಗಿಸುವವನು ನೀನೊಬ್ಬನೇ ಅಲ್ಲವೆ! ವೇದಾಂತಗಳಲ್ಲಿ ನಿನ

ಪಾಪಂ ನೋ ವಿನಿವಾರಯಾಶುಭಭವಂ ಭೂಮ್ನೇ ಚ ಧಾಮ್ನೇ ನಮಃ
ಸರ್ವಾಮ್ನಾಯಕಸೀಮ್ನಿ ವಿಶ್ರುತಪದಂ ತತ್ತ್ವೇ ಪ್ರಪದ್ಯಾಮಹೇ ॥೨೨॥

॥ ಮಾತರ ಊಚುಃ ॥

ದೇವಾಮರೋತ್ತಮ ಗರಾದಿಧರಾಂತಕಾರೇ,
ಪಾಹೀಕ್ಷಣೇನ ಕ್ಷಣಮದ್ರಿಸುತಾಸಹಾಯ ।
ನಾಹೀಕೃತೋಕ್ಷ ಭುಜಗಾಂಗ ಮಹೋರುಹಾರ
ಪಾರಂ ಭವಾದ್ಯ ಸುರತಾರುಜಸಿಂಧುತಾರ ॥೨೭॥

॥ ಸ್ಕಂದ ಉವಾಚ ॥

ಇತ್ಥಂ ದೇವೈಃ ಸ್ತುತಃ ಶಂಭುಸ್ತ್ರಿಪುರಾಸುರಪೀಡಿತೈಃ ।
ಚಂದ್ರಾಪೀಡೋ ಮಹಾದೇವಸ್ತೇಷಾಂ ಕಾಮಮಪೂರಯತ್ ॥೨೮॥

ಗಿರಿಜಾಜಾನಿರೀಶೋಽಯಂ ವಲಕ್ಷೋಕ್ಷವರಾಶ್ರಯಃ ।
ತ್ರ್ಯಕ್ಷೋ ಭಗಾಕ್ಷಿಮಥನಃ ಪ್ರತ್ಯಕ್ಷಂ ಸಮದೃಶ್ಯತ ॥೨೯॥

ಬಾಲೇಂದುಗಂಗಾವಿಧೃತಜಟಾಮೌಳಿಃ ಸುರಾರಿಹಾ ।
ಗಣವೃಂದಯುತಸ್ತೇಷಾಮುಗ್ರೋಽಗ್ರೇ ಸಮದೃಶ್ಯತ ॥೩೦॥

---

ಪಾದದ ವರ್ಣನೆಯು ಅತಿಯಾಗಿರುವುದು. ಇಂತಹ ಮಹಾಮಹಿಮನಾದ ನೀನು ನಮ್ಮ ಅಪರಾಧಗಳನ್ನು ಮನ್ನಿಸಿ ಈ ರಾಕ್ಷಸ ಭಯದಿಂದ ನಮ್ಮನ್ನು ಕಾಪಾಡು' ಎಂದು ವಿಶ್ವೇದೇವತೆಗಳು ನುಡಿದರು. ॥೨೬॥

'ದೇವದೇವನೇ, ವಿಷಧರನೇ, ಯಮಭಂಜಕನೇ, ಗೌರೀಪತಿಯೇ, ನಮ್ಮನ್ನು ದಯಾದೃಷ್ಟಿಯಿಂದ ನೋಡು. ವೃಷಭವಾಹನನೆನಿಸಿ ಗಿರಿಜೆಯನ್ನೇ ಅರ್ಧದೇಹವನ್ನಾಗಿ ಪಡೆದಿರುವ ಮಹಾತ್ಮನೇ, ಸರ್ಪಗಳನ್ನೇ ಆಭರಣವನ್ನಾಗಿ ಹೊಂದಿರುವ ಮಹಾತ್ಮನೇ, ದೇವತೆಗಳಿಗೆ ಒದಗಿ ಬಂದಿರುವ ಭಯರೂಪವಾದ ಸಮುದ್ರದಿಂದ ಅವರನ್ನು ದಾಟಿಸುವವನು ನೀನಲ್ಲದೆ ಮತ್ತಾರು?' ಎಂದು ಮಾತೃದೇವತೆಗಳು ಮೊರೆಯಿಟ್ಟರು. ॥೨೭॥

ಹೀಗೆ ಸಕಲ ದೇವತೆಗಳೂ ನಾನಾರೀತಿ ಪ್ರಾರ್ಥನೆಮಾಡಿದ್ದನ್ನು ಕೇಳಿ ದಯಾಶಾಲಿಯೂ, ಗೌರೀಪತಿಯೂ ಆದ ಪರಶಿವನು ಅವರ ಕೋರಿಕೆಯನ್ನು

|| ಸೂತ ಉವಾಚ ||

ದೃಷ್ಟ್ವಾ ತೇ ಸುರಪುಂಗವಾನತಿಧೃತಸ್ವೈಃ ಪದ್ಮಸಜ್ಜೈಃ ಕರೈಃ ।
ದೇವಂ ಚಾರುಶಶಾಂಕಸುಂದರಜಟೋದಗ್ರಪ್ರಸನ್ನಾನನಂ ।
ಸನ್ನಾಸ್ತೇ ತ್ರಿಪುರೈರ್ವಿದಾರಿತಪದಕ್ಷ್ಣಿಣ್ಣಾಂ ತತೋ ನೋನಿರೇ ।
ಶಂಭುಂ ತದ್ಭಯನೋಚನೇಭ್ಯುಪಗತಂ ಪ್ರಾಹುಸ್ಸ್ವಕೀರ್ತಿಂ ಸುರಾಃ॥೩೧॥

ಇತಿ ಶ್ರೀಶಿವರಹಸ್ಯೇ ದಶಮಾಂಶೇ ಪೂರ್ವಾರ್ಧೇ ದೇವಸ್ತುತಿದೇವ
ತಪೋವರ್ಣನನಿರೂಪಣಂ ನಾಮ ಅಷ್ಟಾದಶೋಧ್ಯಾಯಃ

---

ನೆರವೇರಿಸಿಕೊಡಲು ಅವರಿಗೆ ಪ್ರತ್ಯಕ್ಷನಾದನು. ಆಗ ಮಹಾದೇವನು ಬಿಳಿಯ ಎತ್ತಿನ ಮೇಲೆ ಪಾರ್ವತಿಯೊಡನೆ ಕುಳಿತು, ತನ್ನ ಮೂರುಕಣ್ಣುಗಳಿಂದಲೂ, ಬಾಲ ಚಂದ್ರ, ಗಂಗಾತರಂಗ, ಜಟಾಜೂಟ, ಇವುಗಳಿಂದಲೂ ಶೋಭಿಸುತ್ತಾ ಪ್ರಮಥ ಗಣಗಳಿಂದೊಡಗೂಡಿ ಬಂದಿದ್ದನು. ||೨೮-೨೯-೩೦||

ಹೀಗೆ ಪ್ರತ್ಯಕ್ಷನಾದ ಪರಶಿವನನ್ನು ನೋಡಿ ದೇವತೆಗಳೆಲ್ಲರೂ ಕಮಲಗಳನ್ನು ಕೈಯ್ಯಲ್ಲಿ ಹಿಡಿದು ಶಂಕರನಿಗೆ ವಂದಿಸಿದರು. ಚಂದ್ರಕಲೆಯಿಂದಲೂ, ಜಟಾಕಲಾಪ ದಿಂದಲೂ ಸುಂದರವಾದ ಶಿವನ ಮುಖವನ್ನು ನೋಡುತ್ತಾ ಆನಂದಪರವಶರಾಗಿ ತ್ರಿಪುರಾಸುರರಿಂದ ತುಳಿಯಲ್ಪಟ್ಟ ತಮ್ಮ ಕೀರ್ತಿಯು ಮತ್ತೆ ಲಭಿಸಬಹುದೆಂದು ಆಸೆಪಟ್ಟರು. ಮತ್ತು ತಮಗೆ ಒದಗಿರುವ ಈ ದೈತ್ಯಭಯವನ್ನು ತಪಿಸುವುದಕ್ಕಾ ಗಿಯೇ ಮಹೇಶ್ವರನು ಪ್ರಸನ್ನನಾಗಿ ಈಗ ನಯನಗೋಚರನಾಗಿರುವನೆಂದು ಭಾವಿಸಿದರು. ಮತ್ತು ಮುಂದೆ ಹೇಳುವಂತೆ ತಮ್ಮ ಕಷ್ಟಗಳನ್ನು ಪರಶಿವನಲ್ಲಿ ಅರಿಕೆಮಾಡಿಕೊಂಡರು. ||೩೧||

ಇಲ್ಲಿಗೆ ಶ್ರೀಶಿವರಹಸ್ಯದ ಹತ್ತನೆಯ ಅಂಶದ ಪೂರ್ವಾರ್ಧದಲ್ಲಿ ದೇವತೆಗಳು
ಪರಶಿವನನ್ನು ಸ್ತುತಿಸಿದ ಕಥೆಯನ್ನು ತಿಳಿಸುವ ಹದಿನೆಂಟನೆಯ
ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ಶ್ರೀ ಶಿವಾಯನಮಃ ॥

# ಅಥ ಶ್ರೀಶಿವರಹಸ್ಯೇ

## ಈಶಾನಾಖ್ಯೇ

## ದಶಮಾಂಶಪೂರ್ವಾರ್ಧೇ

## ಏಕೋನವಿಂಶೋಽಧ್ಯಾಯಃ

॥ ದೇವಾ ಊಚುಃ ॥

ದೇವದೇವ ಮಹಾದೇವ ಶರಣಾಗತವತ್ಸಲ ।
ನಮೋ ನಮಸ್ತೇ ದೇವೇಶ ವಿಶ್ವೇಶ ಶಶಿಶೇಖರ ॥೧॥

ಪಾಹಿ ಪಾಹಿ ಕೃಪಾಸಿಂಧೋ ಬಂಧೋ ಸಿದ್ಧಾದಿವಂದಿತ ।
ಸ್ಕಂದವಂದಿತಪಾದಾಬ್ಜ ವೃಂದಾರಕಗಣಾರ್ಚಿತ ॥೨॥

ಮಂದಾರಸುಂದರಸುಮಮರಂದಸ್ರಾವಿಸತ್ಪ್ರಭ ।
ಮಹಾಹಿಕಟಕದ್ಯೋತಿವಿದ್ಯೋತಾಂಗಮಹೇಶ್ವರ ॥೩॥

---

## ಹತ್ತೊಂಬತ್ತನೆಯ ಅಧ್ಯಾಯ

ದೇವತೆಗಳು ಸ್ವವಿಷಯವನ್ನು ಪರಶಿವನಿಗೆ ತಿಳಿಸುವ ಮೊದಲು ಮಹಾದೇವನನ್ನು ಈ ರೀತಿ ಸ್ತುತಿಸಿದರು.—ದೇವದೇವನೇ, ಶರಣಾಗತರಕ್ಷಕನೇ, ಜಗದೊಡೆಯನೇ, ಚಂದ್ರಶೇಖರನೇ, ನಮ್ಮನ್ನು ಕಾಪಾಡು. ನೀನು ದಯಾಸಮುದ್ರನು. ಸಿದ್ಧವಿದ್ಯಾಧರಾದಿಗಳೂ, ಕುಮಾರಸ್ವಾಮಿಯೂ ವಿಶೇಷವಾಗಿ ದೇವಗಣವೂ ನಿನ್ನ ಪಾದವನ್ನೇ ಸೇವಿಸುತ್ತಿರುವರು. ॥೧-೨॥

ಮಹಾದೇವನೇ, ನಿನ್ನ ಪ್ರಭೆಯು ಮಂದಾರಪುಷ್ಪದ ಮಕರಂದದಂತೆ ಸರ್ವವ್ಯಾಪ್ತವಾಗಿರುವುದು. ನಾಗಾಭರಣದಿಂದ ನಿನ್ನ ಸರ್ವಾಂಗವೂ ಶೋಭಿಸುತ್ತಿರುವುದು. ಕಂಠದಲ್ಲಿ ಧರಿಸಿರುವ ವಿಷಾಧಿಕ್ಯದಿಂದ ಜಗತ್ತ್ರಯವೇ ನಡುಗುತ್ತಿರುವುದು. ಲೋಕಕ್ಕೆ ದೊಡ್ಡವನೆನಿಸಿ, ದಿಗಂಬರನಾಗಿ ಸನಾತನನೆನಿಸಿರುವ ನಿನಗೆ ನಮಸ್ಕಾರ

ಗರಳಧೃಕ್ಕಂಠಕಂಠೀರವ ಕುಂಭೀಭೂತಜಗತ್ತ್ರಯ ।
ವಿಶ್ವಾಧಿಕಾಶಾವಸನ ಸನಾತನ ನಮೋಸ್ತು ತೇ ॥೪॥

ಗಿರೀಂದ್ರಜಾಕುಚಾಶ್ಲೇಷಪುಲಕಾಂಕಿತವಿಗ್ರಹ ।
ಪತಂಗಗಿರಿಸೋಮಾದಿವಿಲೋಕನ ವಿನೋದನ ॥೫॥

ಇಭವಕ್ತ್ರಾಬ್ಜಲೋಕಾರ್ಕವಿಲೋಕನಯನಾವ್ಯಯ ।
ಉಗ್ರಾಮೇಯಭವಾಮೇಯ ಪಾಹಿ ಪಾಹಿ ಮಹೇಶ್ವರ ॥೬॥

ಗಜಾಂಧಕಾಸುರ ಹರ ಮತ್ತಾನಂಗಾಂಗನಾಶಕ ।
ಮಹಾಕೈಲಾಸನಿಲಯ ಜಗದ್ವಿಲಯ ಶಂಕರ ॥೭॥

ಕಿಂಕರಾನ್ ಶರಣಾಪನ್ನಾನಾಪನ್ನಾನ್ ಪಾಹಿ ಶಂಕರ ।
ಮಹೋಕ್ಷಧ್ವಜಕಾಮಾರೇ ಮಾಂ ಸದಾ ಪಾಹಿ ಧೂರ್ಜಟೇ ॥೮॥

ಪಿನಾಕಪಾಣೇ ಖಟ್ವಾಂಗಿನ್ ಖಡ್ಗಪಾಶಧರ ಪ್ರಭೋ ।
ವ್ಯೋಮಕೇಶ ಭವಾಮೇಯ ದಕ್ಷಾಧ್ವರನಿವಾರಕ ॥೯॥

---

ಸುವೆವು. ಪಾರ್ವತಿಯ ಆಲಿಂಗನದಿಂದ ರೋಮಾಂಚವನ್ನು ಪಡೆಯುವ ಮಹಾದೇವನೇ, ನೀನು ಸಮಸ್ತ ವಸ್ತುಗಳನ್ನೂ ಗಿರಿದುರ್ಗಸೂರ್ಯಚಂದ್ರಾದಿಗಳನ್ನೂ ನೋಡುತ್ತಾ ಆನಂದಪಡುತ್ತಿರುವೆಯಲ್ಲವೆ! ॥೩-೪-೫॥

ಗಣಪತಿಯ ಮುಖಕಮಲಕ್ಕೆ ಸೂರ್ಯನಂತಿರುವ ಮಹಾದೇವನೇ, ನೀನು ನಾಶರಹಿತನು. ಉಗ್ರರೂಪಿಯು. ಅಪರಿಮಿತವಾದ ಆಕಾರವುಳ್ಳವನು. ಗಜಾಸುರ, ಅಂಧಕಾಸುರ, ಮನ್ಮಥ, ಯಮ ಮೊದಲಾದವರು ನಿನ್ನ ತೇಜಸ್ಸಿನಿಂದ ದಗ್ಧರಾಗಿರುವರು. ಕೈಲಾಸವೇ ನಿನಗೆ ಮುಖ್ಯನೆಲೆ ಎನಿಸಿದೆ. ಪ್ರಪಂಚವನ್ನೇ ನಾಶಗೊಳಿಸಬಲ್ಲ ವೃಷಭವಾಹನನೇ, ಶರಣಾಗತರಾಗಿ, ಸೇವಕರಾಗಿ ಬಂದಿರುವ ನಮ್ಮನ್ನು ದಯೆಯಿಂದ ಕಾಪಾಡು. ॥೬-೭-೮॥

ಪಿನಾಕಪಾಣಿಯೂ, ಖಟ್ವಾಯುಧಧಾರಿಯೂ ಖಡ್ಗಪಾಶವನ್ನು ಹಿಡಿದಿರುವವನೂ, ವ್ಯೋಮಕೇಶನೂ ಆದ ಮಹಾದೇವನೇ, ನೀನೇ ದುಷ್ಟವಾದ ದಕ್ಷಯಜ್ಞವನ್ನು ನಾಶಗೊಳಿಸಿದವನು. ಬ್ರಹ್ಮಕಪಾಲವನ್ನು ಧರಿಸಿರುವವನೂ ಭಯಂಕರನೂ,

ಕಪಾಲಪಾಣೇ ಭಗವನ್ ರುದ್ರಾನಂತಪ್ರಭೋ ಹರ ।
ಫಣಿಭೂಷಿತ ಶಾಂತಾತ್ಮನ್ ಕೃತ್ತಿವಾಸ ಮಹೇಶ್ವರ ॥೧೦॥

ಹಿರಣ್ಯಬಾಹೋ ದೇವೇಶ ಕುಂಡಲೀಶವಿಭೂಷಣ ।
ಶೂಲಪಾಣೇ ವಿಶ್ವಮೂರ್ತೇ ವೇದವೇದಾಂತಬೋಧಿತ ॥೧೧॥

ಕರ್ಪೂರಗೌರಗೌರೀಶ ಶಿವಾಪ್ರೇಮಾರ್ಧದೇಹಕ ।
ಕೃಪಾಸಾಗರಭಾವಾತ್ಮನ್ ಶಂಭೋ ಸಾಂಬ ಸದಾಶಿವ ॥೧೨॥

ತ್ರಿಪುರಾಸುರಸಂತ್ರಸ್ತಾನಸ್ಮಾನ್ ಪಾಹಿ ಜಗತ್ಪ್ರಭೋ ॥೧೩॥

॥ ಸ್ಕಂದ ಉವಾಚ ॥

ಇತ್ಥಂ ದೇವಸ್ತುತಿಂ ಶ್ರುತ್ವಾ ಸರ್ವೇಷಾಂ ಪರಮೇಶ್ವರಃ ।
ಬ್ರಹ್ಮವಿಷ್ಣ್ವಾದಿದೇವಾಂಶ್ಚ ವಿಲೋಕ್ಯ ಪ್ರಾಹ ಶಂಕರಃ ॥೧೪॥

॥ ಈಶ್ವರ ಉವಾಚ ॥

ತ್ರಿಪುರಾಸುರನಾಶಾರ್ಥಂ ದೇವಾ ಯೂಯಂ ಸದಾ ಮಮ ।
ಜಯಾಯ ರಥಸನ್ನದ್ಧಂ ಕುರ್ವಂತು ದ್ರುತಮೇವ ಮೇ ॥೧೫॥

---

ಫಣಿಭೂಷಿತನೂ, ಶಾಂತಸ್ವಭಾವದವನೂ ನೀನೇ. ಗಜಚರ್ಮಾಂಬರಧಾರಿಯಾಗಿರುವ ಮಹೇಶ್ವರನೇ, ನಿನಗೆ ವಂದಿಸುವೆವು. ॥೯-೧೦॥

ಹಿರಣ್ಯದಿಂದ (ಸುವರ್ಣ) ಅಲಂಕೃತವಾದ ತೋಳುಳ್ಳವನೇ, ದೇವದೇವನೇ, ಆದಿಶೇಷನನ್ನೇ ಒಡವೆಯನ್ನಾಗಿ ಉಳ್ಳ, ಶೂಲಪಾಣಿಯೇ, ಜಗತ್ಸ್ವರೂಪನೂ, ವೇದೋಪನಿಷತ್ತುಗಳಲ್ಲಿ ಪ್ರಸಿದ್ಧನೂ ಆದವನೇ, ನೀನು ಕರ್ಪೂರರಾಶಿಯಂತೆ ಶುಭ್ರದೇಹವುಳ್ಳ ಗೌರೀಪತಿಯು. ಪ್ರೇಮದಿಂದ ಪತ್ನಿಗೆ ಅರ್ಧಶರೀರವನ್ನು ಕೊಟ್ಟಿರುವವನು. ದಯಾಸಾಗರನು. ಮಹಾದೇವನೇ, ಈ ತ್ರಿಪುರಾಸುರರಿಗೆ ಹೆದರಿ ಇಲ್ಲಿಗೆ ಓಡಿಬಂದಿರುವ ನಮ್ಮನ್ನು ದಯೆಯಿಂದ ಸಲಹು." ॥೧೧-೧೨-೧೩॥

ಹೀಗೆ ಪ್ರಾರ್ಥಿಸಿದ ದೇವತೆಗಳನ್ನೂ, ಬ್ರಹ್ಮಾದಿದೇವಶ್ರೇಷ್ಠರನ್ನೂ ನೋಡುತ್ತಾ ಶಂಕರನು ಅವರಿಗೆ ಹೀಗೆ ಆಶ್ವಾಸನವಿತ್ತನು.—ದೇವತೆಗಳಿರಾ, ನಾನು ಈಗಲೇ ತ್ರಿಪುರಾಸುರರನ್ನು ಜಯಿಸುವೆನು. ಅದಕ್ಕಾಗಿ ನೀವೆಲ್ಲರೂ ನನ್ನ ರಥವನ್ನು ಸಿದ್ಧಗೊಳಿಸಿರಿ. ॥೧೪-೧೫॥

ಯಥಾ ತ್ರಿಪುರಸಂಯೋಗೋ ಯಾವತಾ ಸಂಭವಿಷ್ಯತಿ ।
ತಾವತ್ಸ್ಥಾಸ್ಯೇ ರಥೇ ದೇವಾಃ ಸನ್ನದ್ಧೋ ರಥಪಸ್ತ್ವಯಂ ॥೧೬॥

ಧನುರ್ಮೇ ಕಲ್ಪ್ಯತಾಂ ಶೀಘ್ರಂ ಬಾಣಂ ಘೋಣಯುತಂಸುರಾಃ ।
ಚಕ್ರೇ ರಥಸ್ಯ ಸಜ್ಜತ್ವಂ ಮೌರ್ವೀಮಹಿಗಣೇಶ್ವರಂ ॥೧೭॥

ವೇದಾಶ್ಚ ಚತುರೋ ದೇವಾ ವಾಹಾಸ್ಸಂತು ಸದಾ ಮಮ ।
ಕ್ಷೋಣೀಮಂಡಲಮೇತದ್ವೈ ರಥಭೂತಂ ಭವೇನ್ಮಮ ॥೧೮॥

ಕೀಲಾಸ್ತಸ್ಯ ಮಹಾಧರ್ಮಾ ಭವಂತು ವಿಗತಜ್ವರಾಃ ।
ಯಂತಾ ವಿಧಿರಯಂ ಭೂಯಾನ್ಮಮ ಸಾರಥ್ಯಕಲ್ಪಕಃ ॥೧೯॥

ಇತ್ಥಂ ಶಂಭೋರ್ವಚಃ ಶ್ರುತ್ವಾ ದೇವಾ ದೇವಂ ಪ್ರಣಮ್ಯ ಚ ।
ಗತ್ವಾ ತನ್ಮೇರುನಿಲಯಮುಥೋಪಾಯಮಚಿಂತಯನ್ ॥೨೦॥

ಬೃಹಸ್ಪತಿಂ ಬೃಹದ್ಬುದ್ಧಿಂ ಸಮಾಹೂಯ ದಿವೌಕಸಃ ॥೨೧॥

ಮಹಾದೇವಸ್ಯ ಸಮರೇ ರಥೋದ್ಯೈವ ಪ್ರಕಲ್ಪ್ಯತಾಂ ।
ತತ್ರ ನೋ ಬುದ್ಧಿನೈಪುಣ್ಯಂ ನಿದರ್ಶಯ ಗುರೋ ಗುರುಂ ॥೨೨॥

---

ತ್ರಿಪುರಗಳು ಮೂರೂ ಒಟ್ಟುಗೂಡಿ ನಾಶವಾಗುವತನಕ ನಾನು ರಥದಲ್ಲಿಯೇ ಕುಳಿತು ಯುದ್ಧಮಾಡುವೆನು. ಈಗಲೇ ನೀವು ನನಗೆ ಧನುಸ್ಸು, ಬಾಣ, ಕುದುರೆ, ರಥ, ಮೌರ್ವೀ ಮೊದಲಾದುವುಗಳನ್ನೂ ಸಿದ್ಧಪಡಿಸಿರಿ. ನನ್ನ ಧನುಸ್ಸಿಗೆ ಆದಿಶೇಷನೇ ಮೌರ್ವಿ (ಕಟ್ಟುವಹುರಿ) ಯಾಗಲಿ. ನಾಲ್ಕು ವೇದಗಳೇ ನಾಲ್ಕು ಕುದುರೆಗಳಾಗಲಿ. ಈ ಭೂಮಂಡಲವನ್ನೇ ರಥವನ್ನಾಗಿ ನಿರ್ಮಿಸಿರಿ. ॥೧೬-೧೭॥

ಧರ್ಮಗಳೇ ರಥದ ಕೀಲುಗಳಾಗಲಿ. ಬ್ರಹ್ಮನೇ ಸಾರಥಿಯಾಗಬೇಕು. ಹೀಗೆ ಅಪ್ಪಣೆಮಾಡಿದ ಶಂಕರನ ವಾಣಿಯನ್ನು ಕೇಳಿ, ದೇವತೆಗಳೆಲ್ಲರೂ ಶಿವನಿಗೆ ಒಟ್ಟಾಗಿ ವಂದಿಸಿ, ಮೇರುಶಿಖರಕ್ಕೆ ಹೋಗಿ ಬುದ್ಧಿಶಾಲಿಯಾದ ಬೃಹಸ್ಪತ್ಯಾಚಾರ್ಯನೊಡನೆ ಕಲೆತು ಅದನ್ನು ಸಾಧಿಸುವ ಉಪಾಯವನ್ನು ಯೋಚಿಸಿದರು. ॥೧೯-೨೦-೨೧॥

ಮತ್ತು ದೇವತೆಗಳು ಬೃಹಸ್ಪತಿಯೊಡನೆ “ ಗುರುವೇ, ಶಂಕರನಿಗೆ ರಥಾದಿಗಳನ್ನು ಈಗಲೇ ಸಿದ್ಧಗೊಳಿಸಬೇಕಾಗಿದೆ. ಅದಕ್ಕೆ ನಮಗೆ ಬುದ್ಧಿ ಸಾಲದು. ನೀನು

ಇತ್ಥಂ ದೇವವಚಶ್ಶ್ರುತ್ವಾ ಗುರುಃ ಪ್ರಾಹ ತದಾಮರಾನ್ ।
ಬುದ್ಧ್ವಾಭ್ಯಭಿಧಾಯ ದೇವಸ್ಯ ರಥಮಾರೋಹಯೋಗಿನಂ ॥೨೩॥

ವಿಶ್ವಕರ್ಮಾಣಮಾಹೂಯ ಸುಮುಹೂರ್ತೇ ತದಾ ಗುರುಃ ।
ವಿಘ್ನಾದ್ರಿಶಮನಂ ನತ್ವಾ ಸ್ತುತ್ವಾ ಸಂಪೂಜ್ಯ ಭಕ್ತಿತಃ ॥೨೪॥

ಯುಕ್ತಿಸೂಕ್ತಂ ವಿಚಿಂತ್ಯಾಥ ಸ್ವಯಮಾಧಾಯ ಯತ್ನತಃ ।
ಕ್ಷೋಣೀಮಕಲ್ಪಯಂಸ್ತತ್ರ ರಥಮಂಡಲವಿಸ್ತೃತಂ ॥೨೫॥

ಚಕ್ರೇ ಚಕ್ರೇಥ ಸೂರ್ಯೇಂದುಸದೃಕ್ಷಾಕ್ಷಂ ಯುಗಾತ್ಮಕಂ ।
ಯುಗಂ ಧರ್ಮಮಯಂ ತಸ್ಯ ರಥಸ್ಯ ಪರಿಕಲ್ಪಯತ್ ॥೨೬॥

ಘೋಣಾಂ ಸ್ಮೃತಿಮಯೀಂ ಚಕ್ರೇ ಕೀಲಾಸ್ತಸ್ಯ ತೃಟೀಲವಾಃ ।
ಚತ್ವಾರೋ ನಿಗಮಾ ವಾಹಾಃಸ್ತಂಭಾ ಕುಂಭಾಶ್ಚ ವಿದ್ಯುತಃ ॥೨೭॥

ಪತಾಕಾ ತತ್ರ ಜ್ವಾಲಾನಿ(?) ತ್ರಿವೇಣುಃ ಪ್ರಣವೋಽಭವತ್ ।
ಮೇರುಂ ಧನುಸ್ತದಾ ಚಕ್ರೇಜ್ಯಾಂ ಚಾಹಿಗಣಪುಂಗವಂ ॥೨೮॥

---

ಬಂದು ಸುಲಭೋಪಾಯವನ್ನು ತಿಳಿಸಿದರೆ ಅದರಂತೆ ನಾವು ನಡೆಸುವೆವು" ಎನ್ನಲು, ಬೃಹಸ್ಪತಿಯು ಅವರ ಮಾತುಗಳನ್ನು ಕೇಳಿ, ಕೂಡಲೇ ಕರ್ಮಯೋಗಿಯಾದ ವಿಶ್ವಕರ್ಮನನ್ನು ಬರಮಾಡಿಕೊಂಡು ಶುಭಮುಹೂರ್ತದಲ್ಲಿ ಗಣಪತಿಯನ್ನು ಪೂಜಿಸಿ, ಅವನಿಗೆ ನಮಿಸಿ ವಿಶ್ವಕರ್ಮನೊಡನೆ ಈಶ್ವರನ ರಥನಿರ್ಮಾಣಕಾರ್ಯಕ್ಕೆ ತೊಡಗಿದನು. ॥೨೨-೨೩-೨೪॥

ಯುಕ್ತಿಯುಕ್ತವಾಗಿ ಯೋಚನೆಮಾಡಿ ಆ ವಿಶ್ವಕರ್ಮನು ಶಿವರಥಕ್ಕೆ ಭೂಮಂಡಲವನ್ನೇ ರಥವನ್ನಾಗಿ ಕಲ್ಪನೆಮಾಡಿದನು. ಸೂರ್ಯಚಂದ್ರರನ್ನೇ ಚಕ್ರಗಳನ್ನಾಗಿ ಕಲ್ಪಿಸಿದನು. ಚತುರ್ಯುಗಗಳನ್ನೇ ಗಾಲಿಗಳ ಅಚ್ಚುಗಳನ್ನಾಗಿ ಏರ್ಪಡಿಸಿದನು. ಧರ್ಮಗಳನ್ನೇ ಕೀಲುಗಳನ್ನಾಗಿಯೂ, ಧರ್ಮಶಾಸ್ತ್ರಗಳನ್ನೇ ಕಡಿವಾಣಗಳನ್ನಾಗಿಯೂ, ತೃಟೀ, ಲವ, ಏತದ್ರೂಪವಾದ ಕಾಲವಿಶೇಷಗಳನ್ನು ಮೊಳೆಗಳನ್ನಾಯೂ, ನಾಲ್ಕು ವೇದಗಳನ್ನೇ ಕಂಬಗಳನ್ನಾಗಿಯೂ ಪರಿವರ್ತನೆಮಾಡಿದನು. ॥೨೫-೨೬-೨೭॥

ಅಗ್ನಿಯ ಜ್ವಾಲೆಯನ್ನೇ ಪತಾಕೆಗಳನ್ನಾಗಿಯೂ, ಪ್ರಣವವನ್ನೇ ರಥಮಧ್ಯದ ಪೀಠವನ್ನಾಗಿಯೂ, ಮೇರುಪರ್ವತವನ್ನೇ ಧನುಸ್ಸನ್ನಾಗಿಯೂ, ಆದಿಶೇಷನನ್ನು

ಸ್ವಯಂ ವಿಧಿರಭೂದ್ಯಂತಾ ರಶ್ಮಯೋಪನಿಷದ್ಗಣಂ ।
ಓಂಕಾರಸ್ತತ್ಪ್ರತೋದಂ ವೈ ಚಕ್ರುಸ್ತತ್ರ ಸುರೇಶ್ವರಾಃ ॥೨೯॥

ವಾಜೋ ಬಾಲಸ್ಯ ಶಿಖೀ ಸೋಮಃ ಕಂಠಮಭೂತ್ತದಾ ।
ಫಾಲಂ ತಸ್ಯಾಭವದ್ವಿಷ್ಣುಸ್ತದಾ ತೇ ರಥಕಲ್ಪನಂ ॥೩೦॥

॥ ದೇವಾ ಊಚುಃ ॥

ಕೃತ್ವಾ ನಿವೇದಯಂಸ್ತತ್ರ ನಂದಿನಂ ವಿಶ್ವನಂದಿನಂ ।
ಪ್ರಾಹುಃ ಪ್ರಾಂಜಲಯಃ ಸರ್ವೇ ಕೈಲಾಸದ್ವಾರ್ಯಧಿಷ್ಠಿತಾಃ ॥೩೧॥

ರಥಸ್ಸಜ್ಜೋ ರಥಪತೇರ್ವಿಜಯಾಯ ಮಹೇಶಿತುಃ ।
ದೇವಾನಾಂ ಕಾರ್ಯಸಿದ್ಧ್ಯರ್ಥಂ ವಿಜ್ಞಾಪಯ ಶಿಲಾದಜಃ ॥೩೨॥

॥ ನಂದ್ಯುವಾಚ ॥

ತದಾ ದೇವವಚಃಶ್ರುತ್ವಾ ಗತ್ವಾ ನತ್ವಾ ಮಹೇಶ್ವರಂ ।
ಸ್ತುತ್ವಾ ಪ್ರೋವಾಚ ವಚನಂ ದೇವಾನಾಂ ನಂದಿಕೇಶ್ವರಃ ॥೩೩॥

---

ಮೌರ್ವಿಯನ್ನಾಗಿಯೂ ಕಲ್ಪಿಸಿದನು. ಬ್ರಹ್ಮನು ಆ ರಥಕ್ಕೆ ಸಾರಥಿಯಾದನು. ಉಪನಿಷತ್ತುಗಳು ಕುದುರೆಯ ಹಗ್ಗಗಳಾದವು. ಓಂಕಾರವು ಚಾವಟಿಯಾಯಿತು. ಅಗ್ನಿಯು ರಥದ ಮೇಲುಗಡೆಯೂ, ಚಂದ್ರನು ಮಧ್ಯದಲ್ಲಿಯೂ, ವಿಷ್ಣುವು ಮುಖ ಭಾಗದಲ್ಲಿಯೂ ನೆಲಸುವಂತೆ ಮಾಡಿದನು. ಇಷ್ಟಾದ ಮೇಲೆ ಆ ರಥವು ಸಿದ್ಧವಾದಂತಾಯಿತು. ॥೨೮-೨೯-೩೦॥

ಅನಂತರ ದೇವತೆಗಳು ಆ ವಿಷಯವನ್ನು ಶಂಕರನಿಗೆ ವಿಜ್ಞಾಪಿಸಲು ಕೈಲಾಸಪರ್ವತದಸಮೀಪಕ್ಕೆ ಬಂದು ಅಲ್ಲಿ ದ್ವಾರಪಾಲಕನಾಗಿ ನಿಂತಿದ್ದ ನಂದೀಶ್ವರನನ್ನು ಕುರಿತು 'ನಂದೀಶನೇ, ಈಶ್ವರಾಜ್ಞೆಯಂತೆ ನಾವು ರಥವನ್ನು ಸಿದ್ಧಗೊಳಿಸಿರುವೆವು. ದೇವತೆಗಳ ವಿಜಯಕ್ಕಾಗಿ ರಥವು ಸಿದ್ಧವಾಗಿದೆ. ಈ ವಿಷಯವನ್ನು ದಯವಿಟ್ಟು ಪರಶಿವನಿಗೆ ವಿಜ್ಞಾಪಿಸು' ಎಂದು ಪ್ರಾರ್ಥಿಸಿಕೊಂಡರು. ॥೩೧-೩೨॥

ಅದನ್ನು ಕೇಳಿ ನಂದೀಶ್ವರನು ತಾನೇ ಜಾಗ್ರತೆ ಶಿವಸನ್ನಿಧಿಗೈದಿ, ಶಿವನನ್ನು ಸ್ತುತಿಸುತ್ತಾ ನಮಸ್ಕರಿಸಿ, 'ಮಹಾದೇವನೇ, ವಿಷ್ಣು, ಬ್ರಹ್ಮ ಮೊದಲಾದ ದೇವತೆಗಳೆಲ್ಲರೂ ರಥವನ್ನು ಸಿದ್ಧಪಡಿಸಿಕೊಂಡು ನಿನ್ನ ವಿಜಯಪ್ರಯಾಣವನ್ನು

ವಿಷ್ಣುಬ್ರಹ್ಮಾದಯೋ ದೇವಾ ದೇವದೇವ ಮಹೇಶ್ವರ ।
ಕೈಲಾಸದ್ವಾರಿ ಸಂಗತ್ಯ ರಥಸ್ಸುರಥಕಲ್ಪನಃ ॥೩೪॥

ಸಿದ್ಧೋ ರಥಪತೇ ಶಂಭೋ ತ್ರಿಪುರಾಣಾಂ ಜಯಾಯ ತೇ ।
ಪ್ರತೀಕ್ಷಂತೇದ್ಯ ಮುದಿತಾಃ ಪದ್ಮಿನೀವ ದಿವಾಕರಂ ॥೩೫॥

ಕ್ಷೀಣಾ ದೇವಗಣಾಸ್ಸರ್ವೇ ವೀಕ್ಷಂತೇ ತವ ವೀಕ್ಷಣಂ ।
ಆಜ್ಞಾಂ ತೇಷಾಂ ಚ ವಿಜ್ಞಪ್ತಿಂ ಸಮಾಕರ್ಣಯ ಶಂಕರ ॥೩೬॥

ಇತ್ಥಂ ಶಿಲಾದತನಯಸ್ಯ ವಚೋ ನಿಶಮ್ಯ
ವೀಕ್ಷ್ಯಾದ್ರಿಸೌಧಮಥ ಮಂಚವಿಹಾರಸಂಸ್ಥಃ ।
ಪಶ್ಯನ್ನುವಾಚ ಗಿರಿಜಾಂ ಮದನಾಂತಕಾರಿ
ಸ್ತನ್ನಂದಿನಂ ಸುವಚನಾಮೃತಸಾರವರ್ಷೈಃ ॥೩೭॥

ಇತಿ ಶ್ರೀ ಶಿವರಹಸ್ಯೇ ಪೂರ್ವಾರ್ಧೇ ಈಶಾನಾಖ್ಯೇ ದಶಮಾಂಶೇ
ದೇವಸ್ತುತಿ ರಥಸಜ್ಜಾಕಲ್ಪನ ನಿರೂಪಣಂ
ನಾಮ ಏಕೋನವಿಂಶೋಽಧ್ಯಾಯಃ

---

ನಿರೀಕ್ಷಿಸುತ್ತಿರುವರು. ಕಮಲಗಳಗುಂಪು ಸೂರ್ಯನನ್ನು ನಿರೀಕ್ಷಿಸುತ್ತಿರುವಂತೆ ನಿನ್ನ ಆಗಮನವನ್ನೇ ಆತುರದಿಂದ ಎದುರು ನೋಡುತ್ತಿರುವರು. ॥೩೩-೩೪-೩೫॥

ಶಂಕರನೇ, ದೇವಗಣವೆಲ್ಲವೂ ದಿಕ್ಕುಗೆಟ್ಟು ಕ್ಷೀಣಶರೀರವುಳ್ಳವರಾಗಿ ಕಂಗೆಟ್ಟಿರುವರು. ಮತ್ತು ನಿನ್ನ ಮುಂದಿನ ಅಪ್ಪಣೆಯನ್ನೇ ಎದುರುನೋಡುತ್ತಿರುವರು. ದಯೆಯಿಂದ ಅವರನ್ನು ರಕ್ಷಿಸು' ಎಂದು ವಿಜ್ಞಾಪಿಸಲು, ಆಗ ಮಹಾದೇವನು ದಿವ್ಯಮಂಚದ ಮೇಲೆ ಕೈಲಾಸಶಿಖರದಲ್ಲಿ ಕುಳಿತುಕೊಂಡೇ, ಅಂಗಲಾಚಿ ಬೇಡುತ್ತಿರುವ ನಂದೀಶ್ವರನನ್ನು ಕುರಿತು, ಮುಂದೆ ಹೇಳುವಂತೆ ಮೃದುಮಧುರವಾಗಿ ಕೆಲವು ಮಾತುಗಳನ್ನಾಡಿದನು. ಎಂದು ಜೈಗೀಷವ್ಯನಿಗೆ ಕುಮಾರಸ್ವಾಮಿಯು ಹೇಳಿದುದನ್ನು ಸೂತಮಹರ್ಷಿಯು ಸಕಲಮುನಿವೃಂದಕ್ಕೂ ಉಪದೇಶಿಸಿದನು. ॥೩೬-೩೭॥

ಇಲ್ಲಿಗೆ ಶ್ರೀಶಿವರಹಸ್ಯದ ಹತ್ತನೆಯ ಅಂಶದ ಪೂರ್ವಾರ್ಧದಲ್ಲಿ
ಹತ್ತೊಂಭತ್ತನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

॥ ಶ್ರೀ ಶಿವಾಯನಮಃ ॥

# ಅಥ ಶ್ರೀಶಿವರಹಸ್ಯೇ

## ಈಶಾನಾಖ್ಯೇ

## ದಶಮಾಂಶಪೂರ್ವಾರ್ಧೇ

## ವಿಂಶೋಽಧ್ಯಾಯಃ

॥ ಈಶ್ವರ ಉವಾಚ ॥

ಶೃಣು ನಂದಿನ್ ಮನ್ಯೈವಾಜ್ಞಾಂ ನಿಶಾಮಯ ಸುರಾನ್ ಪ್ರತಿ ।
ಕೇ ತಿಷ್ಠಂತಿ ಶಿವಾಗಾರದ್ವಾರಿ ಕೈಲಾಸಪರ್ವತೇ ॥೧॥

ಇತ್ಥಂ ಶಂಭೋರ್ವಚಶ್ಶ್ರುತ್ವಾ ನಂದೀ ಪ್ರಾಹ ಶಿಲಾದಜಃ ।
ಸ್ವರ್ಣವೇತ್ರಧರೋ ವಿಪ್ರ ಮಹಾವೃಷಭಲಾಂಛಿತಃ ॥೨॥

॥ ನಂದಿಕೇಶ ಉವಾಚ ॥

ಶಂಭೋ ವಿಷ್ಣುರ್ವಿಷ್ಣುಗಣೈರ್ವಿಶ್ವಕ್ಸೇನಾದಿಭಿಸ್ಸಹ ।
ತ್ವತ್ಪದಾಬ್ಜಂ ಹೃದಾ ಧ್ಯಾಯನ್ ಸ್ಥಿತೋ ದ್ವಾರಿ ಸುರೈರ್ವೃತಃ ॥೩॥

---

## ಇಪ್ಪತ್ತನೆಯ ಅಧ್ಯಾಯ

ಪರಶಿವನು ನಂದೀಶ್ವರನನ್ನು ಕುರಿತು "ಅಯ್ಯಾ ಶಿಲಾದಪುತ್ರನೇ, ನಮ್ಮ ಕೈಲಾಸಪರ್ವತದಲ್ಲಿರುವ ಶಿವಾಲಯದ್ವಾರದಲ್ಲಿ ಯಾರು ಯಾರು ನಿಂತಿರುವರು ?" ಎಂದು ಪ್ರಶ್ನಿಸಲು, ಕೈಯಲ್ಲಿ ಚಿನ್ನದ ಬೆತ್ತವನ್ನೂ ವೃಷಭಲಾಂಛನವನ್ನೂ ಪಡೆದಿರುವ ನಂದಿಯು ಹೀಗೆ ವಿಜ್ಞಾಪಿಸಿದನು. ॥೧-೨॥

"ಶಂಭುವೇ, ಮಹಾದೇವನೇ, ವಿಷ್ಣುವು ವಿಶ್ವಕ್ಸೇನನೇ ಮೊದಲಾದ ವಿಷ್ಣುಗಣಗಳೊಡನೆಯೂ, ಬ್ರಹ್ಮನು ಮುನಿಗಣಗಳೊಡನೆಯೂ ಇತರ ಮನುಗ

ಪ್ರಜಾಪತಿಭಿರನ್ಯೈಶ್ಚ ಬ್ರಹ್ಮಾಮುನಿಗಣೈಸ್ಸಹ ।
ಪ್ರಜಪನ್ ಶತರುದ್ರೀಯಂ ತವಾಗಮನಮೀಕ್ಷತೇ ॥೪॥

ಈಶಾನಃ ಸ್ವಗಣೈಸ್ಸಾರ್ಧಂ ಶೂಲೋದ್ಯತಕರೈಶ್ಶಿವ ।
ತವಾಗಮನಮಾಕಾಂಕ್ಷನ್ ಕೈಲಾಸದ್ವಾರಿ ತಿಷ್ಠತಿ ॥೫॥

ಇಂದ್ರೋಽಪಿ ಸ್ವಗಣೈಶ್ಶಕ್ರೈರ್ವಜ್ರಹಸ್ತೈರ್ದುರಾಸದೈಃ ।
ವರುಣಃ ಸ್ವಗಣೈಸ್ಸಾರ್ಧಂ ಪಾಶಹಸ್ತೈರ್ಮಹೇಶ್ವರ ॥೬॥

ಯಕ್ಷಾಣಾಮಧಿಪೋ ದಕ್ಷಃ ಕುಬೇರಸ್ತ್ವಾಂ ಪ್ರತೀಕ್ಷತೇ ।
ಮರುದ್ಭಿರ್ಮರುತೋ ದೇವ ಅಗ್ನಿರಾಗ್ನೇಯಕೈರ್ಗಣೈಃ ॥೭॥

ನಿಋುಋತಿಃ ಸ್ವಗಣೈಶ್ಶಂಭೋ ಯಮಸ್ಸ್ವಗಣಪುಂಗವೈಃ ।
ಗಂಧರ್ವಾ ಗರುಡಾ ಸಿದ್ಧಾ ವಿದ್ಯಾಧರವರಾಸ್ಸುರಾಃ ॥೮॥

ಮಾನವೋ ಮುನಯಶ್ಚೈವ ಪಿತರೋ ಮಾನವಸ್ತಥಾ ।
ತವಾಗಮನಮೀಕ್ಷಂತೇ ಜಯಾಯ ತ್ರಿಪುರಾರಿಣಾಂ ॥೯॥

---

ಳೊಡನೆಯೂ ಶತರುದ್ರಮಂತ್ರವನ್ನು ಜಪಿಸುತ್ತಾ, ನಿನ್ನ ಪಾದಕಮಲವನ್ನು ದರ್ಶನಮಾಡಲು ಎದುರುನೋಡುತ್ತಿರುವರು. ॥೩-೪॥

ಈಶಾನನು ತನ್ನ ಗಣಗಳೊಡನೆ ಶೂಲಾಯುಧವನ್ನು ಧರಿಸಿಕೊಂಡು ನಿನ್ನ ಆಗಮನವನ್ನೇ ನಿರೀಕ್ಷಿಸುತ್ತಿರುವನು. ಇಂದ್ರನು ವಜ್ರಾಯುಧದಿಂದಲೂ, ವರುಣನು ಪಾಶಾಯುಧದಿಂದಲೂ ಕೂಡಿ ತನ್ನ ಗಣಗಳೊಡಗೂಡಿ ಕೈಲಾಸದ್ವಾರ ದಲ್ಲಿ ನಿಂತಿರುವರು. ॥೫-೬॥

ಯಕ್ಷಾಧಿಪನಾದ ಕುಬೇರನೂ, ಮರುದ್ಗಣಗಳೂ, ಅಗ್ನಿಪುರುಷನೂ, ನಿಋುಋತಿಯೂ, ಯಮನೂ, ಗಂಧರ್ವರೂ, ಗರುಡರೂ, ಸಿದ್ಧರೂ, ವಿದ್ಯಾಧರರೂ, ಅಪ್ಸರರೂ, ಮನುಗಳೂ, ಮುನಿಗಳೂ, ಪಿತೃದೇವತೆಗಳೂ ಅವರವರ ಗಣಗಳೊಡ ಗೂಡಿ ನಿನ್ನ ಆಗಮನವನ್ನೇ ನಿರೀಕ್ಷಿಸುತ್ತಾ ನಿನಗಾಗಿ ಕಾದು ನಿಂತಿರುವರು. ಎಂದಿಗೆ ಶಂಕರನು ತ್ರಿಪುರಾಸುರರನ್ನು ನಾಶಗೈಯ್ಯುವನೋ ಎಂದು ಕಾತುರಪಡು

ತದಾ ಶಿಲಾದತನಯಂ ಪ್ರಾಹ ಚಂದ್ರಕಿರೀಟಧೃಕ್ ।
ಪ್ರಾಂಜಲಿಂ ನಂದಿಕೇಶಾನಂ ಸ್ಥಿತಮಗ್ರೇ ತದಾ ಮುನೇ ॥೧೦॥

॥ ಈಶ್ವರ ಉವಾಚ ॥

ಸಮಾನಯ ಗಣೇಶ್ವರಾನ್ ಮಮ ವರಾಸಿಶೂಲೋದ್ಯತಾನ್
ಅಹೀಶಕೃತಕುಂಡಲಾನ್ ವಿಮಲಭಸ್ಮಪುಂಡ್ರಾಂಕಿತಾನ್ ।
ಮೃದಂಗವರಶಂಖಕಾನಕಮುಖೋದ್ಯತಾಡಂಬರಾನ್
ಮಹಾರವಸುದುಂದುಭಿಃ ಸಮಭಿತಾಡಯಂತು ದ್ರುತಂ ॥೧೧॥

ಇತ್ಯುಕ್ತಶ್ಶಶಿಶೇಖರೇಣ ಗಣಪಾನಾಹೂಯ ತತ್ರಾಕರೋತ್ ।
ಸನ್ನದ್ಧಾನ್ ವಿವಿಧಾಯುಧೋತ್ತಮಕರಾನ್ ಸಚ್ಛತ್ರಪಾಣೀಗಣಾನ್॥೧೨॥

ಕಾಲಾಗ್ನಿರುದ್ರೋ ಗಣಲಕ್ಷಕೈರ್ಯುತೋ
ಸ ವೀರಭದ್ರೋಽಪಿ ಚ ಲಕ್ಷಸಂಖ್ಯೈಃ ।
ಚಂಡೇಶ್ವರಶ್ಚಾಪಿ ಚ ಪಂಚಲಕ್ಷೈ
ಭೃಂಗೀ ತದಾ ಲಕ್ಷಕಸಪ್ತಕೈಶ್ಚ ॥೧೩॥

---

ತ್ತಿರುವರು." ಎಂದು ನಂದೀಶ್ವರನು ಕೈಮುಗಿದು ಬಿನ್ನವಿಸಲು, ಚಂದ್ರಶೇಖರನಾದ ಶಂಕರನು ನಂದಿಯೊಡನೆ ಹೀಗೆಂದನು. ॥೭-೮-೯೧೦॥

ನಂದೀಶನೇ, ಕತ್ತಿ, ತ್ರಿಶೂಲ ಇವುಗಳನ್ನು ಹಿಡಿದು, ನಿಂತಿರುವ ನಾಗ ಕುಂಡಲಗಳನ್ನೂ ಭಸ್ಮತ್ರಿಪುಂಡ್ರವನ್ನೂ ಧರಿಸಿದ ನನ್ನ ಗಣನಾಯಕರನ್ನು ಜಾಗ್ರತೆ ಬರಮಾಡು. ಮೃದಂಗ, ಶಂಖ, ತಮಟೆ, ನಗಾರಿ ಈ ರಣವಾದ್ಯಗಳು ಈಗಲೇ ಜಾಗ್ರತೆ ಭೋರ್ಗರೆಯುವಂತೆ ನೇಮಿಸು. ॥೧೧॥

ಹೀಗೆ ಚಂದ್ರಶೇಖರನ ಅಪ್ಪಣೆ ಪಡೆದು ನಂದೀಶ್ವರನು ಕೂಡಲೇ ತನ್ನ ಸಕಲ ಗಣಗಳಿಗೂ ಆಯುಧಗಳನ್ನು ಧರಿಸುವಂತೆಯೂ, ಛತ್ರಿಚಾಮರಾದಿಗಳಿಂದ ಶಂಕರನನ್ನು ಸೇವಿಸಲು ಸಿದ್ಧರಾಗುವಂತೆಯೂ ಅಜ್ಞಾಪಿಸಿದನು. ॥೧೨॥

ಕಾಲಾಗ್ನಿರುದ್ರನೂ, ವೀರಭದ್ರನೂ ಒಂದೊಂದುಲಕ್ಷ ಸೈನ್ಯದಿಂದಲೂ, ಚಂಡೀಶ್ವರನು ಐದುಲಕ್ಷ ಸೈನ್ಯದಿಂದಲೂ, ಭೃಂಗಿಯು ಏಳುಲಕ್ಷ, ನಂದೀಶ್ವರನು ಕೋಟಿಗಣಗಳಿಂದಲೂ ಕೂಡಿಬಂದರು. ಎಲ್ಲರೂ ಬಾಣ, ಬಿಲ್ಲು, ತ್ರಿಶೂಲ ಇವು

ನಂದೀಶ್ವರಃ ಕೋಟಿಗಣೈಸ್ತದಾ ಯಯೌ
ಬಾಣಾಸಿಬಾಣಾಸನಶೂಲಧಾರಿಭಿಃ ।
ತ್ರಿಪುಂಡ್ರಭಸ್ಮಾಭರಣೈರ್ಗಜೇಂದ್ರ
ಚರ್ಮಾಂಬರೈರ್ವ್ಯಾಘ್ರಮೃಗಾಜಿನಾಂಬರೇ ॥೧೪॥

ತರಕ್ಷುಋಕ್ಷಾಖುಮುಖೈರ್ಗಜಾನನೈಃ
ಸಿಂಹಾನನೈಶ್ಚಾರಭಭೇಕವಕ್ತ್ರೈಃ ।
ಮಯೂರಮಾರ್ಜಾರಹಯಾಸ್ಯವಾನರ
ಮೃಗಾಸ್ಯಕೈರ್ವಾಮನಕೈಸ್ತಥೋರ್ಧ್ವೈಃ ॥೧೫॥

ಜಟಾಧರೈರ್ಮುಂಡಿತಮುಂಡಷಂಡೈಃ
ಪಿಚಂಡಿಲೈಶ್ಚಾತಿಕೃಶೈಶ್ಚ ಘೋರೈಃ ।
ಮೃದಂಗಶಂಖಾನಕಮಡ್ಡುಡಿಂಡಿಮ
ಪ್ರವಾಹಕೈರ್ಘೋಷಕರೈಸ್ತದಾ ಯಯುಃ ॥೧೬॥

ತದಾ ಗಜಾಸ್ಯಸ್ಯ ಗಣೈಸ್ಸಮಾವೃತಂ
ಗಜಾಸ್ಯಕೈಃ ಪಾಶಸೃಣೀಕರಾಬ್ಜಕೈಃ ।
ಸ್ಕಾಂದೈರ್ಗಣೈಶ್ಚಾಪಿ ಚ ಶಕ್ತಿಧಾರಿಭಿ
ರ್ಯಯೌ ನಗಾರಿಃ ಸ್ವಗಣೈಸ್ತದಾವೃತಃ ॥೧೭॥

---

ಗಳನ್ನು ಹಿಡಿದು ಭಸ್ಮತ್ರಿಪುಂಡ್ರವನ್ನಿಟ್ಟು, ವ್ಯಾಘ್ರಾಜಿನಗಳನ್ನು ಹೊದ್ದು ಯುದ್ಧ ಸಿದ್ಧರಾಗಿ ಬಂದು ನೆರೆದರು. ॥೧೩-೧೪॥

ಹುಲಿ, ಕರಡಿ, ಇಲಿ, ಆನೆ, ಸಿಂಹ, ಶರಭ, ಕಪ್ಪೆ, ನವಿಲು, ಬೆಕ್ಕು, ಕುದುರೆ, ಕಪಿ, ಜಿಂಕೆ ಮೊದಲಾದ ಪ್ರಾಣಿಗಳ ಮುಖದಂತೆ ಮುಖಗಳುಳ್ಳ, ಚಿಕ್ಕ ದೊಡ್ಡ ಪ್ರಮಥಗಣವರ್ಗದವರೆಲ್ಲಾ ಯುದ್ಧಕ್ಕಾಗಿ ಬಂದು ನೆರೆದರು. ॥೧೫॥

ಜಟೆಯನ್ನು ಬಿಟ್ಟುಕೊಂಡಿರುವ, ಹಾಗೆಯೇ ತಲೆಯನ್ನು ಬೋಳಿಸಿ ಕೊಂಡಿರುವ, ದಪ್ಪಹೊಟ್ಟೆಯುಳ್ಳ ಮತ್ತು ಕೃಶದೇಹವುಳ್ಳ ಅನೇಕಪ್ರಮಥಗಣಗಳು ನಾನಾವಿಧವಾದ ವಾದ್ಯಗಳನ್ನು ಬಾರಿಸುತ್ತಾ ಮೃದಂಗ, ಡಿಂಡೀರ ಮೊದಲಾದ ವಾದ್ಯಗಳನ್ನು ಹಿಡಿದು ಧ್ವನಿಮಾಡುತ್ತಾ ಅಲ್ಲಿಗೆ ಬಂದು ನೆರೆದರು. ॥೧೬॥

ವಿಘ್ನೇಶ್ವರನ ಮತ್ತು ಕುಮಾರಸ್ವಾಮಿಯ ಸೈನಿಕರು, ಪಾಶ, ಅಂಕುಶ,

ಸ ಸಪ್ತಲಕ್ಷೈರ್ಗಜವಕ್ತ್ರವೃಂದೈ
ಸ್ತಥಾಷ್ಟಲಕ್ಷೈರಭಿತೋ ಯಯೌ ಹರಂ ॥೧೮॥

ಹಂಸೋತ್ಥಾಮಲಪಕ್ಷಚಾಮರಮರುತ್ಸಂವೀಜಿತಃ ಶಂಕರೋ
ರತ್ನಭ್ರಾಜಿತಪಾದುಕಾಯುತಪದೋ ದೇವಾಂತಿಕಂ ಪ್ರಾಪ ಹಿ ।
ಛತ್ರೈಶ್ಚಾಪಿ ಪತಾಕಕೈಃ ಶರಕರೈರ್ನಾನಾನದತ್ತೂರ್ಯಕೈ
ರುದ್ರಾಣೀಕರಮುಕ್ತಮೌಕ್ತಿಕಫಲೈರ್ಮೂರ್ಧ್ನ್ಯರ್ಚಿತಃ ಶಂಕರಃ ॥೧೯॥

ರತ್ನಭ್ರಾಜಿತಪಾತ್ರಮಧ್ಯಗಲಸತ್ಸೌವರ್ಣದೀಪಾವಲೀ
ದೇವ್ಯಾಲೀಕರಕಂಕಣಧ್ವನಿಯುತೈಸ್ಸಪ್ತಾರ್ಚಿನೀರಾಜಿತಃ ।
ಪಶ್ಯಂತೋ ನಗಕನ್ಯಕಾಬ್ಜವದನಂ ಸಂವೀಕ್ಷ್ಯ ಸಂಜೀವಿನೀಂ
ದಿವ್ಯಾಸಾರಮರಂದಸೌರಭಸನೋತ್ಕರ್ಷೋರುವರ್ಷೈರಪಿ ॥೨೦॥

---

ಕಮಲ, ಶಕ್ತಿ ಇವೇ ಮೊದಲಾದ ಆಯುಧಗಳನ್ನು ಹಿಡಿದು ಅಲ್ಲಿಗೆಬಂದರು. ಕುಮಾರಸ್ವಾಮಿಯು ಇವರೆಲ್ಲರಿಗೂ ನಾಯಕನಾಗಿ ನಿಂತನು. ॥೧೭॥

ಗಜಮುಖನು ಎಂಟುಲಕ್ಷ ಸೈನ್ಯದೊಡನೆಯೂ, ಷಣ್ಮುಖನು ಏಳುಲಕ್ಷ ಗಣಗಳೊಡನೆಯೂ ಶಂಕರನ ಸುತ್ತ ನೆರೆದರು. ಮಹಾದೇವನಾದರೋ ಹಂಸದ ಗರಿಗಳಿಂದ ನಿರ್ಮಿತವಾದ ಚಾಮರಗಳಿಂದ ಬೀಸಲ್ಪಡುತ್ತಾ ರತ್ನಮಯವಾದ ಪಾದುಕೆಗಳನ್ನು ಮೆಟ್ಟಿಕೊಂಡು, ಛತ್ರಿಚಾಮರಗಳಿಂದ ಸೇವಿತನಾಗಿ, ಪಾರ್ವತಿಯ ಕೈಗಳ ಮುತ್ತುಗಳಿಂದ ಪೂಜಿತವಾದ ಶಿರಸ್ಸುಳ್ಳವನಾಗಿ ದೇವತೆಗಳಿದ್ದ ಸ್ಥಳಕ್ಕೆ ಬಿಜಯಮಾಡಿದನು. ॥೧೮-೧೯॥

ರತ್ನಮಯವಾದ ತಟ್ಟೆಯ ಮಧ್ಯದಲ್ಲಿ ಸುವರ್ಣಮಯವಾದ ದೀಪಗಳಿಂದ ರಂಜಿಸುತ್ತಾ, ದೇವಿಯರು ತಮ್ಮ ಕೈಬಳೆಗಳ ಧ್ವನಿಯಿಂದ ಎತ್ತುವ ಆರತಿಯನ್ನು ಶಂಕರನು ಕಟಾಕ್ಷದಿಂದ ನೋಡುತ್ತಾ, ಒಂದುಕಡೆ ಪಾರ್ವತಿಯ ಮುಖವನ್ನು ಈಕ್ಷಿಸುತ್ತಾ, ದೇವತೆಗಳ ಕೈಗಳಿಂದ ಬೀಳುವ ಪುಷ್ಪಮಕರಂದದ ಅತಿಶಯವನ್ನು ಅನುಭವಿಸುತ್ತಾ ಮಹಾದೇವನು ಮುಂದುವರಿದನು. ॥೨೦॥

ನಂದೀಶಾನಪುರಪ್ರಸಾರಿತಮಹಾವೇತ್ರೋಗ್ರತೋತ್ಸಾರಿತೈ
ರ್ವಿಷ್ಣುಬ್ರಹ್ಮಸುರಾಸುರಾದಿಕಗಣೈಸ್ಸಂಪ್ರೋಕ್ತವಾಚಾಂಭರೈಃ ।
ಶಂಭೋ ಪಾಹಿ ಸುರಾಸುರಾನ್ ಪ್ರಮಥಪಾಧೀಶೋಕ್ತಿಸೂಕ್ತಿಪ್ರಭಾ
ಮಂದಾರಾನತಮೌಲಿಜಾಲಮಣಿಯುಕ್ಪಾದಪ್ರಭಾವಶ್ಶಿವಃ ॥೨೮॥

ತದಾ ಜಯೇಶ ವಿಶ್ವೇಶ ಪಾಹಿ ನಃ ಶರಣಾಗತಾನ್ ।
ತ್ರಿಪುರಾಸುರಸಂತ್ರಸ್ತಾನಸ್ಮಾನ್ ಪಾಹಿ ಮಹೇಶ್ವರ ॥೨೨॥

ಇತ್ಥಂ ಸ್ತುವಂತಿ ಸಂಹೃಷ್ಟಾ ದೇವಾಶ್ಚ ಮುನಯಸ್ತಥಾ ।
ಜಗುರ್ಗಂಧರ್ವಪತಯೋ ನನೃತುಶ್ಚ ವರಾಪ್ಸರಾಃ ॥೨೩॥

ಜಗೌ ಶಿವಪದಾನ್ಯಾನಿ ನಾರದಸ್ತುಂಬುರುಸ್ತಥಾ ।
ತದಾ ದೇವಾ ಮಹಾದೇವಂ ಪ್ರೋಚುಃ ಪ್ರಾಂಜಲಿಪಾಣಯಃ ॥೨೪॥

ಭಕ್ತಿನಮ್ರಾತ್ಮವದನಾ ವಿಕಿರಂತಿ ಸುಮೋತ್ಕರೈಃ ।
ತತ್ಕೌತುಕಂ ಮಹದ್ವೀಕ್ಷ್ಯ ಧೃತಬಾಣಕರಂ ಹರಂ ॥೨೫॥

---

ನಂದೀಶ್ವರನು ಚಿನ್ನದ ಬೆತ್ತವನ್ನು ಹಿಡಿದು ಮುಂದೆ ನಡೆಯುತ್ತಾ, ವಿಷ್ಣು, ಬ್ರಹ್ಮ, ದೇವೇಂದ್ರ ಮೊದಲಾದ ದೇವಶ್ರೇಷ್ಠರನ್ನೆಲ್ಲಾ ಹಿಂದಕ್ಕೆ ತಳ್ಳಿ ಪರಶಿವನಿಗೆ ದಾರಿಬಿಡಿಸುತ್ತಿದ್ದನು. ಆದರೂ ಆ ದೇವತೆಗಳು ಮುನ್ನುಗ್ಗಿ, ಶಂಭೋ, ಶಂಕರ, ಮಾಂ ಪಾಹಿ ಎಂದು ಕೂಗಿಕೊಳ್ಳುತ್ತಾ, ಮಣಿಮಯವಾದ ಪಾದುಕೆಗಳಿಂದ ಅಲಂಕೃತವಾದ ಪರಶಿವನ ಕಾಲುಗಳಮೇಲೆ ತಮ್ಮ ಶಿರಸ್ಸುಗಳನ್ನಿಟ್ಟು ವಂದಿಸುತ್ತಿದ್ದರು. ॥೨೧॥

ಅಲ್ಲಿ ನೆರೆದಿದ್ದ ದೇವತೆಗಳೆಲ್ಲರೂ, ಶಂಕರನೇ, ಜಯ, ಜಯ, ಶಂಭೋ, ಶರಣಾಗತರಾಗಿ ಬಂದಿರುವ ನಮಗೆ ತ್ರಿಪುರಾಸುರರ ಭಯವನ್ನು ಹೋಗಲಾಡಿಸು ಎಂದು ಮೊರೆಯಿಟ್ಟರು. ಮುನಿಗಳು ನಾನಾರೀತಿ ಹೊಗಳಿದರು. ಗಂಧರ್ವರು ಗಾನಮಾಡಿದರು. ಅಪ್ಸರರು ನರ್ತನಮಾಡಿದರು. ನಾರದರು, ತುಂಬುರರು ಶಿವಪರವಾದ ಕೀರ್ತನೆಗಳನ್ನು ಹಾಡಿದರು. ಇಷ್ಟಾದ ಮೇಲೆ ಎಲ್ಲ ದೇವತೆಗಳೂ ಬಾಣಗಳನ್ನು ಹಿಡಿದಿರುವ ಪರಶಿವನನ್ನು ಆಶ್ಚರ್ಯದಿಂದ ನೋಡುತ್ತಾ ಭಕ್ತಿನಮ್ರರಾಗಿ, ಪುಷ್ಪವೃಷ್ಟಿಯನ್ನು ಸುರಿಸುತ್ತಾ, ಈ ರೀತಿ ಸ್ತೋತ್ರಮಾಡಲಾರಂಭಿಸಿದರು.

॥ ದೇವಾ ಊಚುಃ ॥

ರಥಸ್ತೇ ಸಜ್ಜೋಽಯಂ ಭವತಿ ಭವತೇ ಮೋದನಿವಹೋ
ರಥಾಧೀಶಃ ಶ್ರುತ್ಯಾ ಭವಸಿ ಚ ಭವಾನೇಕರಥಿಕಃ।
ಭವತ್ತೋ ನ ಜ್ಯಾಯಾನ್ ಸುರಗಣಗಣೇಷೂತ್ತಮತನು
ರ್ನಿಷಂಗೀ ದ್ರಾಪಿಸ್ತ್ವಂ ಹರಿಶರಕರೋದಾರಚರಿತಃ। ॥೨೬॥

ಮಹೇಶಸ್ತ್ವಂ ಶಂಭೋ ಸಕಲನಿಗಮಾಂತ್ಯೈಕವಚಸಾ
ಪ್ರಭಾರಾಶಿಃ ಸಂವಿತ್ಸುರಗಣಶರಣ್ಯೋ ನಃ ಶರಣದ।
ವಿಧಿಸ್ತೇ ವೇದಾನಾಂ ಯಮನಕರಣೇ ಯಂತುರಧಿಕೋ
ಸುಧನ್ವಾ ಶಂಭುಸ್ತ್ವಂ ಭವಸಿ ನಿಖಿಲಾತ್ಮಾ ಜನಿಜುಷಾಂ ॥೨೭॥

ಬಾಹುಭ್ಯಾಂ ತವ ಧನ್ವನೇ ಶರಕರಾಸಾರೇಣ ತಾ ವೈ ಶ್ರುತಿ
ಸ್ತ್ವನ್ಮನ್ಯುಂ ಭಗವನ್ ವಿಮೋಚಯವರೇ(?)ದುಚ್ಚೈಃಪುರೇ ಗೋಪುರೇ।
ಅಘೋರಾಂ ದೈತ್ಯೇಷು ಪ್ರಕಟಯ ತನುಂ ದೇವ ನಿವಹೇ
ವಿಭೋ ಶಾಂತಾಂ ತಾಂ ವೈ ಕುರು ಸದಯಮಿಂದುಪ್ರಭ ವಿಭೋ ॥೨೮॥

---

ಪರಶಿವನು ಪ್ರಸನ್ನನಾಗಿ ಅವರೆಲ್ಲರನ್ನೂ ನೋಡುತ್ತ ನಿಂತಿದ್ದನು. ॥೨೨-೨೩-೨೪-೨೫॥

ಮಹಾದೇವನೇ, ನಿನ್ನ ಅಪ್ಪಣೆಯಂತೆ ಈ ರಥವು ಸಿದ್ಧವಾಗಿರುವುದು. ಮತ್ತು ನಿನಗೆ ಸಂತೋಷಪ್ರದವೆನಿಸಿರುವುದು. ಲೋಕದಲ್ಲಿ ಮುಖ್ಯ ರಥಿಕನೆಂದರೆ ನೀನೇ. ನಿನಗಿಂತ ಶ್ರೇಷ್ಠರಾದವರು ಯಾರೂ ಇಲ್ಲ. ಮೇರುಪರ್ವತವನ್ನೇ ಧನುಸ್ಸನ್ನಾಗಿಯೂ ವಿಷ್ಣುವನ್ನೇ ಬಾಣವನ್ನಾಗಿಯೂ ಉಳ್ಳವನು ನೀನೊಬ್ಬನಲ್ಲದೆ ಲೋಕದಲ್ಲಿ ಮತ್ತಾರಿರುವರು ? ॥೨೬॥

ಮಹೇಶ್ವರನೇ, ನೀನು ಸಕಲ ವೇದವೇದಾಂತಗಳಿಂದಲೂ –ಸ್ತುತಿಸಲ್ಪಟ್ಟಿರುವೆ. ಜ್ಞಾನರಾಶಿಯಾಗಿ ಸುರವರರಿಗೆ ರಕ್ಷಕನೆನಿಸಿರುವೆ. ವೇದದಲ್ಲಿ ನಿಷ್ಣಾತನಾದ ಬ್ರಹ್ಮದೇವನೇ ನಿನಗೆ ವರಸಾರಥಿಯಾಗಿ ಬಂದಿರುವನು. ನೀನು ಮಹಾಧಾನುಷ್ಕನೆನಿಸಿರುವೆ. ಲೋಕದಲ್ಲಿ ಸಕಲ ಜನನಮರಣಗಳಿಗೂ ನೀನೇ ಮೂಲಕಾರಣನು. ॥೨೭॥

ಧನುರ್ಧಾರಿಯಾದ ನಿನ್ನ ಎರಡು ಭುಜಗಳಿಗೆ ಹೆದರಿಯೇ ಸಕಲ ವಸ್ತುಗಳೂ, ವೇದಗಳೂ ನಿನಗೆ ಅಧೀನವಾಗಿರುವುವು. ಮಹಾದೇವನೇ, ನಮ್ಮ

॥ ಸ್ಕಂದ ಉವಾಚ ॥

ಇತ್ಥಂ ಗೀರ್ವಾಣವಾಣೀಂ ಶ್ರವಣವರ ಸೀಮಾನುಸರಣೀಂ
ಮಹಾದೇವಃ ಶ್ರುತ್ವಾ ತರಣಿವರಚಕ್ರಂ ಸಮರುಹತ್ (?) ।
ಕ್ಷಣಂ ಕ್ಷೋಣೌ ಕ್ಷೀಣಂ ಪದಕಮಲಭಾರಾನತರಥಂ
ವೃಷೇನೋದ್ವಾಹ್ಯಂ ತತ್ಪ್ರಕೃತಿಪರಮಾತನ್ಯತ ವಿಭುಃ ॥೨೯॥

ದೇವಃ ಕ್ಷಮಾಸ್ಯಂದನ ಚಕ್ರಸೂರ್ಯ
ಸೋಮಾನಿಲಾಗ್ನಿ ಹರಿಬಾಣಸುಧನ್ವಕೋದ್ರಿಃ ।
ಮೌರ್ವೀ ಕೃತಾಹಿವರಶೇಷವಿಶೇಷಭೂಷೋ
ಯೋಷಾ ಕೃತಾರ್ಧತನುರಾರುರುಹತ್ಕ್ಷಣೇನ ॥೩೦॥

ಮಹಾಮ್ನಾಯಗಣಾ ಸುಬೋಧಿತವಿಧಿಸ್ರಾಚುರ್ಯರಶ್ಮೀ ಮುಖಾ
ಧಾವಂತಿ ಶ್ರುತಮೀಶ್ವರಸ್ಯ ಕರುಣಾಸಾರೈಕದೃಷ್ಟ್ಯಾವೃತೇ ।

---

ವಿಷಯದಲ್ಲಿ ನಿನ್ನ ಕೋಪವನ್ನು ದೂರೀಕರಿಸು. ಮಹೇಶ್ವರನೇ, ಭಯಂಕರವಾದ ನಿನ್ನ ದೇಹವನ್ನು ಶತ್ರುಗಳಿಗೆ ತೋರ್ಪಡಿಸಿ ಅವರನ್ನು ಧ್ವಂಸಮಾಡು. ಶಾಂತ ಮಯವಾದ ದೇಹವನ್ನು ದೇವತೆಗಳಿಂದ ನಮಗೆ ಕರುಣಿಸಿ ನಮ್ಮನ್ನುದ್ಧರಿಸು. ॥೨೮॥

ಕಿವಿಗಳಿಗೆ ಇಂಪಾಗಿಸುವ ಆ ದೇವಸ್ತುತಿಯನ್ನು ಮಹಾದೇವನು ಕೇಳುತ್ತಾ, ಸೂರ್ಯಮಂಡಲವೇ ಚಕ್ರವಾಗಿಉಳ್ಳ ಆ ದಿವ್ಯರಥವನ್ನು ಹತ್ತಿದನು. ವೃಷಭರಾಜನಿಂದ ವಹಿಸಲ್ಪಡುವ ಪರಶಿವನ ಮಹಾಪಾದಗಳನ್ನು ಆ ರಥವು ಹೊರಲಾರದೆ, ಕ್ಷಣಕಾಲ ಭೂಮಿಯಲ್ಲಿ ಹೂತುಹೋಯಿತು. ಅದನ್ನು ತಿಳಿದು ಮಹಾದೇವನು ರಥವು ಸ್ವಭಾವಸ್ಥಿತಿಗೆ ಬರುವಂತೆ ತಾನೇ ಅನುಗ್ರಹಿಸಿದನು. ॥೨೯॥

ಭೂಮಿಯನ್ನೇ ರಥವನ್ನಾಗಿಯೂ, ಸೂರ್ಯಚಂದ್ರಾಗ್ನಿಗಳನ್ನೇ ಚಕ್ರವನ್ನಾಗಿಯೂ, ಹರಿಯನ್ನು ಬಾಣವನ್ನಾಗಿಯೂ, ಮೇರುವನ್ನು ಧನುಸ್ಸನ್ನಾಗಿಯೂ, ಆದಿಶೇಷನನ್ನು ಮೌರ್ವಿಯನ್ನಾಗಿಯೂ ಮಾಡಿಕೊಂಡು ಅರ್ಧನಾರೀಶ್ವರನೆನಿಸಿದ ಮಹಾದೇವನು ಆ ದಿವ್ಯರಥವನ್ನೇರಿದನು. ॥೩೦॥

ನಾಲ್ಕು ವೇದಗಳೆಂಬ ಕುದುರೆಗಳು ಧರ್ಮರೂಪಗಳಾದ ಕಡಿವಾಣದಿಂದ ಕಟ್ಟಲ್ಪಟ್ಟು ಬ್ರಹ್ಮನ ಪ್ರೇರಣೆಯಂತೆ ಓಡುತ್ತಿವೆ. ರಥದ ಧ್ವಜವು ಕಲಶಗಳ

ಕುಂತದ್ಯೋತಿಪತಾಕಿಕಾ ರಥಗತಾ ಭ್ರಾಂತ್ಯೇವ ತಚ್ಚಾಲನೈ
ರ್ಜನ್ಯಂ ಧನ್ಯತಮಂ ತದೇವಮಸಕೃದ್ದೃಷ್ಟ್ವಂ ಸಹಸ್ರಾಕ್ಷಕಾಃ ॥೩೧॥

ಗಣವೃಂದಾರಮುಖಾಖುವಾಹಯುಕ್ತಾ
ವರಶೂರಾರಿಗಣಾಶ್ಚ ಕೇಕಿವಾಹಃ ।
ಪ್ರಸರನ್ ಪಾರ್ಶ್ವಗತ ಏವ ತಂ ರಥಸ್ಥಂ
ಭಗವಂತಂ ಪ್ರಯಯುಸ್ತತೋ ಸುರಾಃ ॥೩೨॥

ದುಂದುಭ್ಯಾಘಾತಘೋಷೋ ಜಿತವರಜಲಧಿಧ್ವಾನಹರ್ಷೋರುತರ್ಷೋ
ವರ್ಷಂ ತತ್ಸುಮಸಂಭವಂ ದಿವಿ ಪುನಃ ನಾನಾಯುಧಾನಾಂ ಸ್ವನೈಃ ।
ಪಾಹೀಶಾನ ದಯಾನಿಧಾನ ಭಗವನ್ ಯಾಹಿ ದ್ರುತಂ ತ್ರೈಪುರಂ
ವೀರ್ಯೋದ್ರಿಕ್ತಮದಂ ಮುದೇ ಸುರಗಣೇ ಶಾಂತ್ಯೈ ಜಹೀಶೇತ್ಯಪಿ ॥೩೩॥

ಆಯೋಧನಂ ತ್ರಿಪುರದಾರಣಕಾಲಫಾಲ
ಲೀಲಾನಲೋದ್ಧತ ವಿಶಾಲಿತ ಹಸ್ತಶೂಲಃ ।

---

ಹೊಳಪಿನಿಂದ ಥಳಥಳಗುಟ್ಟುತ್ತಿದೆ. ರಥದ ಚಲನೆಯಿಂದ ಯುದ್ಧರಂಗವೇ ಧನ್ಯವೆನಿಸುತ್ತಿದೆ. ಸಾವಿರ ಕಣ್ಣುಗಳಿಂದಲೂ ಈ ಪರಶಿವನ ಪ್ರಯಾಣವೈಭವವನ್ನು ನೋಡಿ ದಣಿಯಲು ಸಾಧ್ಯವಾಗುತ್ತಿರಲಿಲ್ಲ. ॥೩೧॥

ಪರಶಿವನ ಅಕ್ಕಪಕ್ಕಗಳಲ್ಲಿ ಮೂಷಕವಾಹನನಾದ ಗಣಪತಿಯೂ, ನವಿಲಿನ ಮೇಲೆ ಕುಳಿತಿರುವ ಕುಮಾರಸ್ವಾಮಿಯೂ, ಬಲಿಷ್ಠವಾದ ಪ್ರಮಥಗಣಗಳೊಡಗೂಡಿ ರಥಸ್ಥನಾದ ಪರಶಿವನ ಆಜ್ಞೆಯನ್ನು ಎದುರುನೋಡುತ್ತಾ ಮುಂದುವರಿಯುತ್ತಿದ್ದರು. ॥೩೨॥

ದೇವದುಂದುಭಿಗಳು ಸಮುದ್ರಗರ್ಜನೆಯನ್ನು ಮೀರಿಸಿ ಧ್ವನಿಗೈದವು. ಕುಸುಮವೃಷ್ಟಿಯು ಗಗನದಿಂದ ಅತಿಶಯವಾಗಿ ಬಿದ್ದಿತು. ನಾನಾ ಆಯುಧಗಳ ಧ್ವನಿಯು ಎಲ್ಲೆಲ್ಲಿಯೂ ಪ್ರಸರಿಸಿತು. ದೇವತೆಗಳೆಲ್ಲರೂ ಜಯಕಾರಮಾಡುತ್ತಾ, ದಯಾನಿಧಿಯೇ, ಭಕ್ತವತ್ಸಲನೇ, ನಮ್ಮನ್ನು ಕಾಪಾಡು., ತ್ರಿಪುರಾಸುರರನ್ನು ನಾಶಗೊಳಿಸು. ನಮಗೆ ಶಾಂತಿಯನ್ನು ಕೊಡು. ಎಂದು ಪ್ರಾರ್ಥಿಸುತ್ತಿದ್ದರು. ॥೩೩॥

ತ್ರಿಪುರಾಸುರರನ್ನು ನಾಶಗೈದು, ತನ್ನ ಫಾಲಾಗ್ನಿಯಿಂದಲೂ, ಕೈಯ್ಯಲ್ಲಿರುವ ತ್ರಿಶೂಲಾಯುಧದಿಂದಲೂ, ಇತರ ದುಷ್ಟರನ್ನೆಲ್ಲಾ ಧ್ವಂಸಮಾಡುವ ಉದ್ದೇಶದಿಂದ,

ದಾನಾಕುಲಾಕುಲಗಣೌಘಮುಖೋತ್ಥವಾದ್ಯ
ವಿಧ್ವಸ್ತಶೈಲವಿವರೋಭಿಯಯೌ ವಿಜೇತುಂ ॥೩೪॥

ವರ್ಷಾಣಾಂ ಚ ಸಹಸ್ರಕಂ ಗಿರಿಸುತಾಜಾನೀ ರಥಸ್ಥೋ ಭವನ್
ಧುನ್ವನ್ ಮೇರುಶರಾಸನಂ ಹರಿಶರೋಭಿರ್ವ್ಯಜ್ಯಸಜ್ಜಂ ಕರೋತ್ ।
ಉನ್ಮೀಲ್ಯಾಕ್ಷಿಯುಗೋರುಕೋಣಸಲಿಲಾಸಾರ್ರೈಣಕೋಣವ್ರಜನ್ (?)
ಪಾತುಂ ಸ್ವಂ ಕರಶೇಖರೇಣ ಕಲಯನ್ ಕಾಲಂ ನಿನಾಯೇಶ್ವರಃ ॥೩೫॥

ತತ್ರ ಶ್ರೀ ಪರಮೇಶ್ವರಸ್ಯ ನಯನಾಸಾರಪ್ರವಾಹೋದ್ಭವಾಃ
ತೇ ವೃಕ್ಷಾಃ ಪ್ರಭವಂತಿ ಲೋಕವಿಹಿತಾ ರುದ್ರಾಕ್ಷವೃಕ್ಷಾ ಇತಿ ।
ದ್ವಾತ್ರಿಂಶತ್ಕುಲನಾಯಕಾ ಪ್ರಕಥಿತಾಃ ಗೌಡೋದ್ಭವಾನ್ಯೋದ್ಭವಾ
ತೇ ಫಾಲಾನಲ ಲೋಚನೋತ್ತಮಭವಾಃ ಕೈಲಾಸಮೌಲಿಸ್ಥಿತಾಃ ॥೩೬॥

ತತ್ರಾಂತರೇ ತ್ರಿಪುರವೈರಿಪುರಂ ಸಮೀಲ
ದುನ್ಮೀಲ್ಯಲೋಲ ನಯನಾಗ್ನಿ ಕಣಾವಧೂತಂ ।

---

ಕಾಡುಕಿಚ್ಚಿನಂತೆ ವ್ಯಾಪಿಸುವ,ಗಣಗಳ ವಾದ್ಯಧ್ವನಿಯಿಂದ ಬೆಟ್ಟಗಳ ವಿವರಗಳನ್ನೆಲ್ಲಾ ಭೇದಿಸುತ್ತಾ ಪರಶಿವನು ಮುಂದುವರಿದನು. ॥೩೪॥

ಹೀಗೆ ಪಾರ್ವತೀಪತಿಯಾದ ಮಹಾದೇವನು, ಮೇರುಧನುಸ್ಸನ್ನೂ, ಹರಿ ರೂಪವಾದ ಬಾಣವನ್ನೂ ಹಿಡಿದು ಆಗಾಗಧ್ವನಿಗೈಸುತ್ತಾ, ತನ್ನ ಎರಡುಕಣ್ಣು ಗಳನ್ನೂ ತೆರೆದು, ಸೂರ್ಯಚಂದ್ರರ ಕಾಂತಿಗಳಿಂದ ಲೋಕವನ್ನು ರಕ್ಷಿಸುತ್ತಾ, ತನ್ನ ಕೈ ಮತ್ತು ಶಿರಸ್ಸು ಇವುಗಳಿಂದ ಪ್ರಪಂಚವನ್ನು ರಕ್ಷಿಸುವವನಾಗಿ ಸಹಸ್ರವರ್ಷ ಪರ್ಯಂತ ಸುತ್ತಾಡಿದನು. ॥೩೫॥

ಆದೇಸಮಯದಲ್ಲಿ ಪರಶಿವನ ಕರುಣಾಪೂರಿತವಾದ ದೃಷ್ಟಿಸಾರದಿಂದ ರುದ್ರಾಕ್ಷಗಳೆಂಬ ಹೆಸರಿನಿಂದ ಮರಗಳು ಅಲ್ಲಲ್ಲಿ ಬೆಳೆದುವು. ಪರಶಿವನಫಾಲಾನಲ ದಿಂದ ಹುಟ್ಟಿದ ಆವೃಕ್ಷಗಳು ಕೈಲಾಸಶಿಖರದಲ್ಲಿದ್ದಂತೆಯೇ, ಗೌಡವೇಮೊದಲಾದ ಮೂವತ್ತೆರಡು ದೇಶಗಳಲ್ಲಿ ಕುಲನಾಯಕರಂತೆ ಮೂವತ್ತೆರಡು ವೃಕ್ಷಗಳಾಗಿ ಭೂಲೋಕದಲ್ಲಿಯೂ ಅಭಿವೃದ್ಧಿಹೊಂದಿದುವು. ರುದ್ರಾಕ್ಷಿಯಮರಗಳ ಉತ್ಪತ್ತಿಗೂ, ಅವುಗಳಿಗೆ ಆ ಹೆಸರು ಬರುವುದಕ್ಕೂ ಇದೇ ಕಾರಣ. ॥೩೬॥

ಹೀಗೆ ಮುಂದುವರಿಯುತ್ತಿರುವಾಗ ಪರಶಿವನ ಚಂಚಲವಾದ ನೇತ್ರಾಗ್ನಿಗೆ

ಚಕ್ರೇ ಶಿವೋ ಗಿರಿಜಯಾ ರಥಪರ್ಯಸಂಸ್ಥಃ
ಸ್ವಸ್ಥೈಃ ಸುರಾದಿಗಣಪೇನ ಮುಮೋಚ ಬಾಣಂ ॥೩೭॥

ತೇ ದೇವಾ ಶಶಿಶೇಖರಂ ಪುರವಧೋದಾರಂ ರಥಸ್ಥಂ ತದಾ
ಸ್ವಸ್ಥಾ ಏವ ನಮಂತಿ ಭಾವಪರಮಾ ಸ್ವಸ್ಥಾ ತಥಾನ್ಯೇ ಸುಮ್ನೈಃ ।
ವೃಷ್ಟಿಂ ತೇಽಪಿ ವಿತೇನಿರೇ ಮುನಿವರಾ ಜೇಪುಶ್ಚ ರುದ್ರಂ ತದಾ
ಪ್ರಾವಾದ್ಯಂತ ವರೋರುಬಾಹ್ಯಕಲನೈರ್ನೃತ್ತೈಶ್ಚ ದೇವಸ್ತ್ರಿಯಃ ॥೩೮॥

ಗಂಧರ್ವಾಃ ಪ್ರಜಗುಃ ಕಲಂ ಲಯಯುತಂ ತಾಲಾಪದಾಸಕ್ರಮಂ ।
ಶಂಭೋಸ್ತಸ್ಯ ಪರಾಕ್ರಮಂ ತ್ರಿಪುರಭಿದ್ದೇವೈಸ್ಸ್ತುತೋ ಶಂಕರಃ ॥೩೯॥

॥ ದೇವಾ ಊಚುಃ ॥

ಶಂಭೋ ಶಂಕರ ದೇವ ಕಿಂಕರ ಮಹಾಕ್ಷೋಣೀರಥಾಧ್ಯಕ್ಷ ತೇ
ಲೋಕೇ ನ ತ್ರಿದಿವದ್ವಿಷೋಪಮಿಷತಾಂ ಭಸ್ಮೀಕೃತಾಸ್ತೇ ಯತಃ ।

---

ತ್ರಿಪುರಾಸುರರ ನಗರವು ಗೋಚರವಾಗಲಾರಂಭಿಸಿತು. ಅದರಿಂದಲೇ ಆಗ ಅದು ಪವಿತ್ರವೂ ಎನಿಸಿತು. ಆದರೆ ಅನಾಥರಕ್ಷಕನಾದ ಶಂಕರನು ದೇವಿಯೊಡಗೂಡಿ, ಕೋಪದಿಂದ ಅದರಮೇಲೆ ಬಾಣಪ್ರಯೋಗಮಾಡಲುಪಕ್ರಮಿಸಿದನು. ॥೩೭॥

ಹಾಗೆ ರಥಮಧ್ಯದಲ್ಲಿ ಕುಳಿತು ತ್ರಿಪುರನಾಶಕ್ಕೆ ತೊಡಗಿದ ಪರಶಿವನನ್ನು ನೋಡುತ್ತಲೇ ಸಕಲ ದೇವತೆಗಳೂ ಶಾಂತಮನಸ್ಕರಾಗಿ ಸ್ವರ್ಗದಲ್ಲಿ ನಿಂತು ಪರಶಿವನ ಮೇಲೆ ಅವಿಚ್ಛಿನ್ನವಾಗಿ ಪುಷ್ಪವೃಷ್ಟಿಯನ್ನು ಸುರಿಸಿದರು. ಅಪ್ಸರಸ್ತ್ರೀಯರು ಸಂತೋಷದಿಂದ ನರ್ತಿಸಿದರು. ದೇವವಾದ್ಯಗಳು ಮೊಳಗಿದುವು. ಮುನಿಗಳು ಶ್ರೀರುದ್ರಮಂತ್ರವನ್ನು ಜಪಿಸತೊಡಗಿದರು. ಹೀಗೆ ಎಲ್ಲೆಲ್ಲೂ ದೇವತೆಗಳ ಸಂಭ್ರಮ ಉಕ್ಕೇರಿತು. ॥೩೮॥

ಗಂಧರ್ವರು ತಾಳ, ಲಯಬದ್ಧವಾಗಿ ಪರಶಿವನ ಪರಾಕ್ರಮವನ್ನು ವರ್ಣಿಸುವ ಕೀರ್ತನೆಗಳನ್ನು ಹಾಡತೊಡಗಿದರು. ಆಗ ಸಮಸ್ತ ದೇವತೆಗಳೂ ಮತ್ತೆ ಪರಮೇಶ್ವರನನ್ನು ಹೀಗೆ ಸ್ತುತಿಸಲಾರಂಭಿಸಿದರು. ॥೩೯॥

“ಮಹಾದೇವನೇ, ಸುಖಕರನೇ, ನಿನ್ನ ನೇತ್ರಾಗ್ನಿಯಿಂದಲೇ ಈ ಶತ್ರುಸಮೂಹವೆಲ್ಲ ಕ್ಷಣಕಾಲದಲ್ಲಿ ನಾಶವಾಯಿತು. ಭೂಮಿಯನ್ನೇ ರಥವನ್ನಾಗಿ ಮಾಡಿಕೊಂಡ

ವಾತಾ ವಾಂತ್ಯಪಿ ಭಾಸ್ಕರಾದಿ ಗ್ರಹಪಾ ದ್ಯೋತಂತಿ ಖೇ ಕೇವಲಾ
ಭಾಭಾಂತಿ ದ್ಯುತಿದೀಪ್ತಿಋಕ್ಷಸಹಿತಃ ಸೋಮೋ ಧುನೀತೇ ತಮಃ ॥೪೦॥

ಶಾಂತಶ್ಚೋಗ್ರಶಿಖೋ ಶಿಖೀ ವಿಜಯತೇ ಲೋಕೇಷು ತೇ ಸುಪ್ರಭೋ
ಕಸ್ತೇ ವೇದಗುಣಾಗುಣಂ ಕಲಯತಾಂ ಸ್ಯಾದಷ್ಟಮೂರ್ತಿರ್ಭವಾನ್ ।
ವೇದಾಸ್ತೇ ಮುನಯೋಪಿ ಜೇಪುರಮರಾ ನತ್ವಾಭಿಯಾತಾಃ ಶಿವಂ
ಸ್ವಾನಿ ಸ್ಥಾನವರಾಣಿ ದೀಪ್ತಿಪರಮಾ ವಿಷ್ಣ್ವಾದಯೋಪ್ಯಬ್ಜಜಾಃ ॥೪೧॥

ಕೈಲಾಸಂ ನಿಲಯಂ ಯಯೌ ಗಿರಿಜಯಾ ದೇವಃ ಪಶೂನಾಂಪತಿ
ರ್ನಂದ್ಯಾದ್ಯೈರ್ಗಣಪುಂಗವೈರಗಣಿತೈ ಸ್ತೂರ್ಯೌಘಕೋಲಾಹಲೈಃ ॥೪೨॥

ಏವಂ ತೇ ತ್ರಿಪುರೋರು ಗೋಪುರ ಮಹಾಸಂದಾರಿಣೀಂ ತೇ ಕಥಾಂ
ಪಾಪಧ್ವಾಂತನಿವಾರಣೈಕತರಣೀಂ ಶ್ರುತ್ವಾ ಭವೇಚ್ಛಂಕರಃ ।

---

ಮಹಾಮಹಿಮನೇ, ದೇವತೆಗಳ ಶತ್ರುಗಳೆಲ್ಲಾ ಈಗ ನಿರ್ಮೂಲವಾಗಿ ಹೋದರು. ಇನ್ನು ವಾಯುವು ನಿರ್ಭಯವಾಗಿ ಬೀಸುವನು. ಸೂರ್ಯಾದಿ ಗ್ರಹಗಳೂ ಚಂದ್ರ ನಕ್ಷತ್ರಮಂಡಲವೂ ತಮ್ಮ ಅತಿಶಯವಾದ ಕಾಂತಿಯನ್ನು ಬೀರುತ್ತಾ ಜಗತ್ತಿನ ಕತ್ತಲೆಯನ್ನು ಹೋಗಲಾಡಿಸಿ, ತಮ್ಮ ತೇಜಸ್ಸನ್ನು ಹೊರಪಡಿಸುವುವು. ॥೪೦॥

ಅಗ್ನಿಯು ಶಾಂತನಾಗುವನು, ಮಹಾದೇವನೇ, ಅಷ್ಟಮೂರ್ತಿಯೆನಿಸಿದ ನಿನ್ನ ಗುಣಾವಗುಣಗಳನ್ನು ಪೂರ್ತಿಯಾಗಿ ತಿಳಿಯುವ ಧೀರನಾರಿರುವನು ? ವೇದಗಳೂ, ಮುನಿಗಳೂ ನಿನ್ನ ಮಂತ್ರವನ್ನೇ ಸದಾ ಜಪಿಸುತ್ತಲಿರುವರು. ಬ್ರಹ್ಮ, ವಿಷ್ಣ್ವಾದಿ ದೇವತೆಗಳು ಈಗ ಶಾಂತರಾಗಿ, ಭಯವಿಲ್ಲದೆ ತಮ್ಮ ತಮ್ಮ ಸ್ಥಾನಗಳಿಗೆ ಸಂತೋಷದಿಂದ ತೆರಳುತ್ತಲಿರುವರು." ॥೪೧॥

ಹೀಗೆ ಮಹಾದೇವನು ದೇವತೆಗಳಿಂದ ಸ್ತುತನಾಗಿ, ನಂದೀಶನೇ ಮೊದಲಾದ ಗಣದೇವತೆಗಳೊಡಗೂಡಿ ಪಾರ್ವತೀಸಮೇತ ಕೈಲಾಸಗಿರಿಗೆ ಪ್ರಯಾಣಮಾಡಿದನು. ತುತ್ತೂರಿಯೇ ಮೊದಲಾದ ವಾದ್ಯಗಳು ಆಗ ಜಯಜಯಕಾರ ಮಾಡುತ್ತಾ ಭೋರ್ಗರೆದುವು. ॥೪೨॥

ಹೀಗೆಂದು ಕುಮಾರಸ್ವಾಮಿಯು ಜೈಗೀಷವ್ಯಮಹರ್ಷಿಗೆ ತ್ರಿಪುರದಹನದ ಕಥೆಯನ್ನು ಮುಗಿಸುತ್ತಾ " ಜೈಗೀಷವ್ಯನೇ, ಪಾಪನಾಶಕವೂ, ಶಿವಪ್ರಿಯಕರವೂ, ಭಕ್ತರಿಗೆ ಮುಕ್ತಿಪ್ರದವೂ, ಆದ ಈ ತ್ರಿಪುರದಹನದ ಕಥೆಯನ್ನು ನಿನಗೆ ತಿಳಿಸಿದ

ಶರ್ವಸ್ಯ ಪ್ರಿಯಕಾರಿಣೀಮಥ ಮುನೇ ಮುಕ್ತ್ಯೈಸದಾ ಮುಕ್ತಿದಾಂ
ಸಿದ್ಧಾಂತೇ ಸರಣೀಂ ದದಾನಿ ವಿಧೃತಾ ಭಕ್ತ್ಯಾ ಕಿಮನ್ಯದ್ಬ್ರುವೇ ॥೪೩॥

ಇತಿ ಶ್ರೀ ಶಿವರಹಸ್ಯೇ ಈಶ್ವರಾಖ್ಯೇ ದಶಮಾಂಶೇ ಪೂರ್ವಾರ್ಧೇ
ತ್ರಿಪುರಾಸುರಸಂಹಾರಕಥಾವರ್ಣನಂ ನಾಮ
ವಿಂಶೋಽಧ್ಯಾಯಃ

---

ಮೇಲೆ ಮತ್ತಾವ ವಿಷಯಕ್ಕೆ ತಾನೆ ನಿನಗೆ ಕೊರತೆಯಿದ್ದೀತು? ಇದು ಅಷ್ಟು ಪವಿತ್ರವಾದ ಕಥಾಸರಣಿ. ಇದನ್ನು ಕೇಳಿದ ನೀನೇ ಧನ್ಯ ನಿನಗೆ; ಮತ್ತೇನನ್ನು ಹೇಳಲಿ?" ಎಂದು ಹೊಗಳುತ್ತಾ ವಿಶ್ರಾಂತಿ ಪಡೆದನೆಂದು ಸೂತಮಹರ್ಷಿಗಳು ವಾಜಶ್ರವಸಾದಿಗಳಿಗೆ ಶಿವಮಹಿಮೆಯನ್ನು ತಿಳಿಸಿದರು. ॥೪೩॥

ಇಲ್ಲಿಗೆ ಶ್ರೀ ಶಿವರಹಸ್ಯದ ದಶಮಾಂಶ ಪೂರ್ವಾರ್ಧದಲ್ಲಿ ತ್ರಿಪುರಾಸುರದಹನ ವಿಷಯವನ್ನೊಳಗೊಂಡ ಇಪ್ಪತ್ತನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ಶ್ರೀ ಶಿವಾಯ ನಮಃ ॥

# ಅಥ ಶ್ರೀಶಿವರಹಸ್ಯೇ

## ಈಶಾನಾಖ್ಯೇ

## ದಶಮಾಂಶಪೂರ್ವಾರ್ಧೇ

## ಏಕವಿಂಶೋಽಧ್ಯಾಯಃ

॥ ಶ್ರೀ ದೇವ್ಯುವಾಚ ॥

ಕಥಂ ಜಾತಾ ಮಹಾದೇವ ಭೂಮೌ ರುದ್ರಾಕ್ಷವೃಕ್ಷಕಾಃ ।
ಕಥಂ ಜಾತಾ ಮಹಾದೇವ ತನ್ಮೇ ವಿಸ್ತರತೋ ವದ ॥೧॥

ತ್ವದಕ್ಷಜಾಶ್ರುಸಂಜಾತಾ ತೇ ವೈ ರುದ್ರಾಕ್ಷವೃಕ್ಷಕಾಃ ।
ದ್ವಾತ್ರಿಂಶತ್ಪ್ರಥಿತಾ ದೇವ ಕಥಯೈತನ್ಮಹಾಮತೇ ॥೨॥

॥ ಸ್ಕಂದ ಉವಾಚ ॥

ಇತಿ ದೇವ್ಯಾ ವಚಶ್ಶ್ರುತ್ವಾ ಪ್ರಾಹ ರುದ್ರಾಕ್ಷಸಂಭವಂ ।
ಜಗತಾಂ ಪಾಪತಾಪಾದಿ ತನ್ನಿವಾರಣಕಾರಣಂ ॥೩॥

---

## ಇಪ್ಪತ್ತೊಂದನೆಯ ಅಧ್ಯಾಯ

ತ್ರಿಪುರದಹನ ವೃತ್ತಾಂತವನ್ನು ಕೇಳಿದ ಬಳಿಕ ಪಾರ್ವತಿಯು ಪರಶಿವನನ್ನು ಕುರಿತು “ ಸ್ವಾಮಿ ಮಹಾದೇವನೆ, ನಿನ್ನ ಕಣ್ಣೀರಿನಿಂದ ಮೂವತ್ತೆರಡು ರುದ್ರಾಕ್ಷಿಯ ಮರಗಳು ಭೂಲೋಕದಲ್ಲಿ ಹುಟ್ಟಿದ ಕ್ರಮವನ್ನು ವಿಸ್ತಾರವಾಗಿ ನನಗೆ ತಿಳಿಸಬೇಕು ” ಎಂದು ಪ್ರಾರ್ಥಿಸಿದಳು. ॥೧-೨॥

ಜೈಗೀಷವ್ಯಮುನಿಯೇ, ಹಾಗೆ ಪ್ರಾರ್ಥಿಸಿದ ದೇವಿಯು ಮಾತುಗಳನ್ನು ಕೇಳಿದ ಶಂಕರನು, ಜಗತ್ತಿನಲ್ಲಿ ಜನಿಸಿದವರ ಪಾಪರಾಶಿಯನ್ನೆಲ್ಲಾ ನಿವಾರಿಸುವ ರುದ್ರಾಕ್ಷೋತ್ಪತ್ತಿಯ ವಿಷಯವನ್ನು ಈ ರೀತಿ ಉಪದೇಶಿಸಿದನು:—ದೇವಿಯೇ ಕೇಳು. ಈ ರುದ್ರಾಕ್ಷಿಮರದ ಉತ್ಪತ್ತಿಯ ಕಥೆಯು ಬಹು ಪವಿತ್ರವಾದುದು. ಸರ್ವ

॥ ಈಶ್ವರ ಉವಾಚ ॥

ಶೃಣು ಪದ್ಮಪಲಾಶಾಕ್ಷಿ ರುದ್ರಾಕ್ಷಪ್ರಭವಂ ಶಿವೇ ।
ಸರ್ವಪಾಪಕ್ಷಯಕರಂ ತ್ರ್ಯಕ್ಷಪ್ರೀತಿಕರಂ ಸದಾ ॥೪॥

ಅಕ್ಷಯ್ಯಫಲದಂ ಸಾಕ್ಷಾತ್ಪಾಪಧ್ವಾಂಕ್ಷನಿವಾರಕಂ ।
ಮದುನ್ಮೇಷನಿಮೇಷಾದಿ ನೇತ್ರಜಾಶ್ರುಸಮುದ್ಭವಂ ॥೫॥

ರುದ್ರಾಕ್ಷವೃಕ್ಷಾಸ್ತೇ ಜಾತಾಃ ಭೂಮೌ ದೇವ್ಯೈಸ್ತದಾಶಿವೇ ।
ಕೈಲಾಸಮೌಲಿಜಾತಾಸ್ತೇ ವೃಕ್ಷಾಃ ಸೌವರ್ಣಸಪ್ರಭಾಃ ॥೬॥

ಪುರಾ ಬ್ರಹ್ಮಾದಯೋ ದೇವಾ ಲೋಕಪಾಪನಿವೃತ್ತಯೇ ।
ಕೈಲಾಸದ್ವಾರಿ ಸಂಗತ್ಯ ಸುಖೋಪಾಯೇನ ಮೋಚಕಂ ॥೭॥

ವಿಷ್ಣ್ವಾದಯಸ್ಸದಾ ಮಾಂ ಹಿ ತುಷ್ಟುವುರ್ಲೋಕಗುಪ್ತಯೇ ।
ರುದ್ರಾಧ್ಯಾಯೇನ ಮಾಂ ದೇವಿ ದಶವರ್ಷಾಣಿ ತುಷ್ಟುವುಃ ॥೮॥

॥ ದೇವಾ ಊಚುಃ ॥

ಶಂಭೋ ಶರಣ್ಯ ಕರುಣಾರ್ಣವ ವೇದವೇದ್ಯ
ಸದ್ದೀಪ್ತ್ಯಮಾರಮಣ ಸಾಮಗಣಸ್ತುತಾದ್ಯ ।

---

ಪಾಪಕ್ಷಯಕರವಾದುದು. ಪಾಪವೆಂಬ ಕಾಗೆಯನ್ನು ಓಡಿಸಿ, ಮುಕ್ತಿಸಾಮ್ರಾಜ್ಯವನ್ನು ಒದಗಿಸಬಲ್ಲುದು. ನಾನು ಕಣ್ಣುಮುಚ್ಚಿ ತೆರೆಯುವಾಗ ಹುಟ್ಟಿದ ನೀರಿನ ತುಂತುರುಗಳಿಂದ ಈ ವೃಕ್ಷಗಳು ಭೂಲೋಕದಲ್ಲಿ ಹುಟ್ಟಿಕೊಂಡವು. ॥೩-೪-೫॥

ಈ ಮರಗಳು ಮೊದಲು ಕೈಲಾಸಶಿಖರದಲ್ಲಿ ಬೆಳೆದಿದ್ದುವು. ದೇವತೆಗಳ ಕೋರಿಕೆಯಂತೆ ಅವು ಭೂಲೋಕಕ್ಕೆ ಬಂದವು. ಆ ಮರಗಳು ಸುವರ್ಣಛಾಯೆಯಿಂದ ಹೊಳೆಯುತ್ತಿದ್ದುವು. ಹಿಂದೆ ಬ್ರಹ್ಮಾದಿ ದೇವತೆಗಳು ಕೈಲಾಸದ್ವಾರಕ್ಕೆ ಬಂದು, ಪ್ರಪಂಚದಲ್ಲಿ ಜೀವಿಗಳಿಗೆ ಪಾಪನಿವೃತ್ತಿಯಾಗಿ ಸುಲಭವಾಗಿ ಮೋಕ್ಷವು ದೊರೆಯುವ ಕ್ರಮವನ್ನು ನನ್ನಿಂದ ತಿಳಿದುಕೊಳ್ಳಬೇಕೆಂದು ಹತ್ತುವರ್ಷ ಪರ್ಯಂತ ನನ್ನನ್ನು ರುದ್ರಾಧ್ಯಾಯಗಳಿಂದ ಧ್ಯಾನಿಸಿದರು. ॥೬-೭-೮॥

"ಶಂಕರನೇ, ಭಕ್ತಜನರಕ್ಷಕನೇ, ವೇದವೇದ್ಯನೇ, ಪಾರ್ವತೀಪತಿಯೇ, ಸಾಮವೇದಸ್ತುತನೇ, ನೀನು ಚಂದ್ರಶೇಖರನು. ಚಂದ್ರನಿಗೆ ಶಿಖೆಯಲ್ಲಿ ಆಶ್ರಯ

ಭೂಮಾ ತ್ವಮೇವ ಮಹಿಮಾ ಶಶಧಾಮಚೂಡ
ಭಾಮಾರ್ಧಕಾಯ ಜಿತಕಾಲ ಶಿವೋಗ್ರಭೀಮ ॥೯॥

ಶ್ರೀ ವಾಸುದೇವ ಶರಣಾರುಣ ಪಾದಪದ್ಮ
ಸಂಪ್ರಾಪಿತೇನ ಮನಸಾ ತಮಸೋ ವಿಮುಚ್ಯ ।
ಘೋರಾಂಧ ಪಾತಕತತಿಂ ಪ್ರತಿಭಾನಮಾನ
ಗಾನಾದಿದಾನಪರಮಾಸ್ತ್ವಯಿ ಭಕ್ತಿಭಾಜಾಂ ॥೧೦॥

ಉತ್ತುಂಗಲಿಂಗಭುಜಗಾಂಗಸ್ಫುರತ್ಸ್ಫುಲಿಂಗ
ಮಾತಂಗಭಂಗಿತಮನಂಗ ತರುಣೀವರಕಾದ್ಯಪಾಂಗ ।
ಭಸ್ಮಾಂಗಸಂಗಭವಭಂಗಮಹೇಶಲಿಂಗ
ವ್ಯೋಮಾಂಗಸಂಗ ಜನಿತಾಂಗ ಸುಖಾದಿಸಂಗ ॥೧೧॥

ಶಿಖಿಶಶಿದಿನನಾಥಲೋಲನೇತ್ರ
ಪ್ರಥಿತಶ್ರೋತ್ರ ವಿಲೋಚನೋರುಹಾರ ।
ಅವ ಭವ ಭಗವನ್ ಸನಾತನಾದ್ಯ
ತ್ರಿಭುವನನಾಥ ಸನಾಥಯಾಸ್ಮಾನ್ ॥೧೨॥

---

ವಿತ್ತವನು. ಪಾರ್ವತಿಗೆ ಅರ್ಧಶರೀರವನ್ನು ಕೊಟ್ಟು ಮನ್ಮಥನನ್ನು ನಾಶಗೊಳಿಸಿದವನು ನೀನು. ॥೯॥

ವಾಸುದೇವನೇ, ಭಕ್ತರಿಗೆ ಸೂರ್ಯನಂತಿರುವ ಪಾದಪದ್ಮವುಳ್ಳವನೇ, ನಮಗಿರುವ ಅಜ್ಞಾನವನ್ನು ಹೋಗಲಾಡಿಸಿ, ನಿನ್ನಲ್ಲಿ ಭಕ್ತಿಯಿಟ್ಟಿರುವವರಿಗೆ ಅಜ್ಞಾನದಿಂದ ತೋರಿಬರುವ ವಸ್ತುಗಳ ಮಿಥ್ಯಾಸ್ವರೂಪವನ್ನು ಸ್ಫೂರ್ತಿಗೊಳಿಸಿ, ಅವರಿಗೆ ಒದಗುವ ಘೋರಪಾಪವನ್ನು ನಿರ್ಮೂಲಗೊಳಿಸು. ॥೧೦॥

ಶಿವಲಿಂಗಸ್ವರೂಪಿಯೇ, ನಿನ್ನ ಅವಯವಗಳು ನಾಗಾಭರಣದಿಂದ ಭೂಷಿತಗಳಾಗಿವೆ. ಮದ್ದಾನೆಯಂತೆ ಕೊಬ್ಬಿದ್ದ ಮನ್ಮಥನನ್ನು ಧ್ವಂಸಗೊಳಿಸಿ, ಪಾರ್ವತಿಗೆ ಅರ್ಧದೇಹವನ್ನೇ ಕೊಟ್ಟಿರುವೆ. ನಿನ್ನ ಅವಯವಗಳೆಲ್ಲಾ ಭಸ್ಮಭೂಷಿತಗಳಾಗಿವೆ. ಮಹೇಶ್ವರನೇ, ಸರ್ವವೂ ನಿನ್ನ ಶಿವಲಿಂಗಮಯವೇ ಆಗಿದೆ. ಮನ್ಮಥನನ್ನು ಉಗ್ರವಾಗಿ ದಹಿಸಿದರೂ ಅವನಿಗೆ ಮೋಕ್ಷವಿತ್ತಿರುವೆ. ॥೧೧॥

ಅಗ್ನಿ, ಚಂದ್ರ, ಸೂರ್ಯ ಇವರನ್ನೇ ನೇತ್ರವಾಗುಳ್ಳ, ಶ್ರೋತ್ರ (ಕಿವಿ) ವೇ ನೇತ್ರ (ಕಣ್ಣು) ವಾಗಿರುವ ಸರ್ಪಗಳನ್ನೇ ಹಾರವನ್ನಾಗಿ ಮಾಡಿಕೊಂಡಿರುವ

ಶಿವಶಿವಶಂಕರ ಮಾರಮಾರ ಶಂಭೋ
ಭವ ಭವ ದೇವ ಮಹೇಶ ಆದ್ಯವೇದ್ಯ ।
ಗರಧರಚಾರುಶಶಾಂಕಶೇಖರ
ತ್ರಿಪುರೋದ್ಯಾನಹರಾಶು ಶರ್ವ ಪಾಹಿ ॥೧೩॥

ಇತ್ಥಂ ದೇವಸ್ತುತಿಂ ಶ್ರುತ್ವಾ ಭಗವಾನ್ ಚಂದ್ರಶೇಖರಃ ।
ಪ್ರಾದುರ್ಬಭೂವ ಪುರತೋ ಭಗವಾನ್ ವೃಷಭಧ್ವಜಃ ॥೧೪॥

ಚಾರುಚಂದ್ರಕಲಾಮೌಲಿರ್ಗಿರಿಜಾರ್ಧಾಕೃತಿರ್ಹರಃ ।
ನೀಲಕಂಠೋ ವಿರೂಪಾಕ್ಷೋ ಗಂಗಾತುಂಗಜಟಾಧರಃ ॥೧೫॥

ಮೃಗಶೋಭಿಕರೋಪಗ್ರೋ ಉಗ್ರೋದೇವಾನಭಾಷತ ॥೧೬॥

॥ ಈಶ್ವರ ಉವಾಚ ॥

ಭೋ ಭೋ ದೇವಗಣಾ ಯೂಯಂ ಕಿಮರ್ಥಂ ಮಾಂ ಸಮಾಗತಾಃ ।
ಮಾಂ ಚಿರಂ ಬ್ರೂತ ಸರ್ವಂ ಮೇ ತದ್ಧಿ ವಃ ಸಾಧಯಾಮ್ಯಹಂ ॥೧೭॥

---

ಸನಾತನ ಪುರುಷನೇ, ತ್ರಿಜಗತ್ಪತಿಯೇ, ಅನಾಥರಾದ ನಮಗೆ ನೀನು ನಾಥನಾಗಿದ್ದು ರಕ್ಷಿಸು. ॥೧೨॥

ಶಿವನೇ, ಶಂಕರನೇ, ಮನ್ಮಥನಾಶಕನೇ, ಭವದುಃಖನಾಶಕನೇ, ಆದಿಪುರುಷನೇ, ವಿಷಕಂಠನೂ, ಚಂದ್ರಶೇಖರನೂ, ತ್ರಿಪುರಾರಿಯೂ ಆದ ನೀನು ನಮ್ಮನ್ನು ಪಾಲಿಸು." ॥೧೩॥

ಹೀಗೆ ದೇವತೆಗಳು ಪ್ರಾರ್ಥಿಸಿದುದನ್ನು ಶಂಕರನು ಕೇಳಿ ಪ್ರಸನ್ನನಾಗಿ ವೃಷಭಾರೂಢನಾಗಿ ಅವರಿಗೆ ಪ್ರತ್ಯಕ್ಷನಾದನು. ಆಗ ಅವನ ಶಿರೋಭಾಗದಲ್ಲಿ ಚಂದ್ರಕಲೆಯೂ, ಎಡಭಾಗದಲ್ಲಿ ಪಾರ್ವತಿಯ ದೇಹವೂ, ಕಂಠದಲ್ಲಿ ವಿಷದ ಕಪ್ಪು ಬಣ್ಣವೂ, ಜಟಾಜೂಟದಲ್ಲಿ ಗಂಗಾನದಿಯೂ, ಕೈಯ್ಯಲ್ಲಿ ಜಿಂಕೆಯೂ, ಕಂಗೊಳಿಸುತ್ತಿದ್ದವು. ಇಂತಹ ಮಹಾನುಭಾವನು ಪ್ರಸನ್ನನಾಗಿ ದೇವತೆಗಳೊಡನೆ ಹೀಗೆ ನುಡಿದನು. ॥೧೪-೧೫-೧೬॥

"ಎಲೈ ದೇವತೆಗಳಿರಾ, ನೀವು ಏತಕ್ಕಾಗಿ ಇಲ್ಲಿಗೆ ಬಂದಿರಿ. ನಿಮ್ಮ ಇಷ್ಟ ಕಾರ್ಯವಾವುದು ? ಹೇಳಿರಿ. ನಾನು ಅದನ್ನು ಸಾಧಿಸಿಕೊಡುವೆನು." ಎಂದು

ಇತ್ಥಂ ಮಹೇಶವಚನಂ ಶ್ರುತ್ವಾ ದೇವಾಸ್ಸವಾಸವಾಃ ।
ಹರಿಪದ್ಮಜಮುಖ್ಯಾಸ್ತೇ ಪ್ರಣಮ್ಯ ಪ್ರಾಹುರೀಶ್ವರಂ ॥೧೮॥

॥ ದೇವಾ ಊಚುಃ ॥

ದೇವದೇವ ಮಹಾದೇವ ಕರುಣಾರಸಸಾಗರ ।
ಕಪಾಲಪಾಣೇ ವಿಶ್ವಾತ್ಮನ್ ಜಗತಾಂ ರಕ್ಷಣೇಕ್ಷಣ ॥೧೯॥

ಪಾಹಿ ದೇವಾಸುರಮುನೀನ್ ರುದ್ರಾಕ್ಷಾಣಾಂ ಪ್ರದಾನತಃ ।
ಲೋಕಪಾಪೌಘಸಂತಾಪಂ ನಿವಾರಯ ಕೃಪಾಕರ ॥೨೦॥

ಸ ದೇವಾನಾಂ ವಚಶ್ಶ್ರುತ್ವಾ ದೇವದೇವೋ ಮಹೇಶ್ವರಃ ।
ಕರುಣಾರಸಯಾ ದೃಷ್ಟ್ಯಾ ವಿಲೋಕ್ಯಾಲೋಕಮುದ್ಭಟಂ ॥೨೧॥

ತ್ರೈಲೋಕ್ಯಂ ಪಾಪಸಂಕ್ರಾಂತಂ ಜನತಾಂ ವೀಕ್ಷ್ಯ ದುಃಖಿತಾಂ ।
ಉವಾಚ ವೀಕ್ಷ್ಯ ತ್ರ್ಯಕ್ಷೋಽಸೌ ದೇವಾನಾಂ ಮುದಮಾದಧಾತ್ ॥೨೨॥

ಕೈಲಾಸಮೌಲಿಪಾಲೀತೋ ವೃಕ್ಷಾನ್ ರುದ್ರಾಕ್ಷಭೂಷಿತಾನ್ ।
ಚತುರ್ದಶಕುಲೋತ್ಪನ್ನಾನ್ ಲೋಲನೇತ್ರೋದ್ಭವಾನ್ ಸ್ವಕಾನ್ ॥೨೩॥

---

ಅಭಯಪ್ರದಾನ ಮಾಡಿದ ಶಂಕರನನ್ನು ನೋಡುತ್ತಾ, ವಿಷ್ಣು ಬ್ರಹ್ಮ ಮೊದಲಾದ ದೇವತೆಗಳು ನಮಸ್ಕರಿಸಿ ಈ ರೀತಿ ಕೇಳಿಕೊಂಡರು. ॥೧೭-೧೮॥

ದೇವದೇವನೇ, ಜಗದೊಡೆಯನೇ, ತ್ರಿಶೂಲಪಾಣಿಯೇ ನಮ್ಮನ್ನುದ್ಧರಿಸು. ದೇವಾಸುರ ಮಾನವರನ್ನು ರಕ್ಷಿಸಲೋಸುಗ ಇರುವ ಪವಿತ್ರವಾದ ರುದ್ರಾಕ್ಷಿಯನ್ನು ನಮಗೆ ಅನುಗ್ರಹಿಸಿಕೊಟ್ಟು ಅದರಿಂದ ಪ್ರಪಂಚದಲ್ಲಿ ಯಾವವಿಧವಾದ ಪಾಪದ ಫಲವೂ ಯಾರನ್ನೂ ಹಿಂಸಿಸದಂತೆ ಅನುಗ್ರಹಿಸು.'' ॥೧೯-೨೦॥

ಎಂದು ಯಾಚಿಸಿದ ದೇವವಾಣಿಯನ್ನು ಕೇಳಿ ದೇವದೇವನಾದ ಶಂಕರನು ಕರುಣಾರಸಪೂರಿತನಾಗಿ, ಮೂರು ಲೋಕದ ಜನರೂ ಪಾಪಾನ್ವಿತರಾಗಿ ದುಃಖ ಪಡುತ್ತಿರುವುದನ್ನು ಮನಸಾ ತಿಳಿದು ದೇವತೆಗಳಿಗೆ ಹಾಗೆಯೇ ಅನುಗ್ರಹಿಸಿದನು. ॥೨೧-೨೨॥

ಶಿವಾನುಗ್ರಹದಿಂದ ಕೈಲಾಸಗಿರಿಶಿಖರದಲ್ಲಿ ಶಂಕರನ ನೇತ್ರಬಿಂದುಗಳಿಂದ ಹುಟ್ಟಿ ಹದಿನಾಲ್ಕು ರೀತಿಯುಳ್ಳದ್ದ ರುದ್ರಾಕ್ಷಿಯ ಮರಗಳು ಮುಂದೆ ಗೌಡ

ಭೂಮೌ ಗೌಡೋಙ್ಷವಾಂಶ್ಚಕ್ರೇ ರುದ್ರಾಕ್ಷಾಂಛಿವವಲ್ಲಭಾನ್ ।
ಮಥುರಾಯಾಮಯೋಧ್ಯಾಯಾಂ ಲಂಕಾಯಾಂ ಮಲಯೇ ತಥಾ ॥೨೪॥

ಸಹ್ಯಾದ್ರೌ ಸಹ್ಯಪಾಪೌಘಭೇದನಾಚ್ಛ್ರುತಿಬೋಧಿತಾನ್ ।
ದತ್ವಾ ದ್ವಿಜಾನಾಂ ಶ್ವೇತಾಂಶ್ಚ ರಕ್ತಾನ್ ರಾಜ್ಞಾಂ ಶಿವೋದದತ್ ॥೨೫॥

ಪೀತಾನ್ ವೈಶ್ಯೇಷ್ವದಾದನ್ಯಾನ್ ಕೃಷ್ಣಾನ್ ಶೂದ್ರೇಷ್ವದಾಚ್ಛಿವಃ ।
ದೇವಾನಾಂ ಚ ಮುನೀನಾಂ ಚ ಗಂಧರ್ವಾಣಾಂ ಸದಾಶಿವಃ ॥೨೬॥

ಚತುರ್ದಶಮುಖಾನ್ ಶಂಭುರ್ವ್ಯಧಾದ್ಭೂಮೌ ಚ ಪಾಪಹೃತ್ ॥೨೭॥

ಲಬ್ಧ್ವಾಥರುದ್ರಾಕ್ಷವೃಕ್ಷಾನ್ ಶಿವಲಸಿತದೃಶಾ ಸಂಭವಾನ್
ಲೋಕಪಾಪಸಂತಾಪಭೀತಿವಿನಿವಾರಕಾನ್ ತದಾ ತೇ ।
ಸಂಗತ್ಯಾ ಗೋಪತಿವಾಹಾಬ್ಜಪದೇ ಪ್ರಣಮ್ಯ
ರುದ್ರಾಕ್ಷವೃಕ್ಷತಿಲಕಾನ್ ಭುವಿ ತೇ ನಿದಧ್ಯುಃ ॥೨೮॥

ಕೈಲಾಸಮೌಲಿ ವಿಪಿನೋತ್ತಮ ಮಧ್ಯಸಂಸ್ಥಾನ್
ರುದ್ರಾಕ್ಷವೃಕ್ಷವನಮೇತದಘಕ್ಷಯಾಯ ।

---

ದೇಶದಲ್ಲಿ ಬೆಳೆಯುವಂತಾದುವು. ಅದೇ ರೀತಿಯಲ್ಲಿ ಮಥುರಾ, ಮಲಯ, ಲಂಕಾ, ಅಯೋಧ್ಯಾ, ಸಹ್ಯಾದ್ರಿ ಮೊದಲಾದ ಐದು ಕ್ಷೇತ್ರಗಳಲ್ಲಿ ರುದ್ರಾಕ್ಷಿಯ ವೃಕ್ಷಗಳು ಪಾಪನಾಶವನ್ನು ಅಪೇಕ್ಷಿಸುವ ಜನರಿಗೆ ಲಭಿಸುವಂತಾದುವು. ಅದರಲ್ಲಿ ಬಿಳಿಯ ರುದ್ರಾಕ್ಷಿಗಳು ಬ್ರಾಹ್ಮಣರಿಗೂ, ಕೆಂಪು ಕ್ಷತ್ರಿಯರಿಗೂ, ಹಳದಿಯು ವೈಶ್ಯರಿಗೂ, ಕಪ್ಪು ಶೂದ್ರರಿಗೂ ವಿಹಿತವಾದವುಗಳೆಂದು ಹೇಳಿ, ಸ್ವಾಮಿಯು ಆಯಾ ವರ್ಣದ ರುದ್ರಾಕ್ಷಿಗಳನ್ನು ಆಯಾ ವರ್ಣದವರಿಗೆ ಅನುಗ್ರಹಿಸಿಕೊಟ್ಟನು. ||೨೩-೨೪-೨೫||

ದೇವ, ಮುನಿ, ಗಂಧರ್ವ ಇವರಿಗೆ ಶಂಕರನು ಹದಿನಾಲ್ಕುಮುಖದ ರುದ್ರಾಕ್ಷಿಗಳನ್ನು ಅನುಗ್ರಹಿಸಿಕೊಟ್ಟನು. ಹೀಗೆ ಪರಶಿವನಿಂದಲೇ ಲಬ್ಧವಾದ ರುದ್ರಾಕ್ಷಿಯನ್ನೂ, ಅದರ ವೃಕ್ಷವನ್ನೂ ತಂದು ಸಮಸ್ತಲೋಕದ ಜನರ ಪಾಪ ಮತ್ತು ಸಂತಾಪಗಳನ್ನು ನಿವಾರಿಸಲೋಸುಗ, ಪರಶಿವನ ಪಾದಪದ್ಮಗಳಿಗೆರಗುತ್ತಾ ಭೂಲೋಕದಲ್ಲಿ ಅಲ್ಲಲ್ಲಿ ಸ್ಥಾಪಿಸಿದರು. ||೨೬-೨೭-೨೮||

ಪಾರ್ವತಿಯೇ, ಕೈಲಾಸಾಚಲದ ಮಧ್ಯದಲ್ಲಿದ್ದ ಈ ರುದ್ರಾಕ್ಷಿಯಮರವು

ಸಂಕಲ್ಪಿತಂ ಹಿ ಮನಸೈವ ಮಯಾದ್ರಿಕನ್ಯೇ
ತದ್ರಕ್ಷಿಯಕ್ಷಗಣಪಾಲಮಲಕ್ಷಸಂಖ್ಯಂ ॥೨೯॥

ಏಕಾದ್ಯಾ ಶತವಕ್ತ್ರಕಾಷ್ಟಕಲಿತಾ ಚಂದ್ರಾರ್ಧರೇಖಾಮುಖಾನಿ
ಷಷ್ಠ್ಯೋತ್ತಮ ಹೇಮಗೌರಲಿಕುಚಾಕಾರಾಶ್ಚ ಸಂದಗ್ಧಿನಃ ।
ತತ್ಸದ್ಭೂಷಣಮಾತ್ರಗಾತ್ರವಿಹಿತಾಸ್ತ್ವನ್ಯೇ ಭುವಂ ಸಂಸ್ಥಿತಾ
ದೇವಾನಾಂ ಪ್ರಮುದೇ ಮುದೈವ ವಿಹಿತಾಲಿಂಗಾದಿ ಸಲ್ಲಿಂಗಿನಃ ॥೩೦॥

ಕೈಲಾಸಸ್ಥಿತ ದಿವ್ಯಚಾರುಸುಮಹಾರುದ್ರಾಕ್ಷವೃಕ್ಷೋದ್ಭವ
ಸ್ತದ್ಗಂಧೋತ್ತಮಸಂಗ ಬಂಧುರಚಲದ್ವಾತೋತ್ಥಪೋತೊಂಬಿಕೇ ।
ಡೇವಾನಾಂ ಪ್ರಮುದೇ ಭವೇತ ಸ ನ ವೈ ಯದ್ವಾ ತಪಸ್ಯಾಫಲೈಃ
ಕಸ್ತದ್ಧಾರಣಶಕ್ತಿಕೋದ್ರಿತನಯೇ ಮದ್ಭೂಷಣಾಕ್ಪಾ ಹಿ ತೇ ॥೩೧॥

---

ಪಾಪನಾಶಕವಾದುದೆಂದು ತಿಳಿದು ನಾನೇ ಅದನ್ನು ಭೂಲೋಕಕ್ಕೆ ಕಳುಹಿಸಿರುವೆನು. ಅದು ಈಗ ದೇವಯಕ್ಷರಿಂದ ರಕ್ಷಿತವಾಗಿ ಅಸಂಖ್ಯಾತವಾದ ರೀತಿಯಲ್ಲಿ ಬೆಳೆಯುತ್ತಿರುವುದು. ॥೨೯॥

ಈ ರುದ್ರಾಕ್ಷಿಗಳು ಒಂದು ಮುಖದಿಂದ ಹಿಡಿದು ನೂರರಪರ್ಯಂತ ಮುಖಗಳುಳ್ಳವುಗಳಾಗಿವೆ. ಆ ಮುಖಗಳು ಅರ್ಧಚಂದ್ರಾಕಾರವಾಗಿ ಕಾಣುವುವು ಅವುಗಳಲ್ಲಿ ಸುವರ್ಣಛಾಯೆಯುಳ್ಳ ನಿಂಬೆಯ ಹಣ್ಣಿನ ಆಕಾರದವುಗಳು ಶ್ರೇಷ್ಠವಾದವುಗಳು. ಅವುಗಳಿಂದ ರಚಿತವಾದ ಭೂಷಣಗಳೇ ಮಾನವರ ಅಂಗಗಳಿಗೆ ವಿಹಿತವಾದವುಗಳು. ಇಂತಹ ಪವಿತ್ರವಸ್ತುವನ್ನು ಭೂಲೋಕದ ಜನರ ಉದ್ಧಾರಕ್ಕಾಗಿಯೇ ನಾನು ಭೂಲೋಕಕ್ಕೆ ಕಳುಹಿಸಿರುವೆನು. ದೇವತೆಗಳಿಗೂ, ಲಿಂಗಪೂಜಕರಿಗೂ, ಶಿವಾರಾಧಕರಿಗೂ ಇದು ಅತಿ ಸಂತೋಷಕರವಾದುದು. ॥೩೦॥

ಕೈಲಾಸಪರ್ವತದಲ್ಲಿರುವ ರುದ್ರಾಕ್ಷಿಯ ಮರಗಳ ಮೇಲೆ ಬೀಸುವ ಮಂದಮಾರುತವು ದೇವತೆಗಳಿಗೂ ಅತ್ಯಾನಂದದಾಯಕವಾಗುವುದು. ಆ ವಾಯು ಸ್ಪರ್ಶವು ಕೇವಲ ಪುಣ್ಯಶಾಲಿಗಳಿಗೆ ಮಾತ್ರವೇ ಲಭಿಸುವುದು. ಇತರರಿಗೆ ಎಂದೂ ದೊರೆಯಲಾರದು. ಹೀಗಿರುವಾಗ ಆ ರುದ್ರಾಕ್ಷಿಯ ಧಾರಣಾಶಕ್ತಿಯು ಸಾಮಾನ್ಯರಿಗೆ ಲಭಿಸಿತೇ? ಅದೇ ನಿಜವಾದ ಭೂಷಣವಲ್ಲವೆ! ॥೩೧॥

ಏಕಾನನಾದ್ಯಾದಿಚತುರ್ದಶಾಸ್ಯಂ
ರುದ್ರಾಕ್ಷಮಾಹುರಗಜೇ ಶ್ರುತಯಃ ಪುರಾಣೇ ।
ಕೈಲಾಸಶೈಲವಿಪಿನಪ್ರಭವೋರುದೇವ
ರುದ್ರಾಕ್ಷವೃಕ್ಷಶತಕಾಷ್ಟಮುಖಂ ಭವಾನಿ ॥೩೨॥

ಕಪಿತ್ಥಫಲಸನ್ನಿಭಾ ವಿಮಲಶಾತಕುಂಭಪ್ರಭಾ
ಇಭಾನನ ಗಣೇಶ್ವರೈರ್ವರನಗಾರಿಧಾರ್ಯಾ ತ್ವಯಾ ।
ಮಯಾಪಿ ಗಿರಿಜೇ ಸದಾ ವರಮಮಾಕ್ಷಜಾಶ್ರೂಭವಾ
ಭವಂತಿ ಭುವಿ ಮೋಚನೇ ನ ಭುವಿ ಸಂತಿ ರುದ್ರಾಕ್ಷಕಾಃ ॥೩೩॥

ರುದ್ರಾಕ್ಷವೃಕ್ಷಕುಸುಮೋದ್ಭವವಾತಪೋತಃ
ಸ್ವರ್ಗೇಽಪಿ ದುರ್ಲಭತರಃ ಸುರಸತ್ತಮಾನಾಂ ।
ತನ್ಮೂಲಭೂಮ್ನಿ ಮಣಿಹೇಮ್ನಿ ಸುಕಾಂತಿಧಾಮ್ನಿ
ಪ್ರಾಸಾದಸೀಮ್ನಿ ವಿಹರಾಮಿ ಶಿವೇ ತ್ವಯಾಹಂ ॥೩೪॥

---

ರುದ್ರಾಕ್ಷಿಗಳಲ್ಲಿ ಒಂದು ಮುಖದಿಂದ ಹಿಡಿದು ಹದಿನಾಲ್ಕು ಮುಖದವರೆಗಿರುವ ರುದ್ರಾಕ್ಷಿಗಳೇ ಶ್ರೇಷ್ಠವಾದವುಗಳೆಂದು ವೇದಗಳೂ, ಪುರಾಣಗಳೂ ತಿಳಿಸುತ್ತಿವೆ. ಆದರೆ ಪಾರ್ವತಿಯೇ, ಕೈಲಾಸಶಿಖರದಮೇಲಿರುವ ರುದ್ರಾಕ್ಷಿಗಳಲ್ಲಿ ನೂರೆಂಟು ವದನಗಳುಂಟು. ಅವು ಭೂಲೋಕದಲ್ಲಿ ಎಲ್ಲಿಯೂ ದೊರೆಯಲಾರವು. ॥೩೨॥

ಚಿನ್ನದ ಬಣ್ಣದಂತೆ ಹೊಳೆಯುತ್ತಾ, ಬೇಲದಹಣ್ಣಿನ ಗಾತ್ರವಿರುವ ಈ ರುದ್ರಾಕ್ಷಿಗಳು, ಗಣಪತಿ, ಕುಮಾರಸ್ವಾಮಿ, ನೀನು (ಪಾರ್ವತಿ) ನಾನು (ಈಶ್ವರ) ಇವರಿಗೆ ಮಾತ್ರ ಧರಿಸಲು ಯೋಗ್ಯವಾದವುಗಳು. ಇವು ನಿಜವಾಗಿ ಸರ್ವಭವಬಂಧ ಮೋಚಕಗಳು. ಆದರೆ ಇವು ಭೂಲೋಕದಲ್ಲಿ ದೊರೆಯಲಾರವು. ॥೩೩॥

ದೇವಿಯೇ, ರುದ್ರಾಕ್ಷಿಯ ಹೂವುಗಳ ಮೇಲೆ ಬೀಸುವ ಮಂದಮಾರುತವು ದೇವತೆಗಳಿಗೂ ಸ್ವರ್ಗದಲ್ಲಿ ದುರ್ಲಭವೇ ಸರಿ. ಅಂತಹ ರುದ್ರಾಕ್ಷವೃಕ್ಷಗಳ ಮೂಲಪ್ರದೇಶದಲ್ಲಿ ಮಣಿಮಯವಾದ ಅರಮನೆಯನ್ನು ನಿರ್ಮಿಸಿಕೊಂಡು ಸರ್ವದಾ ನಾನು ಅಲ್ಲಿ ವಿಹರಿಸುತ್ತಿರುವೆನು. ಇದರಲ್ಲಿ ಸಂಶಯವಿಲ್ಲ. ॥೩೪॥

ರುದ್ರಾಕ್ಷಾರ್ಚನಮಂಬಿಕೇ ತ್ವಘಹರಂ ಮಲ್ಲಿಂಗಪೂಜಾಸಮಂ
ನೀರೇಣೈವ ವಿವರ್ಜಯೇದ್ವಿಧಿಹಿತಂ ಸಾಮಾನ್ಯಪೂಜಾಂ ಚರೇತ್ ।
ತೇನೈವಾಹಮಹೋ ದದಾಮಿ ವಿಪುಲಂ ಭಾಗ್ಯಂ ಚ ಮುಕ್ತಿಂ ಶಿವೇ
ತಸ್ಯೈವಾಹಮುಮೇ ಸದಾ ಮಮ ಪದಂ ಕೈಲಾಸಮೌಲೌ ಸದಾ ॥೩೫॥

ವೃಂತಾಚ್ಚ್ಯುತಂ ಸ್ವಕೃತರಂಧ್ರಮುಮೇ ವಿಶಿಷ್ಟಂ
ರುದ್ರಾಕ್ಷಮೇತದಘಹಾರಿ ಭವೇತ ಮುಕ್ತ್ಯೈ ।
ಧಾರ್ಯಂ ತದೇವ ಶಿವಲಿಂಗಸಮರ್ಚಕೈಶ್ಚ
ತತ್ಪೌರುಷೇಣ ಕೃತರಂಧ್ರಕಮಧ್ಯಮಂ ಸ್ಯಾತ್ ॥೩೬॥

ನಾಶ್ನೀಯಾತ್ಫಲಮನ್ನಮಣ್ವಪಿ ತಥಾ ಭಸ್ಮಾಕ್ಷಧಾರ್ಯಂ ವಿನಾ
ಭುಕ್ತ್ವಾವಾಥ ಗೃಹೀ ವನೀ ಯತಿಪತಿರ್ವರ್ಣೀ ಚ ವಾ ಶಂಕರಿ ।

---

ದೇವಿಯೇ, ರುದ್ರಾಕ್ಷಿಯ ಅರ್ಚನೆಯೂ ಪಾಪನಾಶಕವಾದದ್ದೇ. ಆದರೆ ಅದಕ್ಕೆ ಮಾಡುವ ಜಲರಹಿತವಾದ ಪೂಜೆಯಿಂದ ನಾನು ತೃಪ್ತಿಪಡುವೆನು. ಆದಕ್ಕೆ ವಿಧ್ಯುಕ್ತವಾದ ಪೂಜೆಯಿದ್ದರೂ ಅದು ಜಲರಹಿತವಾಗಿ ನಡೆಯಬೇಕು. ಅಂತಹ ರುದ್ರಾಕ್ಷಿಯ ಅರ್ಚನೆಯಿಂದ ನಾನು ತೃಪ್ತಿಹೊಂದಿ ಅವರಿಗೆ ಸಕಲವಿಧವಾದ ಐಶ್ವರ್ಯ ವನ್ನೂ ಅನುಗ್ರಹಿಸುವೆನು. ಅಷ್ಟೂ ಅಲ್ಲದೆ ವಿಶೇಷವಾದ ಆದರ ಅರ್ಚನೆಯಿಂದ ನಾನು ತೃಪ್ತನಾಗಿ ಪೂಜಕರಿಗೆ ನನ್ನ ಸಾಯುಜ್ಯವನ್ನೂ ಸಹ ಅನುಗ್ರಹಿಸುವೆನು. ॥೩೫॥

ಆ ರುದ್ರಾಕ್ಷಿಯು, ಮರದಿಂದ ಹಣ್ಣಾಗಿ ಗೊಂಚಲಿನಿಂದ ಬೀಳುವಾಗಲೇ ರಂಧ್ರವಿಶಿಷ್ಟವಾಗಿದ್ದು, ಧಾರಣೆಗೆ ಯೋಗ್ಯವಾಗಿದ್ದರೆ ಅದು ಮತ್ತೂ ಶ್ರೇಷ್ಠವೆನಿಸು ವುದು. ಅದನ್ನು ಧರಿಸುವುದರಿಂದ ಮುಕ್ತಿಯೂ ಸಹ ದೊರೆಯುವುದು. ಶಿವಲಿಂಗಾ ರಾಧಕರಿಗೆ ಇದು ಅತ್ಯುತ್ತಮವಾದುದು. ಕೃತ್ರಿಮವಾಗಿ ರಂಧ್ರಮಾಡಿದ ರುದ್ರಾ ಕ್ಷಿಯು ಧಾರಣೆಗೆ ಮಧ್ಯಮವೆನಿಸುವುದು. ॥೩೬॥

ಭಸ್ಮರುದ್ರಾಕ್ಷಿಗಳನ್ನು ಧರಿಸದೆ ಗೃಹಸ್ಥನಾಗಲಿ, ಬ್ರಹ್ಮಚಾರಿ ಸಂನ್ಯಾಸಿ ಗಳಾಗಲಿ ಭೋಜನಮಾಡಕೂಡದು. ಅಥವಾ ಅಲ್ಪಾಹಾರವನ್ನು ಸಹ ಭಕ್ಷಿಸ ಬಾರದು. ಹಾಗೆ ತಿಂದವನು ರೇತಸ್ಸನ್ನು ಕುಡಿಸುವ ನರಕವನ್ನು ಹೊಂದುವನು. ಒಂದು ವೇಳೆ ಅಜ್ಞಾನದಿಂದ ಹಾಗೆ ನಡೆದರೆ ಗಾಯತ್ರೀಜಪದಿಂದಲೋ ಸಂನ್ಯಾಸಿ

ರೇತೋ ಭುಙ್ಕ್ತೇ ನರಕಂ ಪ್ರಯಾತಿ ಸ ತದಾ ಗಾಯತ್ರಿಜಾಪೇನ ತ
ದ್ವರ್ಣಾನಾಂ ಚ ಯತಿಸ್ತು ಮುಖ್ಯ ಪ್ರಣವೇ ನಾಸ್ಯಾತ್ತದಾ ಮುಕ್ತಿ
ಭಾಕ್ ॥೩೭॥

ಇತಿ ಶ್ರೀ ಶಿವರಹಸ್ಯೇ ಈಶ್ವರಾಖ್ಯೇ ದಶಮಾಂಶೇ ಪೂರ್ವಾರ್ಧೇ
ರುದ್ರಾಕ್ಷಮಹಿಮಾವರ್ಣನಂ ನಾಮ್ನ ಏಕವಿಂಶೋಽಧ್ಯಾಯಃ

---

ಯಾದರೆ ಪ್ರಣವಜಪದಿಂದಲೋ, ಮುಕ್ತಿಯನ್ನು ಗಳಿಸಬೇಕು. ಎಂದು ಪರಶಿವನು ಪಾರ್ವತಿಗೆ ಹೇಳಿದ ರುದ್ರಾಕ್ಷಿಮಹಿಮೆಯನ್ನು ಕುಮಾರಸ್ವಾಮಿಯು ಜೈಗೀಷವ್ಯನಿಗೆ ತಿಳಿಸಿದನು. ॥೩೭॥

ಇಲ್ಲಿಗೆ ಶ್ರೀಶಿವರಹಸ್ಯದ ಹತ್ತನೆಯ ಅಂಶದ ಪೂರ್ವಾರ್ಧದಲ್ಲಿ ರುದ್ರಾಕ್ಷಮಹಿಮಾ
ವರ್ಣನೆಯೆಂಬ ಇಪ್ಪತ್ತೊಂದನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ಶ್ರೀ ಶಿವಾಯನಮಃ ॥

# ಅಥ ಶ್ರೀ ಶಿವರಹಸ್ಯೇ

## ಈಶಾನಾಖ್ಯೇ

## ದಶಮಾಂಶೇ ಪೂರ್ವಾರ್ಧೇ

## ದ್ವಾತ್ರಿಂಶೋಽಧ್ಯಾಯಃ

॥ ಶ್ರೀಸ್ಕಂದ ಉವಾಚ ॥

ಅತ್ರ ರುದ್ರಾಕ್ಷಮಾಹಾತ್ಮ್ಯಂ ಸೇತಿಹಾಸಂ ವದಾಮಿ ತೇ ।
ಶೃಣು ಪುಣ್ಯತಮಾಖ್ಯಾನಂ ಗಣಪ್ಸಂದ್ಯೈರ್ದ್ವಿಜೈರಪಿ ॥೧॥

ಪಾಪತಾಪವಿನಾಶಾಯ ಸಾವಧಾನಮನಾಃ ಮುನೇ ।
ಆಸೀದ್ಗೌಡೇ ಪುರಾ ವೈಶ್ಯಶ್ಚಂದ್ರಗುಪ್ತಾಭಿಧೋ ಧನೀ ॥೨॥

ಧನೇನ ಯಕ್ಷಾಧಿಪತೇಃ ಸಮೋ ರುದ್ರಾಕ್ಷಭೂಷಿತಃ ।
ತ್ರ್ಯಕ್ಷಪಾದಾಂಬುಜೇ ಭಕ್ತಃ ಶಕ್ತೋ ಭಕ್ತಪ್ರಪೂಜಕಃ ॥೩॥

---

## ಇಪ್ಪತ್ತೆರಡನೆಯ ಅಧ್ಯಾಯ

ಸ್ಕಂದಸ್ವಾಮಿಯು ಜೈಗೀಷವ್ಯಮುನಿಗೆ ರುದ್ರಾಕ್ಷಮಹಿಮೆಯನ್ನು ತಿಳಿಸುತ್ತಾ ಆ ಮಹಿಮೆಯನ್ನು ತಿಳಿಸುವ ಒಂದು ಇತಿಹಾಸವನ್ನೇ ಆರಂಭಿಸಿದನು. ಎಲೈ ಮುನಿಯೇ, ರುದ್ರಾಕ್ಷಮಹಿಮೆಯನ್ನು ಬೋಧಿಸುವ ಇತಿಹಾಸವೊಂದನ್ನು ನಿನಗೆ ಈಗ ತಿಳಿಯ ಪಡಿಸುವೆನು. ಸಾವಧಾನದಿಂದ ಕೇಳು. ಹಿಂದೆ ಗೌಡದೇಶದಲ್ಲಿ ಚಂದ್ರಗುಪ್ತನೆಂಬ ಹೆಸರಿನ ಧನಿಕನಾದ ವೈಶ್ಯನೊಬ್ಬನಿದ್ದನು. ॥೧-೨॥

ಐಶ್ವರ್ಯದಲ್ಲಿ ಆತನು ಕುಬೇರನಿಗೆ ಸಮನಾಗಿದ್ದನು. ಭಕ್ತಿಯಿಂದ ಸದಾ ಶಿವನನ್ನೇ ಅರ್ಚಿಸುತ್ತಾ, ಭಸ್ಮರುದ್ರಾಕ್ಷಿಧಾರಿಯಾಗಿದ್ದು ಶಾಂಭವರನ್ನು ನಿತ್ಯವೂ

ಶಿವಭಕ್ತಾನ್ ಸದಾ ಭಕ್ತ್ಯಾ ಭೋಜಯನ್ ಷಡ್ರಸೋದನೈಃ ।
ರುದ್ರಾಕ್ಷದಾನತೋ ಭಕ್ತ್ಯಾ ಶಾಂಭವಾಂಶ್ಚಾಪ್ಯತೋಷಯತ್ ॥೪॥

ಧನೈರನ್ನೈಶ್ಚ ನಿಯತಂ ನೌಕಾಭಿಶ್ಚಾರ್ಣವೇ ರತಃ ।
ಧನಾನ್ಯಾದಾಯ ರತ್ನಾನಿ ವೃದ್ಧಿಸಿದ್ಧ್ಯೈವ ಜೀವತಿ ॥೫॥

ಸಂತುಷ್ಟೋ ಭಸ್ಮರುದ್ರಾಕ್ಷಭೂಷಿತಂ ವೀಕ್ಷ್ಯ ವೈಶ್ಯರಾಟ್ ।
ಶಿಪಿವಿಷ್ಟಮನಾ ನಿತ್ಯಂ ಭಸ್ಮರುದ್ರಾಕ್ಷಭೂಷಿತಃ ॥೬॥

ರುದ್ರಾಕ್ಷವೃಕ್ಷಬೀಜಾನಿ ಕ್ರಯಾರ್ಥಂ ಧನದೋಪಮಃ ।
ಬಹ್ವೀಭಿಸ್ಸತು ಗೋಣೀಭಿರ್ದೇಶೇಷ್ವನ್ಯೇಷು ಗೌಡಜಾನ್ ॥೭॥

ಪ್ರೈಷಯತ್ಪ್ರೇಷ್ಯವರ್ಗೈಸ್ಸ ವಿಕ್ರಯಾರ್ಥಮಸೌ ವಣಿಕ್ ।
ರಾಸಭೈರ್ವೃಷಭೈಶ್ಚೈವ ಖರೋಷ್ಟ್ರೈರಪಿ ವೈ ಮುನೇ ॥೮॥

ಅವಂತೀಮಾಲವೇ ಚೈವ ಕೇದಾರೇ ಪುಷ್ಕರೇ ತಥಾ ।
ರುದ್ರಕೋಟೌ ಪ್ರಭಾಸೇ ಚ ಲಂಕಾಯಾಂ ಮಲಯೇ ತಥಾ ॥೯॥

ಅಪ್ರೇಷಯತ್ಸತು ವಣಿಕ್ ಧನಲಾಭಾಯ ಸಾದರಂ ।
ಸಹಸ್ರೇಣ ಖರೋಷ್ಟ್ರೇಣ ವೃಷಭೈರಾಸಭೈರಪಿ ॥೧೦॥

---

ವ್ಯಷ್ಟಾನ್ನಾದಿಗಳಿಂದ ತೃಪ್ತಿಪಡಿಸಿ ಬಂದವರಿಗೆಲ್ಲಾ ಉಚಿತವಾಗಿ ರುದ್ರಾಕ್ಷಿಗಳನ್ನು ಕೊಡುತ್ತಿದ್ದನು. ॥೩-೪॥

ಆತನು ನೌಕಾವ್ಯಾಪಾರದಿಂದ ಸಮುದ್ರದಲ್ಲಿ ಸಂಚರಿಸುತ್ತಾ ವಿಶೇಷ ರತ್ನಾದಿಗಳನ್ನು ಸಂಪಾದಿಸಿ ತನ್ಮೂಲಕ ಹಣಗಾರನಾಗಿ ಜೀವಿಸುತ್ತಿದ್ದನು. ಆದರೂ ತಪ್ಪದೆ ಶಿವಾರ್ಚನೆಮಾಡುತ್ತಾ, ಭಸ್ಮರುದ್ರಾಕ್ಷಧಾರಿಯಾಗಿ ಸಂತೋಷದಿಂದ ಬರುವವರನ್ನು ನೋಡಿ ತಾನೂ ಆನಂದಪಡುತ್ತಿದ್ದನು. ಮತ್ತು ರುದ್ರಾಕ್ಷಿಮರದ ಬೀಜಗಳನ್ನು ಗೋಣೀಚೀಲಗಳಲ್ಲಿ ತುಂಬಿ ವಿಶೇಷ ಸಂಖ್ಯೆಯಿಂದ ದೇಶಾಂತರಗಳಿಗೆ ವ್ಯಾಪಾರಕ್ಕಾಗಿ ಕಳುಹಿಸುತ್ತಿದ್ದನು. ಆ ಗೋಣೀಚೀಲಗಳನ್ನು ಕತ್ತೆ, ಎತ್ತು, ಒಂಟೆ, ಹೇಸರಕತ್ತೆ ಇವುಗಳ ಮೇಲೆ ಹೇರಿ ವ್ಯಾಪಾರಕ್ಕಾಗಿ ಆಳುಗಳ ಜೊತೆ ಕಳುಹಿಸಿಕೊಡುತ್ತಿದ್ದನು. ॥೫-೬-೭-೮॥

ಹೀಗೆ ಸಹಸ್ರಾರು ಸಂಖ್ಯೆಯಲ್ಲಿ ಅವಂತೀ, ಮಾಲವ, ಕೇದಾರ, ಪುಷ್ಕರ,

ವಿಂಧ್ಯಾದ್ರಿಮಗಮತ್ತಸ್ಯ ತತ್ರ ವಾಹೋಽಸ್ಯ ಸತ್ತಮ ।
ರುದ್ರಾಕ್ಷಘೋಣೀಸಹಿತೋ ರಾಸಭೈರ್ವೃಷಭೈರ್ವೃತಃ ॥೧೧॥

ಘೋಣೀಶ್ರೇಣೀಭಿರಾಪೂರ್ಣೋ ನಿಶ್ರೇಣೀವ ಗಿರೇಸ್ತಟಂ ।
ವಿಂಧ್ಯಾದ್ರೇರಾರುಹತ್ಸಾರ್ಥಶ್ಚಂದ್ರಗುಪ್ತಸ್ಯ ಸತ್ತಮಂ ॥೧೨॥

ತತ್ರ ಕಶ್ಚಿತ್ಖರೋ ಭಗ್ನಪಾದಃ ಪ್ರಾಪ ತದದ್ರಿತಃ ।
ಘೋಣೀಭರೇಣ ಭಾರೇಣ ರುದ್ರಾಕ್ಷಾಣಾಂ ತದಾನಘ ॥೧೩॥

ಸಮಾವೃತೋ ಮಮಾರಾಯಂ ಭಗ್ನಾಂಗೋಽಸೃಗ್ವಮನ್ ತದಾ
ನಿರ್ಯಜ್ಜಿಹ್ವೋಽಶ್ರುನಯನೋ ಸಾರ್ಥಾನಾಂ ಪಶ್ಯತಾಂ ತದಾ ॥೧೪॥

ತತ್ರಾಂತರೇ ಸಮಾನೀತಂ ಶಿವದೂತಾಹೃತಂ ಮುನೇ
ವಿಮಾನಂ ತತ್ಸಮಾನೀತಂ ರುದ್ರಕನ್ಯಾಸಮಾವೃತಂ ॥೧೫॥

ಚಲಚ್ಚಾಮರವಾತಾದ್ಯೈರ್ವೀತಂ ಪುಷ್ಪಸರಾವೃತಂ ।
ತ್ರಿನೇತ್ರೋ ನೀಲಕಂಠಶ್ಚ ಗಂಗಾಚಂದ್ರಕಲಾಧರಃ ॥೧೬॥

---

ರುದ್ರಕೋಟಿ, ಪ್ರಭಾಸ, ಲಂಕಾ, ಮಲಯ ಮುಂತಾದ ಕ್ಷೇತ್ರಗಳಿಗೆಲ್ಲಾ ಕಳುಹಿಸಿ ಕೊಟ್ಟು ಮಾರಿಸಿ ದ್ರವ್ಯವನ್ನಾರ್ಜಿಸುತ್ತಿದ್ದನು. ॥೯-೧೦॥

ಹೀಗೆಯೇ ಇರಲು ಒಂದುಸಾರಿ ಎತ್ತುಕತ್ತೆಗಳಮೇಲೆ ರುದ್ರಾಕ್ಷಿಯ ಬೀಜದ ಮೂಟೆಗಳನ್ನು ಅಸಂಖ್ಯಾತವಾಗಿ ವಿಂಧ್ಯಾದ್ರಿಗೆ ಕಳುಹಿಸಿದನು. ಆ ಎತ್ತುಕತ್ತೆಗಳ ಸಾಲು ಆ ಬೆಟ್ಟವನ್ನು ಏಣಿಯಸಾಲಿನಂತೆ ನಿದಾನವಾಗಿ ಹತ್ತುತ್ತಿದ್ದುವು. ॥೧೧-೧೨॥

ಅದರಲ್ಲಿ ಒಂದು ಕತ್ತೆಯು ಕಾಲುಜಾರಿ, ಗೋಣೀಚೀಲದ ಭಾರವನ್ನು ತಡೆಯಲಾರದೆ ಕೆಳಗೆ ಬಿದ್ದಿತು. ಒಡನೆಯೇ ಅದು ಕಾಲುಮುರಿದು, ರಕ್ತವನ್ನು ಕಕ್ಕುತ್ತಾ ನಾಲಿಗೆ ನೀಡಿ ಪ್ರಾಣಬಿಟ್ಟಿತು. ಆಳುಗಳೆಲ್ಲರೂ ಇದನ್ನು ನೋಡುತ್ತಾ ಇದ್ದರು. ಕೂಡಲೇ ಶಿವದೂತರಿಂದಲೂ, ರುದ್ರಕನ್ಯೆಯರಿಂದಲೂ ಕೂಡಿದ ಶಿವವಿಮಾನವೊಂದು ಈ ಕತ್ತೆಯನ್ನು ಶಿವಲೋಕಕ್ಕೆ ಒಯ್ಯಲು ಅಲ್ಲಿಗೆ ಬಂದಿತು. ॥೧೩-೧೪-೧೫॥

ಆ ವಿಮಾನದಲ್ಲಿ ಚಾಮರಗಳನ್ನೂ ಹೂವಿನ ಸರಗಳನ್ನೂ ಹಿಡಿದು ರುದ್ರ ಗಣಗಳು ನಿಂತಿದ್ದುವು. ಒಡನೆಯೇ ಅಲ್ಲಿ ಬಿದ್ದಿದ್ದ ಕತ್ತೆಯು ರುದ್ರಗಣದವರ

ಖರೋ ರುದ್ರಗಣಾಕಾರೋ ದೃಷ್ಟೋ ವೈಶ್ಯೇನ ತೇನ ಹಿ ।
ತಮಾಹ ಚಂದ್ರಗುಪ್ತಂ ತಂ ತದಾ ರುದ್ರಗಣೋತ್ತಮಃ ॥೧೭॥

॥ ರುದ್ರಗಣ ಉವಾಚ ॥

ಪಶ್ಯಾವಶ್ಯಂ ವೈಶ್ಯವರ್ಯ ವಶ್ಯೋಽಹಂ ತ್ವತ್ಸಮಾಗಮಾತ್ ।
ರುದ್ರಾಕ್ಷವಹನಾನ್ಮೇಽದ್ಯ ಗಣತ್ವಂ ಶಂಕರಸ್ಯ ಹಿ ॥೧೮॥

ಪ್ರಾಪ್ತಂ ಮಯಾ ಗಮಿಷ್ಯಾಮಿ ಕೈಲಾಸಂ ಶಿವವಲ್ಲಭಂ ।
ಶಾಂಭವಸ್ಯಾಂಗಸಂಗೇನ ರುದ್ರಾಕ್ಷಾಣಾಂ ಚ ಧಾರಣಾತ್ ॥೧೯॥

ವಿಷ್ಣುಬ್ರಹ್ಮಾದಿದುರ್ದರ್ಶಂ ಮಯಾ ಪ್ರಾಪ್ತಂ ವಣಿಗ್ವರ ।
ಇತ್ಯುಕ್ತ್ವಾ ಸ ವಿಮಾನೇನ ಯಯೌ ರುದ್ರಾಕೃತಿಃ ಖರಃ ॥೨೦॥

ಚಂದ್ರಗುಪ್ತೋ ವಿಸ್ಮಿತಾಕ್ಷಃ ಸಮುದೈಕ್ಷತ ತಂ ತದಾ ।
ಪ್ರಶಸ್ಯ ತಂ ಖರಂ ತತ್ರ ತದಾ ರುದ್ರಾಕ್ಷಧಾರಿಣಂ ॥೨೧॥

ರುದ್ರಾಕ್ಷಧಾರಿಣಾಂ ಪುಣ್ಯಂ ವರ್ಣಯನ್ಮನಸಾ ವಣಿಕ್ ।
ಸಾರ್ಧೈರ್ಜಗಾಮ ದೇಶಂ ಸ್ವಂ ರುದ್ರಾಕ್ಷಕ್ರಯವಿಕ್ರಯೀ ॥೨೨॥

---

ಸಾರೂಪ್ಯವನ್ನು ಪಡೆದು, ಮೂರು ಕಣ್ಣುಗಳಿಂದಲೂ, ನೀಲಕಂಠದಿಂದಲೂ, ಗಂಗಾ, ಚಂದ್ರಕಲೆ ಇವುಗಳಿಂದಲೂ ಶೋಭಿಸಲಾರಂಭಿಸಿತು. ಇದನ್ನು ನೋಡಿ ಅಚ್ಚರಿ ಪಡುತ್ತಿದ್ದ ಚಂದ್ರಗುಪ್ತವೈಶ್ಯನೊಡನೆ ಗಣನಾಯಕನಾದ ಕತ್ತೆಯು ಹೀಗೆ ಮಾತನಾಡಿತು. ॥೧೬-೧೭॥

"ಎಲೈ ವೈಶ್ಯಶ್ರೇಷ್ಠನೇ, ಇಲ್ಲಿ ನೋಡು. ನಿನ್ನ ಸಹವಾಸದಿಂದಲೂ, ಈ ರುದ್ರಾಕ್ಷಿಯನ್ನು ಹೊತ್ತದ್ದರಿಂದಲೂ, ನನಗೆ ಈಗ ಶಿವಗಣಪದವಿಯು ಅನಾಯಾಸವಾಗಿ ಲಭಿಸಿತು. ಇದಕ್ಕೆ ಪರಮಶಾಂಭವನೆನಿಸಿದ ನಿನ್ನ ಅಂಗಸ್ಪರ್ಶ ಮತ್ತು ರುದ್ರಾಕ್ಷಿಯ ವಹನ ಇವೆರಡೇ ಮುಖ್ಯ ಕಾರಣಗಳು. ಇನ್ನು ನಾನು ಶಿವಲೋಕಕ್ಕೆ ಹೋಗುವೆನು. ಅಪ್ಪಣೆಕೊಡು" ಎಂದು ಹೇಳುತ್ತಾ ಅದು ವಿಮಾನಾರೂಢವಾಗಿ ಅಟ್ಟಹಾಸದಿಂದ ಶಿವಲೋಕಕ್ಕೆ ತೆರಳಿತು. ॥೧೮-೧೯-೨೦॥

ಅದನ್ನು ನೋಡಿ ಚಂದ್ರಗುಪ್ತನು ಆಶ್ಚರ್ಯಪಟ್ಟು, ರುದ್ರಾಕ್ಷಿಧಾರಿಗೆ ದೊರಕುವ

ಶಾಂಭವೇಭ್ಯೋ ಮುದಾ ದತ್ವಾ ರುದ್ರಾಕ್ಷಾಂಛಿವವಲ್ಲಭಾನ್
ಏಕಾನನಾದ್ಯಾನ್ ಲೋಕಾಂತಾನ್ ಸ್ವಯಂ ಸೌವರ್ಣವೇಷ್ಟಿತಾನ್ ॥೨೩॥

ದಧಾರ ಸ ವಣಿಗ್ವರ್ಯೋ ನರ್ಯಭಸ್ಮತ್ರಿಪುಂಡ್ರಧೃಕ್ ।
ತತ್ಪ್ರೇಷ್ಯಾಸ್ತತ್ಕಲತ್ರಾಣಿ ತತ್ಸುತಾ ಬಾಂಧವಾಸ್ತಥಾ ॥೨೪॥

ದಾಸೀ ದಾಸ್ಯೋ ವಾಹವೃಷಾ ರಾಸಭಾವಾಮಯಸ್ತಥಾ ।
ರುದ್ರಾಕ್ಷಧಾರಿಣಸ್ಸರ್ವೇಪ್ಯಭವನ್ ಭಸ್ಮಧಾರಿಣಃ ॥೨೫॥

ಸ ಚಂದ್ರಗುಪ್ತೋ ನಿಯತಂ ವಸನ್ ಗುಪ್ತಧನಸ್ತದಾ ।
ಕೈಲಾಸಂ ಸಮವಾಪ್ಯಾಂತೇ ಗಣತ್ವಂ ಪ್ರಾಪ ಶಾಂಕರಂ ॥೨೬॥

ಏವಂ ರುದ್ರಾಕ್ಷವೃಕ್ಷಾಣಾಂ ಬೀಜಾನಾಂ ಧಾರಣಾನ್ಮುನೇ ।
ಖರೋಽಪಿ ಚಂದ್ರಗುಪ್ತಸ್ಯ ಗಣತ್ವಂ ಪ್ರಾಪ ಶಾಂಕರಂ ॥೨೭॥

ಕಿಂ ಪುನರ್ಬ್ರಾಹ್ಮಣಾ ಭಕ್ತಾಃ ಕ್ಷತ್ರವೈಶ್ಯಾಶ್ಚ ಶೂದ್ರಕಾಃ ।
ಗೃಹಸ್ಥಾ ವರ್ಣಿನೋ ವರ್ಣ್ಯಾ ಮುನೇ ಸಂನ್ಯಾಸಿನಸ್ತಥಾ ॥೨೮॥

ರುದ್ರಾಕ್ಷಧಾರಿಣಸ್ಸರ್ವೇ ರುದ್ರಾ ಏವ ನ ಸಂಶಯಃ ॥೨೯॥

---

ಪದವಿಯನ್ನು ಮನಸ್ಸಿನಲ್ಲಿಯೇ ವರ್ಣಿಸಿ ಆನಂದಪಡುತ್ತಾ, ರುದ್ರಾಕ್ಷಕ್ರಯವಿಕ್ರಯಾದಿಗಳನ್ನು ನಡೆಸಿಕೊಂಡು ತನ್ನ ದೇಶಕ್ಕೆ ಹಿಂದಿರುಗಿದನು. ॥೨೧-೨೨॥

ಕೂಡಲೇ ತನ್ನ ನಗರಕ್ಕೆ ಬಂದು ಶಿವಪ್ರೀತಿಕರಗಳಾದ ರುದ್ರಾಕ್ಷಿಗಳನ್ನು ಶಾಂಭವರಿಗೆ ವಿಶೇಷವಾಗಿ ದಾನಮಾಡಿದನು. ಅದೂ ಅಲ್ಲದೆ ಏಕಮುಖದ ರುದ್ರಾಕ್ಷಿಗಳನ್ನು ಚಿನ್ನದ ಗೂಡಿನಲ್ಲಿರಿಸಿ ಅದನ್ನು ತಾನು ಧರಿಸಿದನು. ತನ್ನ ಮನೆಯಲ್ಲಿರುವ ಪತ್ನೀಪುತ್ರರು, ದಾಸದಾಸಿಯರು, ಕತ್ತೆ, ಎತ್ತು ಮೊದಲಾದ ಪ್ರಾಣಿಗಳು ಅವರೆಲ್ಲರೂ ಭಸ್ಮರುದ್ರಾಕ್ಷಿಗಳನ್ನು ಧರಿಸುವಂತೆ ಏರ್ಪಡಿಸಿದನು. ॥೨೩-೨೪-೨೫॥

ಆದರಿಂದಲೇ ಆ ಚಂದ್ರಗುಪ್ತನು ತನ್ನ ಜೀವನವನ್ನೆಲ್ಲಾ ಸುಗಮವಾಗಿ ಕಳೆದು ಕೊನೆಯಲ್ಲಿ ಶಿವಗಣಗಳಲ್ಲಿ ಐಕ್ಯನಾದನು. ಜೈಗೀಷವ್ಯಮಹರ್ಷಿಯೇ, ಹೀಗೆ ರುದ್ರಾಕ್ಷಸ್ಪರ್ಶಮಹಿಮೆಯಿಂದ ಚಂದ್ರಗುಪ್ತನ ಕತ್ತೆಯೂ ಶಿವಸಾಮೀಪ್ಯವನ್ನು ಪಡೆಯುವಾಗ ಬ್ರಾಹ್ಮಣಾದಿ ಚಾತುರ್ವರ್ಣ್ಯದವರೂ, ಬ್ರಹ್ಮಚರ್ಯಾದಿ ನಾಲ್ಕು

ಯಃ ಕೀಕಟೇಽಪಿ ವಿಧೃತೋತ್ತಮಭಸ್ಮಭೂಷೋ
ರುದ್ರಾಕ್ಷಬೀಜವಹನೇನ ಮೃತಿಂ ಪ್ರಯಾತಃ ।
ಸ್ಯಾಚ್ಚಂದ್ರಗುಪ್ತಖರಕೋಽಪಿ ಹಿ ವಿಂಧ್ಯಶೈಲೇ
ಶಂಭೋರ್ಗಣತ್ವಪದವೀಂ ಸಮವಾಪ್ಯ ಮುಕ್ತಃ ॥೩೦॥

ಧೃತರುದ್ರಾಕ್ಷಸರೋ ನರೋ ವಾ
ಶ್ವಪಚೋ ವಾಂತ್ಯಜ ಏವ ವಾ ದ್ವಿಜಃ ।
ಸ ಮುನೇ ಪ್ರತರೇತ ವೈಭವಂ
ಸಿತಭಸ್ಮಾಂಗಯುತಃ ಸ ಪುಣ್ಯಧೀಃ ॥೩೧॥

ಪುಣ್ಯೇತಿಹಾಸೋಯಮಯಂ ಪುರಾತನೋ
ದೇವೇನ ದೇವ್ಯೈ ಕಥಿತೋ ಮುನೇ ತದಾ ।
ತದೇತದಾಪಾದಿತಮೇತದೇವ ಮೇ
ಪುನಶ್ಶಿವೋಽಪ್ಯಾಹ ಮುದಾ ಭವಾನ್ಯೈ ॥೩೨॥

---

ಆಶ್ರಮದವರೂ ಭಸ್ಮರುದ್ರಾಕ್ಷಿಗಳನ್ನು ಧರಿಸುವುದಾದರೆ ಅವರಿಗೆ ಮುಕ್ತಿದೊರಕುವ ವಿಷಯದಲ್ಲಿ ಹೇಳತಕ್ಕುದೇನು? ॥೨೬-೨೭-೨೮-೨೯॥

ರುದ್ರಾಕ್ಷಿಯ ಬೀಜಗಳ ಮೂಟೆಯನ್ನು ಹೊತ್ತು ವಿಂಧ್ಯಾಚಲದಲ್ಲಿ ಮರಣ ಹೊಂದಿದ ಚಂದ್ರಗುಪ್ತನ ಕತ್ತೆಯೂ ಶಿವಗಣಪದವಿಯನ್ನು ಹೊಂದಿತು ಎಂದು ಹೇಳುವಾಗ ಭಸ್ಮರುದ್ರಾಕ್ಷಧಾರಿಯಾದ ವಿವೇಕಿಗೆ (ಭಕ್ತನಿಗೆ) ಮೋಕ್ಷಪ್ರಾಪ್ತಿಯಾಗುವುದರಲ್ಲಿ ಸಂದೇಹವೇನಿದೆ? ಎಂದು ಕುಮಾರಸ್ವಾಮಿಯು ಜೈಗೀಷವ್ಯ ಮುನಿಯನ್ನು ಎಚ್ಚರಿಸಿದನು. ॥೩೦॥

ನೀಚನಾಗಲಿ, ಚಂಡಾಲನಾಗಲಿ, ಬ್ರಾಹ್ಮಣನೇ ಆಗಲಿ, ಶುಭ್ರವಾದ ಭಸ್ಮವನ್ನೂ, ರುದ್ರಾಕ್ಷಿಯ ಸರವನ್ನೂ ಧರಿಸಿದರೆ ಆತನು ನಿಜವಾಗಿಯೂ ಪುಣ್ಯಾತ್ಮನೆನಿಸುವನು. ಅವನೇ ಪವಿತ್ರನು. ॥೩೧॥

ಜೈಗೀಷವ್ಯನೇ, ಈ ಇತಿಹಾಸವು ಬಹು ಪುಣ್ಯಪ್ರದವಾದುದು. ಇದನ್ನು ಸಾಕ್ಷಾತ್ ಶಂಕರನೇ ಪಾರ್ವತಿಗೆ ತಿಳಿಸಿದ್ದನು. ಆದರೂ ನನ್ನ ಮೇಲಿನ ಅಭಿಮಾನದಿಂದ ಮತ್ತೊಂದು ವೇಳೆಯಲ್ಲಿಯೂ ಶಂಕರನು ದೇವಿಗೆ ಹೇಳಿದನು. ॥೩೨॥

॥ ಶ್ರೀ ಈಶ್ವರ ಉವಾಚ ॥

ತ್ರ್ಯಕ್ಷಾಶ್ರುಪ್ರಭವಾ ಭವಂತಿ ವಿಮಲಾ ರುದ್ರಾಕ್ಷವೃಕ್ಷಾಃ ಕ್ಷಿತೌ
ದೃಷ್ಟ್ವಾ ಚಾಪ್ಯಘಶೈಲದಾರಣರದಾ ದೃಪ್ತೋರುಸದ್ವಾರಣಾಃ ।
ಪುಣ್ಯಾಪುಣ್ಯಸಮೀಹಿತಾರ್ಥಕಲನೇ ಸ್ವಾಂಗೇವ ಸದ್ಭೂಷಣಾಃ
ಶರ್ವಾಣೀರಮಣಾರ್ಚನಾಸು ನಿಯತಂ ಧಾರ್ಯಾಹಿ ಮದ್ಭೂಷಣಾಃ ॥೩೩॥

ರುದ್ರಾಕ್ಷಸ್ಮೃತಿಮಾತ್ರತೋಽಪ್ಯಘಕುಲಂ ನಶ್ಯೇತ ಪಶ್ಯನ್ನರೋ
ಮುಚ್ಯೇದೇವ ಹಿ ಸಂಸೃತೇರ್ಜನಿಜರಾರೋಗೈಃ ಸ್ಪೃಶನ್ ಮುಕ್ತಿಭಾಕ್ ।
ನಾಮೋಚ್ಚಾರಣಮಾತ್ರತೋಽತಿಕೃಪಣಃ ಪಾಣಿಂ ಕೃಪಾಣೇ ದಧತ್
ಛಿಂದ್ಯಾದೇವ ಹಿ ಪಾಪವಿದ್ರುಮವನಂ ಗೋದಾನಪುಣ್ಯಾದಿಭಾಕ್ ॥೩೪॥

ರುದ್ರಾಕ್ಷೋರುಕಿರೀಟೆ ಕುಂಡಲಧರಸ್ತ್ವಸ್ಯಾಂಗದೇ ಕಂಕಣೇ
ಮಾಲಾಭಿರ್ವರವಕ್ಷಸಾ ಚ ವಿಮಲೋ ಭೂಯಾಚ್ಛಿವೇ ಪಾವನಃ ।
ತಸ್ಯಾನುಕ್ಷಣಮೀಕ್ಷಣೇನ ಗಿರಿಶೇ ಲೋಕಸ್ಯ ಕಷ್ಟಂ ಮುದಾ
ಸಂಹೃಷ್ಟೋ ನಿತರಾಂ ಹರಾಮಿ ಸತತಂ ತತ್ಸಂಗಸಂಗಾತ್ಮನಾಂ ॥೩೫॥

---

ಪರಶಿವನ ನೇತ್ರಬಿಂದುಗಳಿಂದ ಹುಟ್ಟಿದ ಈ ರುದ್ರಾಕ್ಷಿಯ ವೃಕ್ಷಗಳು ಕೇವಲ ದರ್ಶನಮಾತ್ರದಿಂದಲೇ ಮಾನವರ ಪಾಪಶೈಲವನ್ನು ನಾಶಗೊಳಿಸುವ ಮದ್ದಾನೆಯೆಂದು ತಿಳಿಯಬೇಕು. ಇದು ಪುಣ್ಯಪಾಪಗಳನ್ನು ಹೆಚ್ಚುಕಮ್ಮಿಮಾಡುವ ಸಾಮರ್ಥ್ಯವುಳ್ಳದ್ದು. ನನ್ನನ್ನು ಅರ್ಚಿಸುವ ಸಮಸ್ತ ಭಕ್ತರೂ ನಿಯತವಾಗಿ ರುದ್ರಾಕ್ಷಾಭರಣವನ್ನು ಧರಿಸಿರಲೇಬೇಕು. ಅದೇ ಅವರಿಗೆ ಮುಕ್ತಿಪ್ರದವಾದ ಆಭರಣ.॥೩೩॥

ರುದ್ರಾಕ್ಷಿಯ ಸ್ಮರಣೆಯಿಂದಲೇ ಮಾನವರಿಗೆ ಪಾಪರಾಶಿಯು ನಿವಾರಣೆಯಾಗುವುದು. ಸಾಂಸಾರಿಕವಾದ ಜರಾರೋಗಾದಿಗಳು ನಾಶವಾಗಿ ಜೀವನದಲ್ಲಿ ಸೌಖ್ಯವು ದೊರೆಯುವುದು. ರುದ್ರಾಕ್ಷಿಯ ನಾಮೋಚ್ಚಾರಣ ಮಾತ್ರದಿಂದಲೇ ಜೀವಿಯು ಗೋದಾನಾದಿಗಳಿಗಿಂತಲೂ ಹೆಚ್ಚಿನ ಸುಕೃತವನ್ನು ಪಡೆದು, ಕೈಕತ್ತಿಯಿಂದಲೇ ಪಾಪವೆಂಬ ಮಹಾವೃಕ್ಷವನ್ನು ಕತ್ತರಿಸಿ ಮುಕ್ತಿಯನ್ನು ಪಡೆಯುವನು. ಇದು ನಿಜ. ॥೩೪॥

ರುದ್ರಾಕ್ಷಿಯ ಕಿರೀಟ, ರುದ್ರಾಕ್ಷಕುಂಡಲ, ರುದ್ರಾಕ್ಷಿಯಿಂದಲೇ ಕೈಬಳೆ, ರುದ್ರಾಕ್ಷಿಯ ಸರ ಇವುಗಳನ್ನು ಧರಿಸಿಕೊಂಡು ಸದಾಶಿವಾರ್ಚನೆಯಲ್ಲಿ ಕಾಲಕಳೆ

ಯಸ್ಮಿನ್ ಗ್ರಾಮೇ ಪುರೇ ವಾ ಧೃತವರವಿಮಲೋದಾರ ರುದ್ರಾಕ್ಷಭೂಷೋ
ತಿಷ್ಠೇತ್ತತ್ರ ಸ ಪಾತಕಾಂತಕಭಯಂ ದುಃಖಂ ಕುತಸ್ತತ್ರನೌ ।
ತತ್ಕ್ಷೇತ್ರಂ ವಿಮಲಂ ತದೇವ ಹಿ ಶಿವಾಗಾರಂ ವರಂ ಶಾಂಭವಂ
ದೇಹಂ ತದ್ಧೃದಯಾಂಬುಜೇ ಗಿರಿಜಯಾ ಮದ್ವಾಸ ಇಷ್ಟಸ್ಸದಾ ॥೩೬॥

ಯೋ ನಿತ್ಯಂ ಭಸಿತತ್ರಿಪುಂಡ್ರರಹಿತೋ ರುದ್ರಾಕ್ಷಮಾಲೋಜ್ಝಿತ
ಸ್ತದ್ದೃಷ್ಟಂ ಸಮಲಂ ತ್ಯಜಂತಿ ವಿಮಲಂ ಅನ್ನಂ ಚ ನೀರಂ ಫಲಂ ।
ಸೋ ನಿತ್ಯಂ ಶವಸೂತಕೀ ಪರಮಮೋ ಪಾಪಾಹಿದಷ್ಟೋ ನರೋ
ನಿತ್ಯಂ ತನ್ಮುಖವೀಕ್ಷಣೇನ ಗಿರಿಜೇ ಸೂರ್ಯೋ ನಿರೀಕ್ಷ್ಯೋ ಜನೈಃ ॥೩೭॥

ಇತಿ ಶ್ರೀ ಶಿವರಹಸ್ಯೇ ಈಶ್ವರಾಖ್ಯೇ ದಶಮಾಂಶೇ ರುದ್ರಾಕ್ಷಮಾಹಾತ್ಮ್ಯೇ
ಚಂದ್ರಗುಪ್ತಸ್ಯ ಖರಸ್ಯ ಶಿವಗಣತ್ವ ಪ್ರಾಪ್ತಿವರ್ಣನಂ ನಾಮ
ದ್ವಾವಿಂಶೋಧ್ಯಾಯಃ

---

ಯುವ ನನ್ನ ಭಕ್ತನ ದರ್ಶನದಿಂದಲೇ ಮಾನವರ ಕಷ್ಟಪರಂಪರೆಗಳು ನಾಶವಾಗುವುವು. ಅಂತಹ ನನ್ನ ಭಕ್ತನ ಸಹವಾಸದಿಂದಲೇ ಸಕಲ ವಿಧವಾದ ಕಷ್ಟವೂ ಪರಿಹಾರವಾಗುವಂತೆ ನಾನು ಅವರಿಗೆ ಅನುಗ್ರಹಿಸುವೆನು. ॥೩೫॥

ಯಾವ ಪ್ರದೇಶದಲ್ಲಿ ರುದ್ರಾಕ್ಷಭಸ್ಮಾದಿಗಳ ಧಾರಣೆಯಿಂದ ಸದಾಚಾರಸಂಪನ್ನನಾಗಿರುವ ಮಾನವನು ಜೀವಿಸುವನೋ, ಆ ದೇಶದಲ್ಲಿ ಯಾರಿಗೂ ಯಾವ ಪಾಪದಿಂದಾಗಲಿ, ಯಮನಿಂದಲೇ ಆಗಲಿ ಭಯವಿರುವುದಿಲ್ಲ. ಮತ್ತು ಅಲ್ಲಿರುವ ಜನರಿಗೆ ದುಃಖದ ಸಂಬಂಧವೇ ತೋರಲಾರದು. ಆ ನಗರವೇ ದಿವ್ಯಕ್ಷೇತ್ರವೆನಿಸುವುದು. ಆ ನನ್ನ ಭಕ್ತನ ಮನೆಯೇ ಶಿವಾಲಯಸದೃಶವಾಗುವುದು. ಅವನ ಹೃದಯಕಮಲವೇ ನನ್ನ ಪ್ರೀತಿಪಾತ್ರವಾದ ನೆಲೆವೀಡಾಗುವುದು. ಎಲೌ ದೇವಿಯೇ ಅಷ್ಟು ಪಾವಿತ್ರ್ಯವು ನನ್ನ ಭಕ್ತನಿಗೆ ರುದ್ರಾಕ್ಷಿಯ ಭೂಷಣದಿಂದ ಲಭಿಸುವುದರಲ್ಲಿ ಸಂದೇಹವಿಲ್ಲ. ॥೩೬॥

ಎಲೌ ದೇವಿಯೇ, ಯಾವನು ಶುಭ್ರಭಸ್ಮತ್ರಿಪುಂಡ್ರವನ್ನು ಧರಿಸದೆ, ರುದ್ರಾಕ್ಷಮಾಲೆಯಿಂದಲಂಕೃತನಾಗದೆ ಪಾಪಿಯೆನಿಸುವನೋ, ಅವನಿಂದ ದೃಷ್ಟವಾದ ಶುದ್ಧವಾದ ಅನ್ನಪಾನಾದಿಗಳು, ಫಲಾದಿಗಳು ಮಲಸಹಿತವಾದವುಗಳಂತೆ ದೂಷ್ಯಗಳೆನಿಸುವುವು. ಅಲ್ಲದೆ ಆತನು ನಿತ್ಯವೂ ಮೃತಾಶೌಚವಿಶಿಷ್ಟನಂತೆ ಅಪವಿತ್ರನೆನಿಸು

ವನು. ಅಂತಹವನ ಮುಖವನ್ನು ಎಂದಿಗೂ ನೋಡಬಾರದು. ಅಕಸ್ಮಾತ್ತಾಗಿ ಒಂದುವೇಳೆ ನೋಡಿದರೂ, ಆಸ್ತಿಕರಾದವರು ಕೂಡಲೆ ಸೂರ್ಯಬಿಂಬವನ್ನು ದರ್ಶನ ಮಾಡಿ ಆ ಪಾಪವನ್ನು ಕಳೆದುಕೊಳ್ಳಬೇಕು. ಅಂತಹವನ ದರ್ಶನದಿಂದ ಮಾನವರಿಗೆ ಅನೇಕ ಪಾಪಸಂಘಟನೆಯಾಗುವುದರಲ್ಲಿ ಸಂಶಯವಿಲ್ಲ ಎಂದು ಪರಶಿವನು ಪಾರ್ವತಿಗೆ ಹೇಳಿದ ವಿಷಯವನ್ನೇ ಕುಮಾರಸ್ವಾಮಿಯು ಜೈಗೀಷವ್ಯಮುನಿಗೆ ವಿವರಿಸಿ ಹೇಳಿದನು. ||೩೭||

ಇಲ್ಲಿಗೆ ಶ್ರೀಶಿವರಹಸ್ಯದ ಈಶ್ವರನಾಮಕವಾದ ಹತ್ತನೆಯ ಅಂಶದ ಪೂರ್ವಾರ್ಧದಲ್ಲಿ
ರುದ್ರಾಕ್ಷಿಯ ಮಹಿಮೆ ಮತ್ತು ಚಂದ್ರಗುಪ್ತನು ಮತ್ತು ಅವನ ಕತ್ತೆಯು
ಶಿವಗಣಪದವಿಯನ್ನು ಪಡೆದ ಕಥೆಯನ್ನು ತಿಳಿಸುವ
ಇಪ್ಪತ್ತೆರಡನೆಯ ಅಧ್ಯಾಯವು ಮುಗಿದುದು.

---

॥ ಶ್ರೀಃ ॥

॥ ಶ್ರೀ ಶಿವಾಯನಮಃ ॥

# ಅಥ ಶ್ರೀಶಿವರಹಸ್ಯೇ

## ಈಶಾನಾಖ್ಯೇ

## ದಶಮಾಂಶಪೂರ್ವಾರ್ಧೇ

## ತ್ರಯೋವಿಂಶೋಽಧ್ಯಾಯಃ

॥ ಈಶ್ವರ ಉವಾಚ ॥

ಕಸ್ಮಾಜ್ಜಾತಂ ತು ಕಿಂ ನಾಮ ಕಥಂ ವಾ ಧಾರ್ಯತೇ ನರೈಃ ।
ನ ಲೇಭೇಥ ಮುಖಾನ್ಯತ್ರ ಕೈರ್ಮಂತ್ರೈಃ ಕಥಯಸ್ವ ಮೇ ॥೧॥

ದಿವ್ಯವರ್ಷಸಹಸ್ರಾಣಿ ಚಕ್ಷುರುನ್ಮೀಲಿತಂ ಮಯಾ ।
ಪುಟಾಭ್ಯಾಂ ಚಾರುಲಕ್ಷ್ಮಾಭ್ಯಾಂ ಪತಿತ್ವಾ ಜಲಬಿಂದವಃ ॥೨॥

ತತ್ರಾಶ್ರುಬಿಂದವೋ ಜಾತಾ ಮಹಾರುದ್ರಾಕ್ಷವೃಕ್ಷಕಾಃ ।
ಸ್ಥಾವರತ್ವಮನುಪ್ರಾಪ್ಯ ಭಕ್ತಾನುಗ್ರಹಕಾರಣಾತ್ ॥೩॥

---

## ಇಪ್ಪತ್ತಮೂರನೆಯ ಅಧ್ಯಾಯ

ಪಾರ್ವತಿಯು ಪರಶಿವನನ್ನು ಕುರಿತು ' ಸ್ವಾಮಿ, ಆ ರುದ್ರಾಕ್ಷಿಗಳು ಏತಕ್ಕಾಗಿ ಹೇಗೆ ಹುಟ್ಟಿದುವು? ಮನುಷ್ಯರು ಅದನ್ನು ಹೇಗೆ ಧರಿಸಬೇಕು? ವದನಗಳಿಲ್ಲದ ರುದ್ರಾಕ್ಷಿಗಳು ದೊರೆತರೆ ಅದನ್ನು ಯಾವ ಮಂತ್ರೋಚ್ಚಾರದಿಂದ ಧರಿಸಬೇಕು? ಇದನ್ನು ದಯೆಯಿಟ್ಟು ನನಗೆ ತಿಳಿಸಬೇಕು ' ಎಂದು ಪ್ರಾರ್ಥಿಸಲು, ಆಗ ಶಂಕರನು ದೇವಿಯೊಡನೆ ಹೀಗೆಂದನು. " ದೇವಿಯೇ, ನಾನು ಸಾವಿರಾರು ವರ್ಷಪರ್ಯಂತ ನನ್ನ ಕಣ್ಣುಗಳನ್ನು ಒಂದೇ ಸಮನೆ ತೆಗೆದುಕೊಂಡಿದ್ದೆನು, ಆಗ ನನ್ನ ಕಣ್ಣಿನಿಂದ ಜಲಬಿಂದುಗಳು ಧಾರಾಕಾರವಾಗಿ ಭೂಲೋಕಕ್ಕೆ ಬೀಳಲಾರಂಭಿಸಿದುವು. ॥೧-೨॥

ಆ ಅಶ್ರುಬಿಂದುಗಳು ನೆಲಕ್ಕೆ ಬಿದ್ದೊಡನೆಯೇ ಸ್ಥಿರಭಾವವನ್ನು ಹೊಂದಿ ಭಕ್ತರನ್ನು ಉದ್ಧರಿಸಲು ರುದ್ರಾಕ್ಷವೃಕ್ಷಗಳಾಗಿ ನಿಂತವು. ಈ ರುದ್ರಾಕ್ಷಗಳನ್ನು ರಾತ್ರಿ

ಧೃತ್ವಾ ರಾತ್ರೌ ದಿವಾ ಪಾಪಂ ದಿವಾ ರಾತ್ರಿಕೃತಂ ಹರೇ ।
ಲಕ್ಷಂ ತು ದರ್ಶನಾತ್ಪುಣ್ಯಂ ಕೋಟಿಸ್ತತ್ಸ್ಪರ್ಶನಾತ್ಫಲಂ ॥೪॥

ತತಃ ಕೋಟಿಶತಂ ಪುಣ್ಯಂ ಲಭತೇ ಧಾರಣಾನ್ನರಃ ।
ಲಕ್ಷಕೋಟಿಸಹಸ್ರಾಣಿ ಲಕ್ಷಕೋಟಿಶತಾನಿ ಚ ॥೫॥

ತಜ್ಜಪಾಲ್ಲಭತೇ ಪುಣ್ಯಂ ನರೋ ರುದ್ರಾಕ್ಷಧಾರಣಾತ್ ।
ರುದ್ರಾಕ್ಷಾಣಾಂ ತು ರುದ್ರಾಣಾಂ ಧಾರಣೇ ಸ್ಯಾನ್ಮಹತ್ಫಲಂ ॥೬॥

ಧಾತ್ರೀಫಲಪ್ರಮಾಣಂ ಯಚ್ಛ್ರೇಷ್ಠಮೇತದುದಾಹೃತಂ ।
ಬದರೀಫಲಮಾತ್ರಂ ತು ಮಧ್ಯಮಂ ಪ್ರೋಚ್ಯತೇ ಬುಧೈಃ ॥೭॥

ಅಧಮಂ ಚಣಕಮಾತ್ರಂ ಸ್ಯಾತ್ಪ್ರಕ್ರಿಯೈಷಾ ಮಯೋಚ್ಯತೇ ।
ಬ್ರಾಹ್ಮಣಾಃ ಕ್ಷತ್ರಿಯಾ ವೈಶ್ಯಾಃ ಶೂದ್ರಾಶ್ಚೈವ ಶಿವಾಜ್ಞಯಾ ॥೮॥

ವೃಕ್ಷಾ ಜಾತಾಃ ಪೃಥಿವ್ಯಾಂತು ತಜ್ಜಾತೀಯಾಶ್ಶುಭಾಕ್ಷಕಾಃ ।
ಶ್ವೇತಾಸ್ತು ಬ್ರಾಹ್ಮಣಾ ಜ್ಞೇಯಾಃ ಕ್ಷತ್ರಿಯಾ ರಕ್ತವರ್ಣಕಾಃ ॥೯॥

---

ಯಲ್ಲಿ ಧರಿಸುವುದರಿಂದ ಮಾನವರು ಹಗಲಿನ ಪಾಪವನ್ನೂ, ಹಗಲು ಧರಿಸುವುದರಿಂದ ರಾತ್ರಿಕೃತವಾದ ಪಾಪಗಳನ್ನೂ ಕಳೆದುಕೊಳ್ಳಬಹುದು. ರುದ್ರಾಕ್ಷಿಯ ದರ್ಶನದಿಂದ ಲಕ್ಷ ಸಂಖ್ಯೆಯ ಪುಣ್ಯವನ್ನೂ, ಸ್ಪರ್ಶದಿಂದ ಕೋಟಿಸಂಖ್ಯೆಯ ಸುಕೃತವನ್ನೂ, ಧಾರಣೆಯಿಂದ ನೂರುಕೋಟಿಸಂಖ್ಯೆಯ ಸತ್ಫಲವನ್ನೂ, ಅದರ ಸಹಾಯದಿಂದ ಮಂತ್ರಜಪಮಾಡಿದರೆ ಕೋಟ್ಯಂತರರೀತಿಯ ಸುಕೃತವನ್ನೂ ಪಡೆಯಬಹುದು. ॥೩-೪-೫॥

ರುದ್ರಾಕ್ಷಿಯನ್ನು ಧರಿಸಿಕೊಂಡು ಜಪಮಾಡುವವರಿಗೆ ವಿಶೇಷ ಪುಣ್ಯವುಂಟು. ರುದ್ರಾಕ್ಷಿಗಳನ್ನು ಶಿವಲಿಂಗಗಳಿಗೆ ಧರಿಸುವುದೂ ಪುಣ್ಯಕರವು. ನೆಲ್ಲಿಕಾಯಿಗಾತ್ರದ ರುದ್ರಾಕ್ಷಿಯು ಉತ್ತಮವೆಂದೂ, ಎಲಚೀಹಣ್ಣಿನ ಗಾತ್ರದ್ದು ಮಧ್ಯಮವೆಂದೂ, ಕಡಲೆಕಾಳಿನಷ್ಟು ದಪ್ಪದ ರುದ್ರಾಕ್ಷಿಯು ಅಧಮವೆಂದೂ ನನ್ನ ಅಭಿಪ್ರಾಯ. ಅದರಲ್ಲಿಯೂ ಬ್ರಾಹ್ಮಣಾದಿ ಜಾತೀಯ ಜನರು ವರ್ಣಭೇದದಿಂದ ರುದ್ರಾಕ್ಷಿಯನ್ನು ಧರಿಸಿಕೊಳ್ಳಬೇಕು. ॥೬-೭-೮॥

ಹುಳುಕು ಮೊದಲಾದುದಿಲ್ಲದೆ ಶುಭ್ರವಾಗಿ ಬೆಳ್ಳಗಿರುವ ರುದ್ರಾಕ್ಷಿಯು ಬ್ರಾಹ್ಮಣನಿಗೂ, ಕೆಂಪುಬಣ್ಣದ್ದು ಕ್ಷತ್ರಿಯನಿಗೂ, ಹಳದಿಯ ವರ್ಣದ್ದು ವೈಶ್ಯರಿಗೂ,

ಪೀತಾನ್ವೈಶ್ಯಸ್ತು ವಿಜ್ಞೇಯಾ ಕೃಷ್ಣಾಶ್ಶೂದ್ರಾ ಉದಾಹೃತಾಃ ।
ಬ್ರಾಹ್ಮಣೋ ಬಿಭೃಯಾಚ್ಛ್ವೇತಾನ್ ರಕ್ತಾನ್ ರಾಜಾತು ಧಾರಯೇತ್ ॥೧೦॥

ಪೀತಾನ್ವೈಶ್ಯಸ್ತು ಬಿಭೃಯಾತ್ಕೃಷ್ಣಾನ್ ಶೂದ್ರಾಸ್ತು ಧಾರಯೇತ್ ।
ಶುಭ್ರಾಃ ಸ್ನಿಗ್ಧಾ ದೃಢಾಃ ಸ್ಥೂಲಾಃ ಕಂಟಕೈಸ್ಸಂಯುತಾಶ್ಶುಭಾಃ ॥೧೧॥

ಕ್ರಿಮಿದಷ್ಟಂ ಛಿನ್ನಭಿನ್ನಾನ್ ಕಂಟಕಾಂಧಾನಮೇವ ಚ ।
ವ್ರಣಯುಕ್ತಂ ಕರ್ಮಕೃತ್ತಂ ಷಡ್ರುದ್ರಾಕ್ಷಾಣಿ ವರ್ಜಯೇತ್ ॥೧೨॥

ಸ್ವಯಮೇವ ಕೃತಂ ದ್ವಾರಂ ರುದ್ರಾಕ್ಷಂ ಸ್ಯಾದಿಹೋತ್ತಮಂ ।
ಯತ್ತು ಪೌರುಷಯತ್ನೇನ ಕೃತಂ ತನ್ಮಧ್ಯಮಂ ಭವೇತ್ ॥೧೩॥

ಸಮಾನ್ ಸ್ನಿಗ್ಧಾನ್ ದೃಢಾನ್ ಸರ್ವಾನ್ ಕ್ಷೌಮಸೂತ್ರೇಣ ಸಂಯುತಾನ್ ।
ಧಾರಯೇತ್ಸರ್ವಗಾತ್ರೇಷು ಸಮಾಖ್ಯಾನಿ ವಿಚಕ್ಷಣಃ ॥೧೪॥

ನಿಕಷೇ ಹೇಮರೇಖೇವ ಯಸ್ಯ ರೇಖಾ ಪ್ರದೃಶ್ಯತೇ ।
ತದಕ್ಷಮುತ್ತಮಂ ವಿದ್ಯಾತ್ತದ್ಧಾರ್ಯಂ ಶಿವಪೂಜಕೈಃ ॥೧೫॥

---

ಕಪ್ಪುರುದ್ರಾಕ್ಷಿಗಳು ಶೂದ್ರನಿಗೂ ಉಕ್ತವಾಗಿವೆ. ರುದ್ರಾಕ್ಷಿಯ ವೃಕ್ಷಗಳೂ ಕೂಡ ವರ್ಣಾನುಸಾರವಾಗಿ ಆಯಾ ಜಾತಿಯ ಹೆಸರನ್ನು ಪಡೆಯುತ್ತವೆ. ಅದರಲ್ಲಿ ದಪ್ಪವಾಗಿ, ಟೊಳ್ಳಿಲ್ಲದೆ ಮುಳ್ಳುಗಳಿಂದ ಕೂಡಿದ ರುದ್ರಾಕ್ಷಿಗಳು ಅತ್ಯುತ್ತಮವಾದವುಗಳು. ॥೯-೧೦॥

ಹುಳುಹೊಡೆದದ್ದು, ಒಡೆದದ್ದು, ಸೀಳಿದ್ದು, ಮುಳ್ಳಿಲ್ಲದ್ದು, ಏಟುಬಿದ್ದಿದ್ದು, ಕೃತ್ರಿಮವಾಗಿ ಮಾಡಿದ್ದು, ಈ ಆರುವಿಧದ ರುದ್ರಾಕ್ಷಿಗಳನ್ನೂ ವರ್ಜಿಸಬೇಕು. ರುದ್ರಾಕ್ಷಿಯು ಸ್ವಯಂ ರಂಧ್ರವುಳ್ಳದ್ದಾದರೆ ಅದು ಉತ್ತಮವೆನಿಸುವುದು. ಕೃತ್ರಿಮವಾದ ಅಂದರೆ ಪ್ರಯತ್ನದಿಂದ ಮಾಡಿದ ರಂಧ್ರವುಳ್ಳದ್ದಾದರೆ, ಅದು ಮಧ್ಯಮವಾಗುವುದು. ಅದು ಧಾರಣೆಗೆ ಅಷ್ಟು ಶ್ರೇಷ್ಠವಲ್ಲ. ॥೧೨-೧೩॥

ಒಂದೇ ಸಮನಾಗಿ, ತೂಕವಾಗಿ, ಗಟ್ಟಿಯಾಗಿರುವ ರುದ್ರಾಕ್ಷಿಗಳನ್ನು ರೇಷ್ಮೆ ದಾರದಲ್ಲಿ ಪೋಣಿಸಿ ಸರ್ವಾವಯವಗಳಿಗೂ ಧರಿಸಿಕೊಳ್ಳಬೇಕು. ಒರೆಗಲ್ಲಿನ ಮೇಲೆ ರುದ್ರಾಕ್ಷಿಯನ್ನುಜ್ಜಿದರೆ ಚಿನ್ನದಬಣ್ಣವು ತೋರಿಬರಬೇಕು. ಅದು ಶ್ರೇಷ್ಠವಾದ ರುದ್ರಾಕ್ಷಿಯೆನಿಸುವುದು. ಶಿವಾರ್ಚಕರು ಅಂತಹುದನ್ನೇ ಧರಿಸಬೇಕು. ॥೧೪-೧೫॥

ಶಿಖಾಯಾಮೇಕರುದ್ರಾಕ್ಷಂ ತ್ರಿಶತಂ ಶಿರಸಾ ವಹೇತ್ ।
ಷಟ್ ಶತಂ ಚ ಗಲೇ ದದ್ಯಾದ್ಬಾಹ್ವೋರ್ದ್ವಾದಶ ಧಾರಯೇತ್ ॥೧೬॥

ಮಣಿಬಂಧೇತು ತಾವಂತಿ ಸ್ಕಂಧೇ ಪಂಚಶತಂ ವಹೇತ್ ।
ಅಷ್ಟೋತ್ತರಶತಂ ಮಾಲಾಮುಪವೀತಂ ಪ್ರಕಲ್ಪಯೇತ್ ॥೧೭॥

ದ್ವಿಸರಂ ತ್ರಿಸರಂ ವಾಪಿ ಸರಾಣಾಂ ಪಂಚಕಂ ತು ವಾ ।
ದ್ವಾತ್ರಿಂಶಚ್ಚೈವ ರುದ್ರಾಕ್ಷಾನ್ ಬಿಭೃಯಾತ್ಕಂಠದೇಶತಃ ॥೧೮॥

ಮುಕುಟೇ ಕುಂಡಲೇ ಚೈವ ಕರ್ಣಿಕಾಹಾರಕೇಷು ಚ ।
ಕೇಯೂರಕಟಕೇ ಚೈವ ಕುಕ್ಷಿಬಂಧೇ ವಿಶೇಷತಃ ॥೧೯॥

ಛನ್ನವೀತಿಸದಾಕಾಲಂ ರುದ್ರಾಕ್ಷಾನ್ ಧಾರಯೇನ್ನರಃ ।
ತ್ರಿಶತಂ ತ್ವಧಮಂ ಪಂಚ ಶತಂ ಮಧ್ಯಮಮುಚ್ಯತೇ ॥೨೦॥

ಸಹಸ್ರಮುತ್ತಮಂ ಪ್ರೋಕ್ತಮೇವಂ ಭೇದೇನ ಧಾರಯೇತ್ ।
ಶಿರಸೀಶಾನಮಂತ್ರೇಣ ಕಂಠೇ ತತ್ಪುರುಷೇಣ ಚ ॥೨೧॥

---

ಶಿಖೆಯಲ್ಲಿ ಒಂದು ರುದ್ರಾಕ್ಷಿಯನ್ನೂ, ತಲೆಯಲ್ಲಿ ಮುನ್ನೂರು ರುದ್ರಾಕ್ಷಿಗಳನ್ನೂ, ಕಂಠದಲ್ಲಿ ಆರುನೂರು, ಎರಡು ತೋಳುಗಳಿಗೂ ಹನ್ನೆರಡು ರುದ್ರಾಕ್ಷಿಗಳನ್ನೂ, ಮುಂಗೈಗಳಿಗೂ ಅಷ್ಟೇ ಸಂಖ್ಯೆಯಲ್ಲಿಯೇ, ಹೆಗಲಿನ ಮೇಲೆ ಐದುನೂರನ್ನೂ ಧರಿಸಬಹುದು. ನೂರೆಂಟು ರುದ್ರಾಕ್ಷಿಗಳಿಂದ ಸರವನ್ನು ಮಾಡಿಕೊಂಡು ಉಪವೀತಾಕಾರದಲ್ಲಿ ಧರಿಸಬೇಕು. ॥೧೬-೧೭॥

ಎರಡು, ಮೂರು, ಅಥವಾ ಐದು ರುದ್ರಾಕ್ಷಿಯ ಸರಗಳನ್ನು ಧರಿಸಬಹುದು. ಕಂಠದೇಶಕ್ಕೆ ಮೂವತ್ತೆರಡು ರುದ್ರಾಕ್ಷಿಗಳ ಸರವನ್ನು ಮಾಲಾಕಾರದಲ್ಲಿ ಧರಿಸಬೇಕು. ಕಿರೀಟ, ಕುಂಡಲ, ಕಂಠೀಹಾರ, ಕೈಬಳೆ, ತೋಳುಬಳೆ, ಉದರಭಾಗ ಇವುಗಳಲ್ಲಿ ರುದ್ರಾಕ್ಷಿಯನ್ನು ಅಡಗಿಸಿಟ್ಟು ಒಡವೆಯನ್ನು ಮಾಡಿಕೊಳ್ಳಬೇಕು. ಒಟ್ಟಿನಲ್ಲಿ ರುದ್ರಾಕ್ಷಿಗಳ ಸಂಖ್ಯೆಯು ಮುನ್ನೂರಾದರೆ ಅಧಮವೆಂದೂ, ಐದುನೂರು ಮಧ್ಯಮವೆಂದೂ, ಸಹಸ್ರರುದ್ರಾಕ್ಷಧಾರಣೆಯು ಶಿವಾರಾಧಕನಿಗೆ ಉತ್ತಮವೆಂದೂ ಹೇಳಲ್ಪಟ್ಟಿದೆ. ॥೧೮-೧೯-೨೦॥

'ಈಶಾನಸ್ಸರ್ವದೇವಾನಾಂ' ಎಂಬ ಮಂತ್ರದಿಂದ ಶಿರಸ್ಸಿನಲ್ಲಿಯೂ,

ಅಘೋರೇಣ ಗಲೇ ಧಾರ್ಯಂ ತೇನೈವ ಹೃದಯೇಽಪಿ ಚ ।
ಅಘೋರಬೀಜಮಂತ್ರೇಣ ಕರಯೋರ್ಧಾರಯೇತ್ಸುಧೀಃ ॥೨೨॥

ಪಂಚಾಶದಕ್ಷಗ್ರಥಿತಾನ್ ವ್ಯೋಮವ್ಯಾಪೀತಿ ಚೋದರೇ ।
ಪಂಚಬ್ರಹ್ಮಭಿರಂಗೈಶ್ಚ ತ್ರಿಮಾಲಾಂ ಪಂಚ ಸಪ್ತ ಚ ॥೨೩॥

ಅಥವಾ ಮೂಲಮಂತ್ರೇಣ ಸರ್ವಾಣ್ಯಕ್ಷಾಣಿ ಧಾರಯೇತ್ ।
ಏಕವಕ್ತ್ರಂ ತು ರುದ್ರಾಕ್ಷಂ ಪರತತ್ತ್ವಸ್ವರೂಪಕಂ ॥೨೪॥

ತದ್ಧಾರಣಾತ್ಪರೇ ತತ್ತ್ವೇ ಲೀಯತೇ ವಿಜಿತೇಂದ್ರಿಯಃ ।
ದ್ವಿವಕ್ತ್ರಂ ತು ಮುನಿಶ್ರೇಷ್ಠ ಅರ್ಧನಾರೀಶ್ವರೋಭವೇತ್ ॥೨೫॥

ಧಾರಣಾದರ್ಧನಾರೀಶಃ ಪ್ರೀಯತೇ ತಸ್ಯ ನಿತ್ಯಶಃ ।
ತ್ರಿವಕ್ತ್ರಮನಲಸ್ಸಾಕ್ಷಾತ್ ಸ್ತ್ರೀಹತ್ಯಾಂ ದಹತಿ ಕ್ಷಣಾತ್ ॥೨೬॥

ತ್ರಿಮುಖಂ ಚೈವ ರುದ್ರಾಕ್ಷಮಗ್ನಿತ್ರಯಸ್ವರೂಪಕಂ ।
ತದೇವ ಹಿ ಪರಂ ಬ್ರಹ್ಮ ನರಹತ್ಯಾಂ ವ್ಯಪೋಹತಿ ॥೨೭॥

---

'ತತ್ಪುರುಷಾಯವಿದ್ಮಹೇ' ಎಂಬ ಶಿವಗಾಯತ್ರಿಯಿಂದ ಕಂಠದಲ್ಲಿಯೂ, 'ಅಘೋರೇಭ್ಯಃ' ಎಂಬ ಮಂತ್ರೋಚ್ಚಾರಣೆಯಿಂದ ಕಂಠ ಮತ್ತು ಹೃದಯದಲ್ಲಿಯೂ, ಮೂಲಮಂತ್ರದಿಂದ ಎರಡು ಕೈಗಳಲ್ಲಿಯೂ ರುದ್ರಾಕ್ಷಿಗಳನ್ನು ಧರಿಸಬೇಕು. ಐವತ್ತು ರುದ್ರಾಕ್ಷಿಗಳಿಂದ ಕೂಡಿದ ಸರವನ್ನು ವ್ಯೋಮವ್ಯಾಪಿಯಾದ ಪರಶಿವ ಸ್ವರೂಪವೆಂದು ಉದರಭಾಗದಲ್ಲಿ ಧರಿಸಬೇಕು. ಸದ್ಯೋಜಾತಾದಿ ಐದು ಋಕ್ಕುಗಳಿಂದ ಮೂರು, ಐದು, ಏಳು ರುದ್ರಾಕ್ಷಮಾಲೆಗಳನ್ನು ಧರಿಸಬಹುದು. ಅಥವಾ ಎಲ್ಲ ರುದ್ರಾಕ್ಷಮಾಲಾಧಾರಣೆಗೆ ಶಿವಪಂಚಾಕ್ಷರೀಮಂತ್ರವನ್ನೇ ಯಾವಾಗಲೂ ಬಳಸಬಹುದು. ॥೨೧-೨೨-೨೩॥

ರುದ್ರಾಕ್ಷಿಗಳಲ್ಲಿ ಒಂದು ಮುಖವುಳ್ಳದ್ದು ಪರಬ್ರಹ್ಮಸ್ವರೂಪವಾದದ್ದು. ಅದರ ಧಾರಣೆಯಿಂದ ಮಾನವನು ಜಿತೇಂದ್ರಿಯನಾಗಿ ಪರಬ್ರಹ್ಮನಲ್ಲಿ ಲೀನನಾಗುವನು. ಎರಡು ಮುಖವುಳ್ಳ ರುದ್ರಾಕ್ಷಿಯು ಅರ್ಧನಾರೀಶ್ವರಸ್ವರೂಪವು. ಅದನ್ನು ಧರಿಸುವುದರಿಂದ ಭಕ್ತನು ಶಿವಪ್ರಿಯನಾಗುವನು. ಮೂರು ಮುಖಗಳ ರುದ್ರಾಕ್ಷಿಯು

ಚತುರ್ಮುಖಂ ತು ರುದ್ರಾಕ್ಷಂ ಪಿತಾಮಹಸ್ವರೂಪಕಂ ।
ತಸ್ಯ ಧಾರಣಮಾತ್ರೇಣ ಸಂತುಷ್ಯತಿ ಸದಾಶಿವಃ ॥೨೮॥

ಪಂಚವಕ್ತ್ರಂ ಸ್ವಯಂ ರುದ್ರಃ ಕಾಲಾಗ್ನಿರ್ನಾಮ ನಾಮತಃ ।
ಅಗಮ್ಯಾಗಮನಂ ಚೈವ ಅಭಕ್ಷ್ಯಸ್ಯ ಚ ಭಕ್ಷಕಃ ॥೨೯॥

ಮುಚ್ಯತೇ ಸರ್ವಪಾಪೇಭ್ಯಃ ಪಂಚವಕ್ತ್ರಸ್ಯ ಧಾರಣಾತ್ ।
ಷಡ್ವಕ್ತ್ರಮಪಿ ರುದ್ರಾಕ್ಷಂ ಕಾರ್ತಿಕೇಯಾಧಿದೈವತಂ ॥೩೦॥

ವಿನಾಯಕಾಧಿದೈವಂ ಚ ಪ್ರವದಂತಿ ಮನೀಷಿಣಃ ।
ಸಪ್ತವಕ್ತ್ರಂ ತು ರುದ್ರಾಕ್ಷಂ ಸಪ್ತಮಂ ನಿಧಿದೈವತಂ ॥೩೧॥

ಸಪ್ತಾಶ್ವದೈವತಂ ಚೈವ ನಾರೀಸಪ್ತಕದೈವತಂ ।
ತದ್ಧಾರಣಾನ್ಮಹಾಶ್ರೀಸ್ಸ್ಯಾನ್ಮಹದಾರೋಗ್ಯಮುತ್ತಮಂ ॥೩೨॥

ಮಹಾವಿಜ್ಞಾನಸಂಪತ್ತಿಃ ಶುಚಿರ್ಧಾರಯತಶ್ಚನೈಃ ।
ಅಷ್ಟವಕ್ತ್ರಂ ತು ರುದ್ರಾಕ್ಷಮಷ್ಟಮೂರ್ತ್ಯಧಿದೈವತಂ ॥೩೩॥

---

ಅಗ್ನಿತ್ರಯಸ್ವರೂಪವಾದದ್ದು. ಸ್ತ್ರೀಪುರುಷ ಹತ್ಯಾರೂಪವಾದ ಮಹಾಪಾಪವನ್ನು ಸಹ ಹೋಗಲಾಡಿಸುವ ಸಾಮರ್ಥ್ಯವು ಆ ರುದ್ರಾಕ್ಷಿಗುಂಟು. ॥೨೪-೨೫-೨೬-೨೭॥

ನಾಲ್ಕು ಮುಖದ ರುದ್ರಾಕ್ಷಿಯು ಬ್ರಹ್ಮಸ್ವರೂಪವು. ಅದನ್ನು ಧರಿಸಿದರೆ ಸದಾಶಿವನು ತೃಪ್ತನಾಗುವನು. ಐದು ಮುಖದ್ದು ಸಾಕ್ಷಾತ್ಪರಶಿವಸ್ವರೂಪವು. ಅದಕ್ಕೆ ಕಾಲಾಗ್ನಿ ಎಂದು ಹೆಸರು. ಅಗಮ್ಯಾಗಮನ, ಅಭಕ್ಷ್ಯಭಕ್ಷಣ ಮುಂತಾದ ಮಹಾಪಾಪಗಳು ಈ ಐದುಮೊಗದ ರುದ್ರಾಕ್ಷಧಾರಣೆಯಿಂದ ನಾಶವಾಗುವುವು. ॥೨೮-೨೯॥

ಆರುಮುಖದ ರುದ್ರಾಕ್ಷಿಯು, ಷಣ್ಮುಖ ಮತ್ತು ಗಣಪತಿ ದೇವತಾ ಸ್ವರೂಪವು. ಏಳು ಮೊಗದವುಗಳು, ಸಪ್ತನಿಧಿ, ಸಪ್ತಾಶ್ವ, ಸಪ್ತಮಾತೃಕೆಯರು ಈ ದೇವತೆಗಳನ್ನೊಳಗೊಂಡುದು. ಇವುಗಳ ಧಾರಣೆಯಿಂದ ಸಂಪತ್ತು, ಆರೋಗ್ಯ, ವಿಜ್ಞಾನ ಮುಂತಾದವುಗಳ ಲಾಭವು ಪ್ರಾಪ್ತವಾಗುವುದು. ॥೩೦-೩೧-೩೨॥

ಎಂಟು ಮೊಗದ ರುದ್ರಾಕ್ಷಿಯು ಅಷ್ಟಮೂರ್ತಿ ಮತ್ತು ಅಷ್ಟವಸುಸ್ವರೂಪ ವಾದದ್ದು. ಅದರ ಧಾರಣೆಯಿಂದ ಗಂಗಾಪ್ರೀತಿಯೂ, ಸತ್ಯವಾದಿತ್ವವೂ ಲಭಿಸು

ವಸ್ವಷ್ಟಕಪ್ರಿಯಂ ಚೈವ ಗಂಗಾಪ್ರೀತಿಕರಂ ಪರಂ ।
ತದ್ಧಾರಣಾದಿಮೇ ಪ್ರೀತಾ ಭವೇಯುಃ ಸತ್ಯವಾದಿನಃ ॥೩೪॥

ನವ ವಕ್ತ್ರಂ ತು ರುದ್ರಾಕ್ಷಂ ನವಶಕ್ತ್ಯಧಿದೈವತಂ ।
ತಸ್ಯ ಧಾರಣಮಾತ್ರೇಣ ಪ್ರೀಣಂತೇ ನವಶಕ್ತಯಃ ॥೩೫॥

ದಶವಕ್ತ್ರಂ ತು ರುದ್ರಾಕ್ಷಂ ಯಮದೈವಮುದಾಹೃತಂ ।
ದಶಾಂಶಾಪ್ರೀತಿಜನನಂ ಧಾರಣೇ ನಾತ್ರ ಸಂಶಯಃ ॥೩೬॥

ಏಕಾದಶಮುಖಂ ತ್ವಕ್ಷರುದ್ರೈಕಾದಶದೈವತಂ ।
ತದಿಂದ್ರದೈವತಂ ಚಾಹುಃ ಸದಾ ಸೌಭಾಗ್ಯವರ್ಧನಂ ॥೩೭॥

ರುದ್ರಾಕ್ಷಂ ದ್ವಾದಶಮುಖಂ ಮಹಾವಿಷ್ಣು ಸ್ವರೂಪಕಂ ।
ದ್ವಾದಶಾದಿತ್ಯದೈವಂ ಚ ಬಿಭೃತ್ಸತ್ಯಪರೋ ನರಃ ॥೩೮॥

ತ್ರಯೋದಶಮುಖಂ ಚಾಕ್ಷಂ ಕಾಮದಂ ಸಿದ್ಧಿದಂ ಶುಭಂ ।
ತಸ್ಯ ಧಾರಣಮಾತ್ರೇಣ ಕಾಮದೇವಃ ಪ್ರಸೀದತಿ ॥೩೯॥

ಚತುರ್ದಶಮುಖಂ ಚಾಕ್ಷಂ ರುದ್ರನೇತ್ರಸಮುದ್ಭವಂ ।
ಸರ್ವವ್ಯಾಧಿಹರಂ ಚೈವ ಸದಾರೋಗ್ಯಮವಾಪ್ನುಯಾತ್ ॥೪೦॥

---

ವುದು. ನವಶಕ್ತ್ಯಾತ್ಮಕವಾದದ್ದು ಒಂಬತ್ತು ಮುಖಗಳ ರುದ್ರಾಕ್ಷಿ. ಅದನ್ನು ಧರಿಸುವುದರಿಂದ ನವಶಕ್ತಿಗಳೂ ತೃಪ್ತಿಹೊಂದುತ್ತವೆ. ॥೩೩-೩೪-೩೫॥

ಹತ್ತುಮೊಗದ ರುದ್ರಾಕ್ಷಿಯು ಯಮದೇವತಾಕವಾದದ್ದು. ಹನ್ನೊಂದು ವದನಗಳಿರುವ ರುದ್ರಾಕ್ಷಿಯು ಏಕಾದಶರುದ್ರರು ಮತ್ತು ಇಂದ್ರದೇವತಾತ್ಮಕವಾದುದು. ಇದನ್ನು ಧರಿಸುವವನು ಸೌಭಾಗ್ಯಶಾಲಿಯಾಗುವನು. ಮಹಾವಿಷ್ಣು ಮತ್ತು ದ್ವಾದಶಾದಿತ್ಯಸ್ವರೂಪದಿಂದಿದ್ದು ಸತ್ಯಪರತ್ವರೂಪವಾದ ಫಲವನ್ನು ಕೊಡುವುದೇ ಹನ್ನೆರಡು ವದನಗಳ ರುದ್ರಾಕ್ಷಿ. ॥೩೬-೩೭-೩೮॥

ಹದಿಮೂರುವದನದ ರುದ್ರಾಕ್ಷಿಯು ಕಾಮದೇವತಾಕವಾದುದು. ಇಷ್ಟಾರ್ಥಸಿದ್ಧಿಯು ಅದರ ಧಾರಣೆಯಿಂದ ಲಭಿಸುವುದು. ಹದಿನಾಲ್ಕು ವದನಗಳುಳ್ಳ

ಮದ್ಯಂ ಮಾಂಸಂ ಚ ಲಶುನಂ ಪಲಾಂಡುಂ ಶಿಗ್ರುಮೇವ ಚ ।
ಶ್ಲೇಷ್ಮಾತಕಂ ವಿಡ್ವರಾಹಂ ಭಕ್ಷಯನ್ ವರ್ಜಯೇತ್ತತಃ ॥೪೧॥

ಗ್ರಹಣೇ ವಿಷುವೇ ಚೈವ ಅಯನೇ ಸಂಕ್ರಮೇ ತಥಾ ।
ದರ್ಶೇ ಚ ಪೂರ್ಣಮಾಸೇ ಚ ಪುಣ್ಯೇಷು ದಿವಸೇಷು ಚ ॥೪೨॥

ರುದ್ರಾಕ್ಷಧಾರಣಾತ್ಸದ್ಯಃ ಸರ್ವಪಾಪಕ್ಷಯೋ ಭವೇತ್ ॥೪೩॥

ಭೂಮಾವಾಮಲಕೋಪಮಾಸ್ತು ವಿಹಿತಾ ದ್ವಾತ್ರಿಂಶವಕ್ತ್ರೋತ್ತರಾಃ
ಕೃಷ್ಣಾ ರಕ್ತಸದೃಕ್ಷವರ್ಣಕಲಿತಾ ಗೌಡೋದ್ಭವಾಃ ಶಂಕರಿ ।
ಅನ್ಯೇ ಚಾಪಿ ಭವಂತಿ ಪುಣ್ಯಪರಮಾ ದ್ವಾತ್ರಿಂಶಜಾತ್ಯಾನನಾಃ
ದೇವಪ್ರಾರ್ಥನಯಾ ಮಯಾ ಸುವಿಹಿತಾ ಭೂಮೌ ಜನಾಘೌಘಘೃತ್ ॥೪೪॥

---

ರುದ್ರಾಕ್ಷಿಯು ರುದ್ರನೇತ್ರಸ್ವರೂಪವಾದುದು. ಅದನ್ನು ಧರಿಸುವುದರಿಂದ ಸಮಸ್ತ ವ್ಯಾಧಿಗಳೂ ನಾಶವಾಗಿ ಸದಾ ಆರೋಗ್ಯವು ಲಭಿಸುವುದು. ॥೩೯-೪೦॥

ಹೆಂಡ, ಮಾಂಸ, ಬೆಳ್ಳುಳ್ಳಿ, ಈರುಳ್ಳಿ, ನುಗ್ಗೇಕಾಯಿ, ಚೊಳ್ಳೆಕಾಯಿ, ವಿಡ್ವರಾಹ (ಪಾಚೀಬಳ್ಳಿ) ಇವುಗಳನ್ನು ತಿನ್ನುವವರು ರುದ್ರಾಕ್ಷಿಯನ್ನು ಧರಿಸ ಕೂಡದು. ಸೂರ್ಯಚಂದ್ರ ಗ್ರಹಣಕಾಲ, ಮೇಷ ತುಲಾ ಸಂಕ್ರಮಣಗಳು, ಉತ್ತರ ದಕ್ಷಿಣಾಯನ ದಿನಗಳು, ಸಾಮಾನ್ಯ ಸಂಕ್ರಮಣ, ಪೂರ್ಣಿಮಾ, ಅಮಾವಾಸ್ಯೆ ಇನ್ನೂ ಪುಣ್ಯದಿನಗಳು ಇವುಗಳಲ್ಲಿ ಈ ರುದ್ರಾಕ್ಷಿಗಳನ್ನು ಧರಿಸುವುದರಿಂದ ಕೂಡಲೇ ಸಕಲ ಪಾಪರಾಶಿಯೂ ಕ್ಷಯವನ್ನೈದುವುದು. ॥೪೧-೪೨-೪೩॥

ಭೂಲೋಕದ ಗೌಡದೇಶದಲ್ಲಿ ನೆಲ್ಲಿಕಾಯಿಯ ಗಾತ್ರದವುಗಳು, ಮತ್ತು ಮೂವತ್ತೆರಡು ವದನಗಳಿಂದ ಕೂಡಿದ ರುದ್ರಾಕ್ಷಿಗಳು, ಕಪ್ಪು ಮತ್ತು ಕೆಂಪು ಮಿಶ್ರಿತವಾದ ಬಣ್ಣದಿಂದ ದೊರೆಯುವುವು. ಅವು ಬಹು ಪವಿತ್ರವಾದವುಗಳು. ಗೌಡದೇಶವನ್ನು ಬಿಟ್ಟು ಉಳಿದ ಕಡೆಗಳಲ್ಲಿಯೂ ಪುಣ್ಯಪ್ರದವಾದ ಮೂವತ್ತೆರಡು ಮುಖದ ರುದ್ರಾಕ್ಷಿಗಳು ದೊರೆಯುತ್ತವೆ. ದೇವಿಯೇ, ನಿಜವಾಗಿಯೂ ಆ ರುದ್ರಾಕ್ಷಿಗಳನ್ನು ದೇವತೆಗಳ ಕೋರಿಕೆಯಂತೆ ಜನರ ಪಾಪವನ್ನು ನಿರ್ಮೂಲಗೊಳಿಸಲು ನಾನೇ ಭೂಲೋಕಕ್ಕೆ ಅನುಗ್ರಹಿಸಿರುವೆನು. ॥೪೪॥

ಮಾನ್ಯಾಧನ್ಯಾಸ್ತ ಏವ ಕ್ಷಿತಿತಲತಿಲಕಾ ವಂದ್ಯಸಂನ್ಯಾಸಿನಸ್ತೇ
ಪಾಪಾಪಾರಭವೋರುದಾವಶಮನ್ಯೈಃ ಪರ್ಜನ್ಯರೂಪಾಶ್ಚ ತೇ ।
ಮೂರ್ಧನ್ಯಾಶ್ಚ ವದಾನ್ಯದಾನಕರಣಾ ನಾನ್ಯಚ್ಛರಣ್ಯಂ ಸದಾ
ತೇಷಾಂ ಶಂಭುಸಮರ್ಚನಂ ಶ್ರುತಿಗತಂ ಭಸ್ಮಾಕ್ಷಸದ್ಧಾರಿಣಾಂ ॥೪೫॥

ಇತಿ ಶ್ರೀಶಿವರಹಸ್ಯೇ ಈಶ್ವರಾಖ್ಯೇ ದಶಮಾಂಶೇ ರುದ್ರಾಕ್ಷೋತ್ಪತ್ತಿ
ಮುಖಭೇದಧಾರಣವಿಧಿ ಕಥನಂ ನಾಮ ತ್ರಯೋವಿಂಶೋಽಧ್ಯಾಯಃ

---

ಯಾರು ಭಸ್ಮರುದ್ರಾಕ್ಷಿಗಳನ್ನು ಧರಿಸಿ, ಶಂಭುವಿನ ಅರ್ಚನೆಯಲ್ಲಿಯೇ ತೊಡಗಿದವರಾಗಿ ಕಾಲಕಳೆಯುವರೋ ಅವರೇ ಮಾನ್ಯರು ಮತ್ತು ಧನ್ಯರು. ಭೂಲೋಕಕ್ಕೆ ಅವರೇ ತಿಲಕಪ್ರಾಯರು. ಅವರು ಪಾಪರಾಶಿಯೆಂಬ ದಾವಾಗ್ನಿಗೆ ಮೇಘರೂಪದಲ್ಲಿದ್ದು ಪುಣ್ಯಮೂರ್ತಿಗಳೆನಿಸುವರು. ದಾನವೀರರೂ ಅವರೇ ಆಗಿ, ಅವರು ಯಾರಿಗೂ ಎಂದೂ ಶರಣುಹೊಡೆಯುವುದಿಲ್ಲ. ಎಂದು ಶಂಕರನು ರುದ್ರಾಕ್ಷಿ ಧಾರಣೆಯ ಮಹಿಮೆಯನ್ನು ಪಾರ್ವತಿಗೆ ವಿವರಿಸಿದನೆಂದು ಕುಮಾರಸ್ವಾಮಿಯು ಜೈಗೀಷವ್ಯಮುನಿಗೆ ರುದ್ರಾಕ್ಷಿಮಹಿಮೆಯನ್ನು ವಿವರವಾಗಿ ತಿಳಿಸಿದನು. ॥೪೪-೪೫॥

ಇಲ್ಲಿಗೆ ಶ್ರೀಶಿವರಹಸ್ಯದ ದಶಮಾಂಶದಲ್ಲಿ ರುದ್ರಾಕ್ಷಿಯ ಉತ್ಪತ್ತಿ, ಅವುಗಳ ಮುಖಭೇದದಿಂದ ಫಲಭೇದ ಇವುಗಳನ್ನು ವಿವರಿಸುವ ಇಪ್ಪತ್ತುಮೂರನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ಶ್ರೀ ಶಿವಾಯನಮಃ ॥

# ಅಥ ಶ್ರೀಶಿವರಹಸ್ಯೇ

## ಈಶಾನಾಖ್ಯೇ

## ದಶಮಾಂಶಪೂರ್ವಾರ್ಧೇ

## ಚತುರ್ವಿಂಶೋಽಧ್ಯಾಯಃ

॥ ಶ್ರೀ ಸ್ಕಂದ ಉವಾಚ ॥

ಕೈಲಾಸಸ್ಥಾನಜನ್ಯಾನಾಂ ರುದ್ರಾಕ್ಷಾಣಾಂ ಮುನೇ ತದಾ ।
ವಕ್ತ್ರಾಣಾಂ ಶತಸಂಖ್ಯಾನಾಂ ದೇವಾಃ ಪ್ರೋಕ್ತಾಸ್ಸಮಾಸತಃ ॥೧॥

ಏಕವಕ್ತ್ರೇಶ್ವರಃ ಸಾಕ್ಷಾದ್ದ್ವಿವಕ್ತ್ರಂ ಪಾರ್ವತೀಶಿವೌ ।
ತ್ರಿವಕ್ತ್ರಮನಲಸ್ಸಾಕ್ಷಾಚ್ಚತುರ್ವಕ್ತ್ರಃ ಪಿತಾಮಹಃ ॥೨॥

ಪಂಚವಕ್ತ್ರಂ ಹರಿರ್ವಿಪ್ರ ಷಣ್ಮುಖೋಹಂ ಸನಾತನಃ ।
ಸಪ್ತೈವ ಲೋಕಸಪ್ತಾಸ್ಯಮಷ್ಟಾಸ್ಯಂ ವಸುದೇವಕಃ ॥೩॥

---

## ಇಪ್ಪತ್ತನಾಲ್ಕನೆಯ ಅಧ್ಯಾಯು

ಕುಮಾರಸ್ವಾಮಿಯು ಜೈಗೀಷವ್ಯಮಹರ್ಷಿಗೆ ಕೈಲಾಸಗಿರಿಯಲ್ಲಿ ಶತವದನ ಪರ್ಯಂತವಾಗಿರುವ ರುದ್ರಾಕ್ಷಿಗಳ ಸ್ವರೂಪವನ್ನೂ ಅವುಗಳ ದೇವತೆಗಳನ್ನೂ ಬೋಧಿಸಲಾರಂಭಿಸಿದನು. ಒಂದುಮುಖದ ರುದ್ರಾಕ್ಷಿಯು ಈಶ್ವರಾತ್ಮಕವು, ಎರಡುಮುಖವುಳ್ಳದ್ದು ಪಾರ್ವತೀಶಿವಾತ್ಮಕವು. ವದನತ್ರಯವುಳ್ಳದ್ದು ಅಗ್ನಿರೂಪವೆಂದೂ ನಾಲ್ಕುಮುಖಗಳುಳ್ಳದ್ದು ಬ್ರಹ್ಮರೂಪವೆಂದು ತಿಳಿಸಲ್ಪಟ್ಟಿದೆ. ॥೧-೨॥

ಐದುಮುಖಗಳುಳ್ಳದು ಹರಿದೇವತಾಕವೆಂದೂ, ಆರುಮುಖಗಳುಳ್ಳದು ಕುಮಾರ ದೇವತಾಕವೆಂದೂ, ಏಳುವದನವುಳ್ಳದ್ದು ಸಪ್ತಲೋಕದೈವತವೆಂದೂ, ಎಂಟುಮುಖವುಳ್ಳದ್ದು ಅಷ್ಟವಸುದೇವತಾಕವೆಂದೂ ಹೇಳುವರು. ಹಾಗೆಯೇ,

ನವಾಸ್ಯಂ ನವದುರ್ಗಾಸ್ತಾಃ ದಶಾಸ್ಯಂ ದಶನಾಗಕಾಃ ।
ಏಕಾದಶಾಸ್ಯಂ ರುದ್ರಾದಿ ದೇವತಾಃ ಪರಿಕೀರ್ತಿತಾಃ ॥೪॥

ದ್ವಾದಶಾದಿತ್ಯದೈವತ್ಯಂ ದ್ವಾದಶಾಸ್ಯಂ ಪ್ರಕೀರ್ತಿತಂ ।
ತ್ರಯೋದಶಮುಖಂ ಚಾಕ್ಷಂ ಕಾಮದೇವಸಮಾಹ್ವಯಂ ॥೫॥

ಚತುರ್ದಶಾಸ್ಯಂ ತೇ ಲೋಕಾಃ ಚತುರ್ದಶಮುನೇ ತದಾ ।
ಶತಾಷ್ಟೋತ್ತರ ಸಂಖ್ಯಾನಾಂ ಮುಖನಾಂ ದೇವತಾ ಮುನೇ ॥೬॥

ಕಥಯಿಷ್ಯೇಽನುಪೂರ್ವ್ಯೇಣ ಶಿವಪ್ರೋಕ್ತಂ ಸನಾತನಂ ।
ಮಾತಂಗಾ ವಾನರಾ ಋಕ್ಷಾ ಗರುಡಾಃ ಪನ್ನಗಾಸ್ತಥಾ ॥೭॥

ಮುನಯೋ ಮನವಶ್ಚೈವ ಲೋಕಾಶ್ಚಾಥ ಚತುರ್ದಶ ।
ನಾಗಾನಾಂ ಪತಯಶ್ಚೈವ ದಿಗ್ಗಜಾ ಪಕ್ಷಿಣಸ್ತಥಾ ॥೮॥

ಮರುತೋ ಮಾತರಶ್ಚೈವ ಪಿತರೋ ಮರುತಸ್ತಥಾ ।
ಪಿಶಾಚಾ ಯಾತುಧಾನಶ್ಚ ನೈಋತಾ ವಾಯವಸ್ತಥಾ ॥೯॥

ವಿದ್ಯಾಧರಾಃ ಕಿಂಪುರುಷಾಃ ನಾಗಾಃ ಸರ್ಪಾಶ್ಚ ಪೂರುಷಾಃ ।
ದೈತ್ಯಾಶ್ಚ ರಾಕ್ಷಸಾಶ್ಚೈವ ಮಮ ರುದ್ರಗಣಾಸ್ತಥಾ ॥೧೦॥

ಸಪ್ತರ್ಷಯಃ ಸರ್ವದೇವಾ ಕರ್ಮದೇವಾಃ ಸನಾತನಾಃ ।
ಕಲಾ ಕಾಷ್ಠಾ ಮುಹೂರ್ತಾಶ್ಚ ಋಕ್ಷಾಣಿ ಯುಗಜಾತಯಃ ॥೧೧॥

---

ಒಂಬತ್ತಕ್ಕೆ ನವದುರ್ಗೆಗಳೂ, ಹತ್ತಕ್ಕೆ ದಶನಾಗಗಳೂ, ಹನ್ನೊಂದಕ್ಕೆ ಏಕಾದಶ ರುದ್ರರೂ, ಹನ್ನೆರಡಕ್ಕೆ ದ್ವಾದಶಾದಿತ್ಯರೂ, ಹದಿಮೂರಕ್ಕೆ ಕಾಮದೇವನೂ ಹದಿನಾಲ್ಕು ವದನವುಳ್ಳದ್ದಕ್ಕೆ ಚತುರ್ದಶ ಲೋಕಗಳೂ ಅಧಿದೇವತೆಗಳಾಗುತ್ತವೆ. ಇದೇ ರೀತಿ ಹದಿನೈದುವದನಗಳಿಂದ ಮುಂದಕ್ಕೆ ನೂರೆಂಟು ಮುಖಗಳ ಪರ್ಯಂತವಿರುವ ರುದ್ರಾಕ್ಷಿಗಳಿಗೆ ಕ್ರಮವಾಗಿ ಈಗ ದೇವತೆಗಳು ನಿರೂಪಿಸಲ್ಪಡುತ್ತವೆ. ॥೩-೪-೫-೬-೭॥

ಹದಿನೈದುವದನಗಳಿಂದ ಕ್ರಮವಾಗಿ ನೂರೆಂಟು ವದನಗಳವರೆಗೆ ಕ್ರಮವಾಗಿ ಈ ದೇವತೆಗಳು ಅಧಿದೇವತೆಗಳೆನಿಸುವರು. ಮಾತಂಗ, ವಾನರ, ಋಕ್ಷ, ಗರುಡ, ಸರ್ಪ, ಮುನಿಗಳು, ಮನುಗಳು, ಚತುರ್ದಶಲೋಕಗಳು ನಾಗದೇವತೆಗಳು, ದಿಗ್ಗಜ

ಮಧುಶ್ಚ ಮಾಧವಶ್ಚೈವ ಋತವೋ ಹಾಯನಾಸ್ತಥಾ ।
ಕ್ಷಣಾ ತೃಟಿ ಲವಾಶ್ಚೈವ ಗಾವೋ ಧರ್ಮೋಽಪ್ಯಧರ್ಮಕಃ ॥೧೨॥

ಸಿದ್ಧಾ ಯಕ್ಷಾ ಮಖಾಶ್ಚೈವ ನದೀ ಕಾಲಾಗ್ನಿರುದ್ರಕಃ ।
ಭೈರವಶ್ಚೈವ ಚಂಡೀಶೋ ಮಾಂಡಕೀ ಭಾಂಡಕೀ ತಥಾ ॥೧೩॥

ವೇದಾಶ್ಚೋಪನಿಷದ್ವರ್ಗಾ ಪುರಾಣಾನಿ ತಥಾಗಮಾಃ ।
ರಹಸ್ಯಾ ಹಿ ತಥಾ ಖಂ ಗಾಂ ನದ್ಯೋ ವೈ ಸಾಗರಸ್ತಥಾ ॥೧೪॥

ಪರ್ವತಾ ವೃಕ್ಷಗುಲ್ಮಾದ್ಯಾ ತೃಣೌಷಧಿಲತಾಸ್ತಥಾ ।
ರೇಣವಶ್ಚ ತಥಾ ಪ್ರಾಣಾ ತೃಣೌಷಧಿಲತಾಸ್ತಥಾ ॥೧೫॥

ಪ್ರಣವಾ ಮಂತ್ರಜಾಶ್ಚೈವ ಛಂದೋಮಂತ್ರಾಣಿ ಮಾನವಾಃ ।
ತಥೈವಾಪ್ಸರಸಸ್ಸರ್ವಾ ಗಂಧರ್ವಾ ನಾಗಕಾಸ್ತಥಾ ॥೧೬॥

ಗತಾಗತೀ ಪುಣ್ಯಪಾಪೇ ತಥಾ ಸರ್ವಂ ಕೃತಾಕೃತಂ ।
ಇಂದ್ರಿಯಾಣಿ ಮನಶ್ಚೈವ ತ್ವಜ್ಮಾಂಸರಸಧಾತವಃ ॥೧೭॥

ಅತೀತಾನಾಗತಂ ಚೈವ ಭೂತಂ ಭವ್ಯಂ ಚ ವರ್ತಿನಂ ।
ತತ್ತ್ವಾಭಿಮಾನಿನೋ ದೇವಾಃ ದಿಶಃ ಕಾಲಾಶ್ಚ ಸಂಖ್ಯಯೋಃ ॥೧೮॥

ರುದ್ರಾಕ್ಷವದನಾನಾಂ ಚ ದೇವಾಶ್ಚಾಷ್ಟೋತ್ತರಂ ಶತಂ ।
ಪ್ರೋಕ್ತಾಃ ಕೈಲಾಸಸದನರುದ್ರಾಕ್ಷಾಣಾಂ ಶಿವೇ ಮಮ ॥೧೯॥

---

ಗಳು, ಪಕ್ಷಿಗಳು, ಮರುತ್ತು, ಮಾತೃದೇವತೆಗಳು, ಪಿತೃದೇವತೆಗಳು, ಮರುದ್ಗಣಗಳು, ವಿದ್ಯಾಧರರು, ಕಿಂಪುರುಷರು, ನಾಗಗಳು, ಸರ್ಪಗಳು, ಪೂರುಷರು, ದೈತ್ಯರು, ರಾಕ್ಷಸರು, ರುದ್ರಗಣಗಳು, ಸಪ್ತರ್ಷಿಗಳು, ಸರ್ವದೇವತೆಗಳು, ಕರ್ಮದೇವತೆಗಳು, ಸನಾತನರು, ಕಲೆ, ಕಾಷ್ಠ, ಮುಹೂರ್ತ, ನಕ್ಷತ್ರ, ಯುಗಗಳು, ಮಧು, ಮಾಧವ, ಋತುಗಳು, ವರ್ಷಗಳು, ಕ್ಷಣ, ತೃಟಿ, ಲವ, ಗೋವುಗಳು, ಧರ್ಮ, ಅಧರ್ಮ,- ಸಿದ್ಧರು, ಯಕ್ಷರು, ಯಾಗಗಳು, ನದೀ, ಕಾಲಾಗ್ನಿರುದ್ರ, ಭೈರವ, ಚಂಡೀಶ್ವರ, ಮಾಂಡಕಿ, ಭಾಂಡಕಿ, ವೇದಗಳು, ಉಪನಿಷತ್ತುಗಳು, ಪುರಾಣಗಳು, ಆಗಮಗಳು, ರಹಸ್ಯದೇವತೆಗಳು, ಆಕಾಶ, ಭೂಮಿ, ನದೀ, ಸಾಗರ, ಪರ್ವತ, ಮರ, ಗುಲ್ಮ, ತೃಣ, ಔಷಧಿ, ಬಳ್ಳಿ, ರೇಣು, ಪ್ರಾಣ, ಪ್ರಣವಮಂತ್ರ, ಛಂದೋಮಂತ್ರ, ಮನು

ಭೂಮೌ ಚತುರ್ದಶಾನ್ಯೇವ ಮುಖಾನ್ಯೇವ ಭವಂತಿ ಹಿ ॥೨೦॥

ಮುಖಂ ಮುಖೇಷು ಗ್ರಥಿತಂ ಕಿಲೇದಂ
ಪುಣ್ಯಾಯ ಪಾಪಾಯ ಭವೇದಥಾನ್ಯಥಾ ।
ತತ್ಕಾಮಸೂತ್ರೈರ್ಮಣಿಭಿರ್ವಿಶಿಷ್ಟ
ಮಪ್ಯಾಕೃತೇಃ ಪ್ರೀತಿಕರಂ ಭವೇಚ್ಛಿವೇ ॥೨೧॥

ಶಿರೋಽಕ್ಷಧೃತಿಶ್ಶಿವೇ ಶಿರಸಿ ಜಾತಪಾಪೌಘಹೃತ್
ಸುವಕ್ಷವಿಧೃತಾಕ್ಷಕೈಃ ಪರಜತಲ್ಪಭೋಗೋದ್ಭವಂ ।
ಕರಾದಿವಿಧೃತಾಕ್ಷಕೈಃ ಕರಕೃತೋರುಪಾಪಾಪಹಂ
ಭವೇತ ಗಿರಿಜೇ ಸದಾ ತದಿಹ ಪುಣ್ಯವೃದ್ಧಿಪ್ರದಂ ॥೨೨॥

---

ಗಳು, ಅಪ್ಸರಸ್ಸುಗಳು, ಗಂಧರ್ವರು. ನಾಗರು, ಗತದೇವತೆಗಳು, ಗಮ್ಯದೇವತೆಗಳು, ಪುಣ್ಯ, ಪಾಪ, ಇವುಗಳ ಅಭಿಮಾನದೇವತೆಗಳು, ತೃಣಕೃತವಾದ ಕರ್ಮಗಳು, ಇಂದ್ರಿಯಗಳು, ಮನಸ್ಸು, ತ್ವಕ್, ಮಾಂಸ, ರಸಗಳು, ಧಾತುಗಳು, ಅತೀತಕರ್ಮ, ಅನಾಗತಕರ್ಮ, ಭೂತತತ್ತ್ವ, ವರ್ತಮಾನತತ್ತ್ವ, ದಿಕ್ಕುಗಳು, ಕಾಲ, ಇವೇ ಮೊದಲಾದ ದೇವತೆಗಳು, ಕೈಲಾಸಶಿಖರದಲ್ಲಿರುವ ನೂರೆಂಟುವದನಗಳುಳ್ಳ ರುದ್ರಾಕ್ಷಿಗಳಿಗೆ ಕ್ರಮವಾಗಿ ಅಧಿಪತಿಗಳಾಗುವರು. ॥೮-೯-೧೦-೧೧-೧೨-೧೩-೧೪-೧೫-೧೬-೧೭-೧೮-೧೯॥

ಭೂಮಿಯಲ್ಲಿ ಮಾತ್ರ ಹದಿನಾಲ್ಕು ವದನಗಳಿಗಿಂತ ಹೆಚ್ಚಾದ ರುದ್ರಾಕ್ಷಿಗಳು ದೊರೆಯುವುದಿಲ್ಲ. ರೇಷ್ಮೆಯ ದಾರದಲ್ಲಿ ರುದ್ರಾಕ್ಷಿಗಳನ್ನು ಒಂದರ ವದನಕ್ಕೆ ಮತ್ತೊಂದರ ವದನವು ಸೇರುವಂತೆ ಪೋಣಿಸಬೇಕು. ಅದು ಪುಣ್ಯಪ್ರದವಾದುದು. ಅದಕ್ಕೆ ವಿರುದ್ಧವಾಗಿ ಕೂಡಿಸುವುದು ಪಾಪಪ್ರದವು. ರುದ್ರಾಕ್ಷಿಗಳ ಮಧ್ಯೆ ಮಣಿಗಳನ್ನು ರಚಿಸುವುದು ಪರಶಿವನಿಗೆ ಪ್ರೀತಿಕರವಾಗುವುದು. ॥೨೦-೨೧॥

ಶಿರಸ್ಸಿನಲ್ಲಿ ರುದ್ರಾಕ್ಷಿಯನ್ನು ಧರಿಸುವುದರಿಂದ ಶಿರಃಕೃತವಾದ ಸಕಲ ಪಾಪವೂ ನಿವಾರಣೆಯಾಗುವುದು. ಎದೆಯ ಮೇಲೆ ಧರಿಸುವ ರುದ್ರಾಕ್ಷಿಯು ಪರವನಿತಾ ಸಂಸರ್ಗದ ಪಾಪವನ್ನು ಪರಿಹರಿಸುವುದು. ಕೈಯ್ಯೇ ಮೊದಲಾದ ಅವಯವಗಳಲ್ಲಿ ನಿಲ್ಲುವ ರುದ್ರಾಕ್ಷಿಯು ಆಯಾ ಅಂಗಗಳ ಪಾಪವನ್ನು ಪರಿಹರಿಸುವುದು. ಪಾರ್ವತಿಯೇ, ಹೀಗೆ ರುದ್ರಾಕ್ಷಿಧಾರಣೆಯಿಂದ ಅನೇಕ ಪಾಪಗಳು ಸ್ವಯಂ ನಿವೃತ್ತಿಹೊಂದುವುವು. ॥೨೨॥

ಧೃತರುದ್ರಾಕ್ಷಸರೇಣ ದತ್ತದಾನಂ
ಪರಮಾಂ ವೃದ್ಧಿಮುಪೈತಿ ದೇವಲೋಕೇ ।
ಪ್ರತಿಗಾಂ ಮಾಂ ಹ್ಯಧಮಾಂ ಗತಿಂ ನ ಚಾಪ್ನುಯಾತ್
ಯದಿ ಭಸ್ಮಾಕ್ಷಧರೋ ದ್ವಿಜೋತ್ತಮೋಽಪಿ ॥೨೩॥

ಅವಶ್ಯಕಂ ವಶ್ಯಕರಂ ಸದೈವ .
ರುದ್ರಾಕ್ಷಮೇತದ್ಧೃತಮದ್ರಿಕನ್ಯೇ ।
ಪಶ್ಯಾಧುನಾ ಕಶ್ಯಪ ಕಣ್ವಮುಖ್ಯೈಃ
ಧೃತಂ ಸದಾ ದೇವಗಣೈರ್ಮುದಾ ಮೇ ॥೨೪॥

ಅಲಂ ವಿವಿಧದಾನತೋಽಪ್ಯಲಮುಮೇ ಮಖಾದಿಕ್ರಿಯಾ-
ವಿಚಾರಪರಮಕ್ರಿಯಾ ವಿವಿಧವೇದಬೋಧೈರಪಿ ।
ಧೃತಂ ಯದಿ ತನೌ ಶಿವೇ ವಿಮಲಮೇತದ್ದೇವಾನ್ನರಾನ್
ಮಮಾಕ್ಷಮಿದಮುತ್ತಮಂ ಝಡಿತಿ ಹೃತ್ತಮೋನಾಶಯೇತ್ ॥೨೫॥

---

ರುದ್ರಾಕ್ಷಿಮಾಲೆ ಮತ್ತು ಭಸ್ಮಗಳನ್ನು ಧರಿಸಿದವನು ಕೊಟ್ಟ ದಾನವು ವಿಶೇಷ ಪುಣ್ಯವನ್ನು ಕೊಡುವುದಲ್ಲದೆ ಅದು ದೇವಲೋಕದಲ್ಲಿಯೂ ಪ್ರಸಿದ್ಧಿಗೆ ಬರುವುದು. ಭಸ್ಮರುದ್ರಾಕ್ಷಿಧಾರಿಯಾದ ದ್ವಿಜಶ್ರೇಷ್ಠನು ನನ್ನನ್ನುದ್ದೇಶಿಸಿ ಗೋದಾನಮಾಡುವುದಾದರೆ ಅವನಿಗೆ ಎಂದಿಗೂ ನರಕವಾಸವು ಲಭಿಸಲಾರದು. ॥೨೩॥

ರುದ್ರಾಕ್ಷಿಯನ್ನು ಧಾರಣೆಮಾಡುವುದರಿಂದ ವಶವಾಗದ ಗುಣಗಳೂ ವಸ್ತುಗಳೂ ವಶಗಳಾಗುವುವು. ಆದರಿಂದಲೇ ಈ ಕಶ್ಯಪ, ಕಣ್ವ ಮೊದಲಾದ ಮಹರ್ಷಿಗಳೂ, ದೇವತೆಗಳೂ ತಪ್ಪದೇ ಈ ರುದ್ರಾಕ್ಷಿಯನ್ನು ಧರಿಸಿರುವರು. ನೋಡು.॥೨೪॥

ನಾನಾವಿಧವಾದ ದಾನಗಳು, ವಿಧವಿಧವಾದ ಶ್ರೌತಸ್ಮಾರ್ತಕರ್ಮಗಳು ವೇದವೇದಾಂತಾರ್ಥಪರಿಜ್ಞಾನ ಇವುಗಳಿಂದ ಯಾವ ಫಲವು ದೊರೆಯುವುದೋ ಅಷ್ಟೇ ಸುಕೃತವು ದೇಹಕ್ಕೆ ರುದ್ರಾಕ್ಷಿಯನ್ನು ಧರಿಸುವುದರಿಂದಲೇ ಲಭಿಸುವುದು. ದೇವತೆಗಳಾಗಲಿ ಮಾನವರಾಗಲಿ, ಈ ರುದ್ರಾಕ್ಷಿಯನ್ನು ಧರಿಸುವುದರಿಂದ ಅವರ ಅಜ್ಞಾನವೆಲ್ಲಾ ನಾಶವಾಗಿ ಸುಜ್ಞಾನವು ಲಭಿಸುವುದು. ॥೨೫॥

 

ತ್ರಿಯಂಬಕೇನ ಮನುನಾ ವಿಧೃತಂ ಯದಾಕ್ಷಂ
ವರ್ಣೀ ಗೃಹೀ ವನಪರೋಪಿ ನರಸ್ಸದೈವ ।
ಪಂಚಾಕ್ಷರೇಣ ಸಧವಾ ವಿಧವಾಪಿ ದೇವಿ
ತತ್ಕಂಠಮಧ್ಯವಿಧೃತಂ ವರಮಂಗಲಂ ಸ್ಯಾತ್ ॥೨೬॥

ತಾರೇಣೈವ ಯತೇರ್ವದಂತಿ ನಿಗಮಾ ರುದ್ರಾಕ್ಷಮಾಲಾಧೃತಂ
ತತ್ತ್ಯಕ್ತ್ವಾ ನಿಗಮೋತ್ತಮಾಂಗವಚಸಾಂ ಸಾರಂ ನ ಸ ಪ್ರಾಪ್ನುಯಾತ್ ।
ಜ್ಞಾನಾಂಗಂ ತ್ರಿದಮೇವ ಬೋಧದಂ ಮಹಾಮುಕ್ತೇರ್ಹಿ ಮಾರ್ಗಪ್ರದಂ
ಪ್ರಾತರ್ಧಾರಿತಮದ್ರಿಜೇಕ್ಷವರಕಂ ನೈಶಂ ತ್ವಘಂ ನಾಶಯೇತ್ ॥೨೭॥

ಮಧ್ಯಾಹ್ನೇಪಿ ತತೋಪಿ ಪೂರ್ವಮಘಹೃತ್ಸಾಯಂತನೇ ಜನ್ಮಹೃ
ನ್ನೈಶೇ ತಚ್ಛಶಿಶೇಖರಾರ್ಚನಮತಿಂ ದದ್ಯಾದುಮೇ ಪಾವನಂ ।
ದ್ವಾತ್ರಿಂಶತ್ಕಂಠಭಾಗೇ ಧೃತಮುಗತನಯೇ ಭ್ರೂಯುಗೇ ಚೈಕಮಕ್ಷಂ
ಮೂರ್ಧ್ನಾ ಧಾರಿತಮಕ್ಷವಿಂಶತಿಯುಗಂ ಬಾಹ್ವೋಸ್ತಥಾ ಷೋಡಶ ॥೨೮॥

---

ಬ್ರಹ್ಮಚಾರಿ, ಗೃಹಸ್ಥ, ವಾನಪ್ರಸ್ಥ ಎಂಬ ಭೇದವಿಲ್ಲದೆ ರುದ್ರಾಕ್ಷಿಯನ್ನು ಕಂಠಕ್ಕೆ 'ತ್ರ್ಯಂಬಕಂ ಯಜಾಮಹೆ' ಎಂಬ ಮಂತ್ರದಿಂದ ಧರಿಸಬೇಕು. ಸ್ತ್ರೀಯು ಸುಮಂಗಲಿಯಾಗಲಿ, ವಿಧವೆಯಾಗಲಿ, ಶಿವಪಂಚಾಕ್ಷರಮಂತ್ರೋಚ್ಚಾರಣೆಯಿಂದ ರುದ್ರಾಕ್ಷಿಯನ್ನು ಧರಿಸಬಹುದು. ಹೀಗೆ ಮಾಡುವುದು ಸನ್ಮಂಗಳಪ್ರದವಾದುದು. ॥೨೬॥

ಸಂನ್ಯಾಸಿಯು ಪ್ರಣವಮಂತ್ರದಿಂದ ರುದ್ರಾಕ್ಷಿಯನ್ನು ಧರಿಸಬೇಕು. ವೇದವೇದಾಂತಗಳ ಸಾರವನ್ನು ಗ್ರಹಿಸಬೇಕಾದರೂ, ಜ್ಞಾನಿಯಾಗಿ ಮುಕ್ತಿಮಾರ್ಗವನ್ನು ಕಾಣಬೇಕಾದರೂ ಈ ರುದ್ರಾಕ್ಷಿಧಾರಣೆಯು ಅತ್ಯಾವಶ್ಯಕ. ಹೀಗೆಂದು ವೇದಗಳೇ ತಿಳಿಸುತ್ತಿವೆ. ಪ್ರಾತಃಕಾಲ ಈ ರುದ್ರಾಕ್ಷಿಯನ್ನು ಧರಿಸುವುದರಿಂದ ರಾತ್ರಿಕೃತವಾದ ಪಾಪವೆಲ್ಲವೂ ನಾಶವಾಗುವುದು. ॥೨೭॥

ಮಧ್ಯಾಹ್ನ ಕಾಲದಲ್ಲಿ ರುದ್ರಾಕ್ಷಿಯನ್ನು ಧರಿಸುವುದರಿಂದ ತತ್ಪೂರ್ವವಾಗಿ ಮಾಡಿದ ಪಾಪವೂ ಸಾಯಂಕಾಲ ಮತ್ತು ರಾತ್ರಿಯಲ್ಲಿ ಧರಿಸುವುದರಿಂದ, ಪುನರ್ಜನ್ಮ ನಾಶವೂ ಮತ್ತು ಶಿವಾರ್ಚನಬುದ್ಧಿಯೂ ಉಂಟಾಗುವುದು. ಕಂಠದಲ್ಲಿ ಮೂವ

ಷಟ್ಕೆದ್ವಿತ್ವಮುಮೇ ಧೃತಂ ಹಿ ಕರಯೋಷ್ಷಟ್ಕಂಡಲೇ ಮಂಡಲೇ
ವಕ್ಷಸ್ಯಷ್ಟಾಧಿಕೋಕ್ತಂ ಶತಮತಿವಿಮಲಾ ಚಾಕ್ಷಮಾಲಾ ಮುದೇ ಮೇ ।
ರುದ್ರಾಕ್ಷಹೀನವಪುಷಂ ನ ಸಮುಕ್ಷವೀಕ್ಷೇ
ಚಕ್ಷುಃಶ್ರವೋರುವರಮುನ್ಮುಜಕೋಪರೂಕ್ಷೈಃ ॥೨೯॥

ತಂ ರಕ್ಷಯಾಮಿ ನಿತರಾಮರಿಪಕ್ಷಮಾಕ್ಷೇ ।
ಕಕ್ಷೇಗ್ನಿಸಿದ್ಧಿರಿವ ಮೇ ಸ ಭವೇತ್ಕಟಾಕ್ಷೈಃ ॥೩೦॥

ಶತಂ ನಿಯುತಮಂಬಿಕೇ ಪ್ರಯುತಮೇವ ಧಾರ್ಯಂ ನರೈಃ
ಸಹಸ್ರಮಥ ಲಕ್ಷಕಂ ವಿಮಲಮೇವ ರುದ್ರಾಕ್ಷಕಂ ।
ಸ ಕೋಟಿವಿಧೃತಂ ಶಿವೇ ದಧದಪಾರಪುಣ್ಯಂ ಶಿವೇ
ಹರಿವಿಧಿಸುಭಾವದಂ ಶತಮುಖಸ್ಯ ಸಾಮ್ರಾಜ್ಯದಂ ॥೩೧॥

---

ತ್ತೆರಡನ್ನೂ, ಹುಬ್ಬಿನ ಮಧ್ಯೆ ಒಂದನ್ನೂ, ತಲೆಯಲ್ಲಿ ನಲವತ್ತು ರುದ್ರಾಕ್ಷಿಗಳನ್ನೂ, ಎರಡು ತೋಳುಗಳಿಗೂ ಹದಿನಾರು ರುದ್ರಾಕ್ಷಿಗಳನ್ನೂ ಧರಿಸಬೇಕು. ॥೨೮॥

ಮುಂಗೈಗಳಲ್ಲಿ ಕ್ರಮವಾಗಿ ಹನ್ನೆರಡು ರುದ್ರಾಕ್ಷಿಗಳನ್ನೂ, ಎರಡು ಕಿವಿಗಳಿಗೆ ಆರಾರು ರುದ್ರಾಕ್ಷಿಗಳನ್ನೂ, ಎದೆಯ ಮೇಲೆ ನೂರೆಂಟನ್ನೂ, ಧರಿಸಬೇಕು. ಹೀಗೆ ರುದ್ರಾಕ್ಷಿಗಳಿಲ್ಲದ ನರದೇಹವನ್ನು ನಾನು ಎಂದೂ ನೋಡಲಾರೆ. ಒಂದುವೇಳೆ ನೋಡಿದರೂ, ಕೋಪವುಳ್ಳ ಸರ್ಪದಂತೆ ಕೋಪದಿಂದ ನೋಡುವೆನು. ರುದ್ರಾಕ್ಷಿಧಾರಿಯಾದವನು, ಶತ್ರುಪಕ್ಷವನ್ನು ನಿಗ್ರಹಿಸುತ್ತಾ ಅಗ್ನಿಸಿದ್ಧಿಯನ್ನು ಪಡೆದವನಂತೆ ನನ್ನ ಕಟಾಕ್ಷಬಲದಿಂದ ತೇಜೋವೀರ್ಯಗಳನ್ನು ಸಂಪಾದಿಸಿ ಬಲಿಷ್ಠನೆನಿಸುವನು. ॥೨೯-೩೦॥

ರುದ್ರಾಕ್ಷಿಗಳನ್ನು ನೂರು ಸಾವಿರ, ಹತ್ತುಸಾವಿರ, ಲಕ್ಷ, ಕೋಟಿ ಈ ಸಂಖ್ಯೆಯಲ್ಲಿ ಬೇಕಾದರೂ ಧರಿಸಬಹುದು. ಈ ರೀತಿ ಅತಿಶಯವಾದ ಸಂಖ್ಯೆಯಲ್ಲಿ ಬೇಕಾದರೂ ಧರಿಸಬಹುದು. ಹೀಗೆ ಅತಿಶಯವಾದ ಸಂಖ್ಯೆಯಲ್ಲಿ ರುದ್ರಾಕ್ಷಿಯನ್ನು ಧರಿಸಿದವರಿಗೆ ಬ್ರಹ್ಮ, ವಿಷ್ಣು, ಇಂದ್ರ ಇವರ ಸ್ಥಾನವು ಅನಾಯಾಸವಾಗಿ ಲಭಿಸುವುದು. ಅಷ್ಟುಪುಣ್ಯಪ್ರದವಾದುದು ಆ ರುದ್ರಾಕ್ಷಿಧಾರಣೆ. ॥೩೧॥

ವಲಕ್ಷಂ ರುದ್ರಾಕ್ಷಂ ದ್ವಿಜತನುಭಿರೇವೇಹ ವಿಹಿತಂ
ಸುರಕ್ತಂ ಕ್ಷಾತ್ರಾಣಾಂ ಪ್ರಕಥಿತಮುಮೇ ಪೀತಮಸಕೃತ್ ।
ತತೋ ವೈಶ್ಯೈರ್ಧಾರ್ಯಂ ಪ್ರತಿದಿನಕವಾವಶ್ಯಕಮಹೋ
ತಥಾ ಕೃಷ್ಣಂ ಶೂದ್ರೈಃ ಶ್ರುತಿಗದಿತಮಾರ್ಗೋಽಯಮಗಜೇ ॥೩೨॥

ನ ವರ್ಣಸಂಸಿದ್ಧಿರುಮೇ ವಿಶಿಷ್ಟಾ
ರುದ್ರಾಕ್ಷನೇತದ್ಧರಶಿಷ್ಟಧಾರ್ಯಂ ।
ವರ್ಣೈಸ್ತಥೈವಾಶ್ರಮತತ್ಪರೈರ್ನರೈಃ
ಸ್ತ್ರೀಭಿಶ್ಚ ಧಾರ್ಯಂ ವರಮಕ್ಷಜಾತಂ ॥೩೩॥

ಧೃತಸಿತಭಸಿತತ್ರಿಪುಂಡ್ರಫಾಲಾ
ವರರುದ್ರಾಕ್ಷಮಹಾಂಗಶೋಭಿಮಾಲಾಃ ।
ಸತತಂ ಶಿವನಾಮಸಕ್ತಿಶೀಲಾ
ಶಿವಮೇವ ಪ್ರವದಂತಿ ತೇ ವಿಶಾಲಾಃ ॥೩೪॥

---

ಶುಭ್ರವಾಗಿ ಬಿಳುಪಾಗಿರುವ ರುದ್ರಾಕ್ಷಿಯು ಬ್ರಾಹ್ಮಣನಿಗೂ, ಕೆಂಪುಬಣ್ಣದ ರುದ್ರಾಕ್ಷಿಗಳು ಕ್ಷತ್ರಿಯನಿಗೂ, ಹಳದಿಯ ಬಣ್ಣದವುಗಳು ವೈಶ್ಯನಿಗೂ, ಕಪ್ಪು ಬಣ್ಣದ ರುದ್ರಾಕ್ಷಿಗಳು ಶೂದ್ರನಿಗೂ ನಿತ್ಯಧಾರಣೆಗೆ ಯೋಗ್ಯವಾದವುಗಳು ಎಂದು ವೇದವು ತಿಳಿಸುತ್ತಲಿದೆ. ॥೩೨॥

ಒಟ್ಟಿನಲ್ಲಿ ದೇವಿಯೇ, ರುದ್ರಾಕ್ಷಧಾರಣೆಗೆ ಯಾವ ವರ್ಣಾಶ್ರಮಧರ್ಮಗಳೂ ಆವಶ್ಯಕಗಳಲ್ಲ. ಯಾವ ಜನಾಂಗದವರು ಬೇಕಾದರೂ, ಯಾವ ಆಶ್ರಮಿಯಾದರೂ, ಸ್ತ್ರೀಪುರುಷಭೇದವಿಲ್ಲದೆ ಇದನ್ನು ಸದಾ ಧರಿಸಬಹುದು. ಇದನ್ನು ಧರಿಸುವುದರಿಂದಲೇ ಅವರು ಪರಿಶುದ್ಧರೆನಿಸುವರು. ॥೩೩॥

ಹಣೆಗೆ ಭಸ್ಮವನ್ನೂ, ಕಂಠಕ್ಕೆ ರುದ್ರಾಕ್ಷಮಾಲೆಯನ್ನೂ ಧರಿಸಿಕೊಂಡು, ಸರ್ವದಾ ಶಿವನಾಮಕೀರ್ತನೆ ಮಾಡುತ್ತಾ ಕಾಲಕಳೆಯುವ ಮಹಾತ್ಮರು, ವಿಶಾಲ ಭಾವನೆಯುಳ್ಳವರಾಗಿ ಮಂಗಳಪ್ರದನಾದ ನನ್ನ ಸ್ಥಾನವನ್ನೇ ಪಡೆಯುವರು. ಮತ್ತು ನನ್ನಲ್ಲಿಯೇ ಅವರು ಐಕ್ಯರಾಗುವರು. ಪಾರ್ವತಿಯೇ, ಭಸ್ಮರುದ್ರಾಕ್ಷಗಳ ಧಾರಣೆಯ ಮಹಿಮೆಯು ಇಷ್ಟು ಅಮೋಘವಾದುದು" ಎಂದು ಶಂಕರನು

ಇತಿ ಶ್ರೀಶಿವರಹಸ್ಯೇ ಈಶ್ವರಾಖ್ಯೇ ದಶಮಾಂಶೇ ಪೂರ್ವಾರ್ಧೇ
ರುದ್ರಾಕ್ಷಮಾಹಾತ್ಮ್ಯೇ ಕೈಲಾಸಸ್ಥ ಏಕಾನನಾದಿಶತಮುಖಾಂತ
ರುದ್ರಾಕ್ಷ ನಾಮ ವಿವರಣಧಾರಣಫಲನಿರೂಪಣಂ ನಾಮ
ಚತುರ್ವಿಂಶೋಽಧ್ಯಾಯಃ

---

ಪಾರ್ವತಿಗೆ ಹೇಳಿದುದನ್ನು ಜೈಗೀಷವ್ಯನಿಗೆ ಕುಮಾರಸ್ವಾಮಿಯು ಬೋಧಿಸಿದನು. ||೩೪||

ಇಲ್ಲಿಗೆ ಶ್ರೀಶಿವರಹಸ್ಯದ ದಶಮಾಂಶ ಪೂರ್ವಾರ್ಧದಲ್ಲಿ ರುದ್ರಾಕ್ಷಿಯ ವದನವಿಶೇಷ
ಗಳನ್ನು ತಿಳಿಸುವ ಇಪ್ಪತ್ತುನಾಲ್ಕನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ಶ್ರೀ ಶಿವಾಯ ನಮಃ ॥

# ಅಥ ಶ್ರೀಶಿವರಹಸ್ಯೇ

## ಈಶಾನಾಖ್ಯೇ

## ದಶಮಾಂಶಪೂರ್ವಾರ್ಧೇ

## ಪಂಚವಿಂಶೋಽಧ್ಯಾಯಃ

॥ ಶ್ರೀಸ್ಕಂದ ಉವಾಚ ॥

ವಿಧಿರೀಶೇನ ಕಥಿತೋ ರುದ್ರಾಕ್ಷಮುಖತೋ ಮುನೇ ।
ಶಿವೇನೋಕ್ತಂ ಸಮಾಸೇನ ತದ್ಧಾರಣವಿಧೌ ಸದಾ ॥೧॥

ಪುಣ್ಯೋಽಯಂ ಶಿವಸಂವಾದೋ ದೇವ್ಯೈ ದೇವೇನ ಚೋದಿತಃ ।
ರುದ್ರಾಕ್ಷವಕ್ಷಸಾಂ ನಿತ್ಯಂ ಶಿವಸ್ಸಾಕ್ಷಾತ್ಪ್ರಸೀದತಿ ॥೨॥

ರುದ್ರಾಕ್ಷಂ ಪ್ರಥಮಂ ಧೃತ್ವಾ ಕರ್ಮ ಕುರ್ಯಾದತಂದ್ರಿತಃ ।
ಭಸ್ಮವದ್ಧಾರಣವಿಧಿಃ ಕೇಚಿತ್ತ್ರ್ಯಯ್ಯಂಬಕೋದಿತಃ ॥೩॥

---

## ಇಪ್ಪತ್ತೈದನೆಯ ಅಧ್ಯಾಯ

ಜೈಗೀಷವ್ಯಮಹಾಮುನಿಯೇ, ನಿನಗೆ ಇಲ್ಲಿನ ವರೆಗೂ ಪಾರ್ವತೀಪರಶಿವರ ಸಂವಾದರೂಪವಾದ ರುದ್ರಾಕ್ಷಿಯ ವದನಗಳ ವಿಷಯವನ್ನೂ, ಅದನ್ನು ಧರಿಸುವ ವಿಧಿಯನ್ನೂ ಸಂಕ್ಷೇಪವಾಗಿ ತಿಳಿಸಿರುವೆನು. ಈ ಪಾರ್ವತೀಪರಶಿವರ ಸಂವಾದವು ಬಹು ಪುಣ್ಯಪ್ರದವಾದುದು. ರುದ್ರಾಕ್ಷಿಯ ಸರವನ್ನು ಕಂಠದಲ್ಲಿ ಧರಿಸಿರುವವರಿಗೆ ಶಂಕರನು ಪ್ರಸನ್ನನಾಗುವನು ಎಂಬುದರಲ್ಲಿ ಸಂಶಯವಿಲ್ಲ. ॥೧-೨॥

ಯಾವ ಕರ್ಮಾನುಷ್ಠಾನಮಾಡಬೇಕಾದರೂ ಮೊದಲು ರುದ್ರಾಕ್ಷಿಯನ್ನು ಧರಿಸಿರಬೇಕು. ಭಸ್ಮಧಾರಣಮಂತ್ರವೇ ಮತ್ತು ಅದರ ಕ್ರಮವೇ ರುದ್ರಾಕ್ಷಿಧಾರಣೆಗೂ ಸಲ್ಲುವುದು 'ಕೆಲವರು ತ್ರ್ಯಯಂಬಕಂ ಯಜಾಮಹೆ' ಎಂಬ ಮಂತ್ರವನ್ನೂ

ಸರ್ವಾಶ್ರಮಾಣಾಂ ವರ್ಣಾನಾಂ ಸ್ತ್ರೀಶೂದ್ರಾಣಾಂ ಶಿವಾಜ್ಞಯಾ ।
ಧಾರ್ಯಾ ಸದೈವ ರುದ್ರಾಕ್ಷಾ ಯತೀನಾಂ ಪ್ರಣವೇನ ಹಿ ॥೪॥

ದಿವಾ ಬಿಭ್ರದ್ರಾತ್ರಿಕೃತಂ ರಾತ್ರೌ ಬಿಭ್ರದ್ದಿವಾಕೃತಂ ।
ಪ್ರಾತರ್ಮಧ್ಯಾಹ್ನಸಾಯಾಹ್ನೇ ಬಿಭ್ರನ್ ತತ್ಪೂರ್ವಪಾತಕೈಃ ॥೫॥

ಸದ್ಯ ಏವ ವಿಮುಚ್ಯೇತ ಪಿತೃಹೋಮಾರ್ಚನಾವಿಧೌ ।
ರುದ್ರಾಕ್ಷಧೃಙ್ನರೋ ನಿತ್ಯಂ ತತ್ತದ್ದಶಗುಣಂ ಫಲಂ ॥೬॥

ಪ್ರಾಪ್ನೋತಿ ಶಿವಸಾರೂಪ್ಯಮೇಷೋತ್ರ ವಿಹಿತೋ ವಿಧಿಃ ।
ದೇವದೇವ್ಯಾಶ್ಚ ಸಂವಾದಃ ಕೈಲಾಸೇ ವಿದಿತೋ ಮಯಾ ॥೭॥

ತತ್ತೇಽಹಂ ಸಂಪ್ರವಕ್ಷ್ಯಾಮಿ ತನ್ಮೇ ನಿಗದಿತಂ ಶೃಣು ।
ಯಚ್ಛ್ರುತ್ವಾ ಸರ್ವಪಾಪೇಭ್ಯೋ ಮುಚ್ಯತೇ ಭವಸಾಗರಾತ್ ॥೮॥

---

ರುದ್ರಾಕ್ಷಿಧಾರಣೆಗೆ ಬಳಸುವರು. ಎಲ್ಲ ಆಶ್ರಮಿಗಳಿಗೂ, ಎಲ್ಲ ಜಾತಿಯರಿಗೂ ಸ್ತ್ರೀಯರಿಗೂ ಶಿವನಾಮಮಂತ್ರವೇ ಭಸ್ಮರುದ್ರಾಕ್ಷಧಾರಣೆಗೆ ಪ್ರಶಸ್ತವೆಂದು ಹೇಳಲಾಗಿದೆ. ಯತಿಗಳು ಮಾತ್ರ ಪ್ರಣವಮಂತ್ರದಿಂದ ಧರಿಸಬೇಕು. ॥೩-೪॥

ರುದ್ರಾಕ್ಷಿಯನ್ನು ಹಗಲು ಧರಿಸುವುದರಿಂದ ರಾತ್ರಿಕೃತವಾದ ಪಾಪವೂ, ರಾತ್ರಿ ಧರಿಸುವುದರಿಂದ ದಿವಾಕೃತವಾದ ಪಾಪವೂ, ಪ್ರಾತಃಕಾಲ, ಮಧ್ಯಾಹ್ನ, ಸಾಯಂಕಾಲ ಈ ಕಾಲಗಳಲ್ಲಿ ಧರಿಸುವುದರಿಂದ ಆಯಾ ಪೂರ್ವಕಾಲಗಳಲ್ಲಿ ಮಾಡಿದ ಪಾಪವೂ ಪರಿಹಾರವಾಗುವುದು. ಪಿತೃಕಾರ್ಯ, ದೇವಕಾರ್ಯಗಳಲ್ಲಿ ತೊಡಗಿದವರು ರುದ್ರಾಕ್ಷಿಧಾರಣೆಯಿಂದ ಅವನ್ನು ನಡೆಸಿದರೆ, ಆ ಕರ್ಮಗಳಿಗೆ ಉಕ್ತವಾದ ಸುಕೃತಕ್ಕಿಂತ ದಶಾಧಿಕವಾಗಿ ಪುಣ್ಯವು ಲಭಿಸುವುದು. ಮತ್ತು ಶಿವಸಾಯುಜ್ಯವೂ ಸಿಗುವುದು. ಈ ಮಾತನ್ನು ಶಂಕರನೇ ಪಾರ್ವತಿಯ ಪ್ರಶ್ನೆಗೆ ಉತ್ತರರೂಪವಾಗಿ ಹೇಳಿರುವನು. ಅದನ್ನೇ ನಿನಗೆ ಇನ್ನೂ ವಿಸ್ತಾರವಾಗಿ ಹೇಳುವೆನು ಕೇಳು. ಇದನ್ನು ಕೇಳುವುದರಿಂದ ಸಮಸ್ತ ಪಾಪರಾಶಿಯೂ ಪರಿಹಾರವಾಗುವುದಲ್ಲದೆ ಸಾಂಸಾರಿಕವಾದ ಸಕಲ ತೊಂದರೆಗಳೂ ಪರಿಹಾರವಾಗುವುವು. ॥೫-೬-೭-೮॥

ಸರ್ವೇಷಾಂ ಸರ್ವಪಾಪಾನಾಂ ಶಾಮಕೋಯಂ ಮುನೇ ಸದಾ ॥೯॥

ನಾರುದ್ರಾಕ್ಷಧರೇಣ ಪೂಜಿತಮುಮೇ ಲಿಂಗಂ ನ ಮುಕ್ತಿಪ್ರದಂ
ಕುರ್ವನ್ ತೇನ ವಿವರ್ಜಿತೋತ್ರ ಮನುಜೋ ನೋ ತಸ್ಯ ವಿಂದೇತ್ಫಲಂ ।
ನಿಂದನ್ವಾಪಿ ಸದಾಕ್ಷಿಧಾರಿಣಮಥೋ ಯಾತ್ಯೇವ ವಂಶ್ಯೈರ್ಯುತಂ
ಸಂದಷ್ಟಃ ಕ್ರಿಮಿಭಿಃ ಕ್ಷತಾಂಗರುಧಿರೋ ಮಜ್ಜೇತ್ಸವಿಷ್ಠಾಹ್ರದೇ ॥೧೦॥

ಸ್ನಾನೇ ಸಂಧ್ಯಾಸು ತೀರ್ಥೇ ಪಿತೃತಿಥಿ ಸುವಿಧೌ ಹೋಮಕಾಲೇ ಪ್ರದೋಷೇ
ದೋಷಘ್ನಂ ತ್ರಿದಮೇವ ತರ್ಪಣವಿಧೌ ಧಾರ್ಯಂ ವಿಭೂತ್ಯಾಸಮಂ ।
ತನ್ನ್ಯೂನಾಧಿಕತಾ ಭವೇತ ಯದಿ ಚೇತ್ಸಂಪೂರ್ಣಮೇತದ್ಭವೇತ್
ರುದ್ರಾಕ್ಷೋತ್ತಮಧಾರಣೇನ ಗಿರಿಜೇ ಸತ್ಯಂ ತ್ರಿಸತ್ಯಂ ವದೇ ॥೧೧॥

ವರ್ಣೀ ವನೀ ಗೃಹೀಯತಿರ್ನಿಯಮೇನ ಧಾರ್ಯ
ಮೇತದ್ರಹಸ್ಯಪರಮ್ಯೈರ್ನಹಿ ಜಾತು ತಿಷ್ಠೇತ್ ।

---

ಭಸ್ಮರುದ್ರಾಕ್ಷಧಾರಣೆಯು ಸರ್ವಪಾಪನಾಶಕವಾದದ್ದು. ರುದ್ರಾಕ್ಷಿಯನ್ನು ಧರಿಸದೆ ಮಾಡಿದ ಶಿವಲಿಂಗಾರಾಧನೆಯು ಮುಕ್ತಿಪ್ರದವಾಗಲಾರದು. ರುದ್ರಾಕ್ಷಿ ಧಾರಣೆಯಿಲ್ಲದೆ ನಡೆಸಿದ ಶಿವಾರಾಧನೆಯಿಂದ ಆರಾಧಕನಿಗೆ ಯಾವ ಸತ್ಫಲವೂ ದೊರೆಯಲಾರದು. ರುದ್ರಾಕ್ಷಧಾರಿಯನ್ನು ನಿಂದಿಸಿದವನು ವಂಶಪರಂಪರೆಯಾಗಿ ಹುಳುಗಳಿಂದ ಕೂಡಿದ ಮಲಕೂಪದಲ್ಲಿ ಬಿದ್ದು ಹುಳುಗಳಿಂದ ಕಚ್ಚಲ್ಪಟ್ಟು ನಾನಾ ಯಾತನೆಗಳನ್ನು ಅನುಭವಿಸುವನು. ॥೯-೧೦॥

ಸ್ನಾನ, ಸಂಧ್ಯಾವಂದನೆ, ತೀರ್ಥಯಾತ್ರೆ, ಪಿತೃಕಾರ್ಯಗಳು, ಹೋಮಾದಿಗಳು, ಪ್ರದೋಷಪೂಜಾ ಮುಂತಾದ ಸತ್ಕರ್ಮಾಚರಣೆಯ ಕಾಲದಲ್ಲಿ ಭಸ್ಮರುದ್ರಾಕ್ಷಿಗಳನ್ನು ಧರಿಸುವುದರಿಂದ ಆ ಕರ್ಮಗಳು ಸಂಪೂರ್ಣ ಫಲವನ್ನು ಕೊಡುವುವು. ಒಂದುವೇಳೆ ಆ ಕರ್ಮಗಳು ನ್ಯೂನಾತಿರೇಕವನ್ನು ಹೊಂದಿದ್ದರೂ ಭಸ್ಮರುದ್ರಾಕ್ಷಿಗಳ ಧಾರಣೆಯಿಂದ ಪೂರ್ಣಫಲವನ್ನು ಕೊಡಬಲ್ಲವು. ಇದು ನಿಜವಾಗಿಯೂ ಸತ್ಯವಾಕ್ಯೆಂದು ತಿಳಿ. ॥೧೧॥

ಬ್ರಹ್ಮಚಾರೀ, ಗೃಹಸ್ಥ, ವಾನಪ್ರಸ್ಥ, ಸಂನ್ಯಾಸಿ ಈ ನಾಲ್ಕು ಆಶ್ರಮದವರೂ ನಿಯಮವಾಗಿ ಇದನ್ನು ಧರಿಸಲೇಬೇಕು. ರುದ್ರಾಕ್ಷಧಾರಣೆಯು ಸುಕೃತದಿಂದ

ರುದ್ರಾಕ್ಷಧಾರಣಮಿದಂ ಸುಕೃತೈಶ್ಚ ಲಭ್ಯಂ
ತ್ಯಕ್ತ್ವೇದಮೇತದಖಿಲಾ ನರಕಂ ಪ್ರಯಾಂತಿ ॥೧೨॥

ಯದ್ವಂಶಸಂಭವನರೋ ಭಸಿತೈಕಚಾರು
ರುದ್ರಾಕ್ಷಕುಂಡಲಲಸತ್ಕವಚೋರುವಕ್ಷಾಃ ।
ತಂ ಪಕ್ಷಪಾತ ಸುದೃಶಾಪ್ಯತಿಪಾಪಯುಕ್ತಂ
ತ್ರ್ಯಕ್ಷೋ ನಿರೀಕ್ಷತಿ ಸದಾ ಪಿತೃಭಿಃ ಕಟಾಕ್ಷೈಃ ॥೧೩॥

ಯಸ್ತ್ವೂರ್ಧ್ವಪುಂಡ್ರಮಲಿಕೇಪಿ ಬಿಭರ್ತಿ ಪಾಪ
ಸಂತಾಪತಪ್ತಹೃದಯೋಪಿ ಸದಾ ಭವಾನಿ ।
ರುದ್ರಾಕ್ಷ ಕಂಠವಲಯೋಪಿ ಸಹಾರವಕ್ಷಾಃ
ಕಕ್ಷಾಗ್ನಿಮಧ್ಯಪರಿವರ್ತಿತನುರ್ಭವೇತ ॥೧೪॥

ದೇವಾಸ್ತನ್ಮುಖಸಂಖ್ಯಯಾ ಸುವಿಹಿತಾ ಸ್ತಸ್ಯ ಪ್ರಸನ್ನಾಃ ಶಿವೇ
ಸನ್ನಾ ಏವ ಭವಂತಿ ಪಾಪಗಿರಯಸ್ತಸ್ಯಾರಯೋ ದುಃಖಿತಾಃ ।

---

ಮಾತ್ರ ಲಭಿಸುವುದು. ರುದ್ರಾಕ್ಷಿಯನ್ನು ಧರಿಸದವರು ನಿಜವಾಗಿಯೂ ನರಕಕ್ಕೆ ಬೀಳುವರು. ॥೧೨॥

ಭಸ್ಮರುದ್ರಾಕ್ಷಿಮಾಲೆಗಳನ್ನೂ, ಕವಚಕುಂಡಲಗಳಲ್ಲಿ ರುದ್ರಾಕ್ಷಿಗಳನ್ನೂ ಸದಾ ಯಾವನು ಧರಿಸಿರುವನೋ, ಅವನ ವಂಶದ ಪಿತೃಗಳನ್ನೂ ಸಹ ಶಂಕರನು ನರಕದಿಂದ ಉದ್ಧರಿಸುವನು. ಕಟಾಕ್ಷವೀಕ್ಷಣದಿಂದ ಅವನನ್ನೂ ಅವನ ವಂಶೀಯರೆಲ್ಲರನ್ನೂ ಪರಮೇಶ್ವರನು ಸದಾ ಭೂಲೋಕದಲ್ಲಿ ಸಲಹುವನು. ॥೧೩॥

ಊರ್ಧ್ವಪುಂಡ್ರಧಾರಣೆಯಿಂದಲೂ, ಇನ್ನೂ ಅನೇಕ ಪಾಪಕಾರ್ಯಾಚರಣೆಯಿಂದಲೂ ಮಹಾಪಾಪಿಷ್ಠನೆನಿಸಿರುವ ಮಾನವನು ರುದ್ರಾಕ್ಷಿಸರವನ್ನು ಕಂಠ ಮತ್ತು ಎದೆಯಲ್ಲಿ ಧರಿಸಿದವನಾದರೆ, ಆತನು ಬೆಂಕಿಯ ಮಧ್ಯದಲ್ಲಿ ಸಿಂತು ದೇಹಶುದ್ಧಿಯನ್ನು ಪಡೆದಂತೆ ಪವಿತ್ರಗಾತ್ರನೆನಿಸುವನು. ॥೧೪॥

ಎಷ್ಟು ಮುಖದ ರುದ್ರಾಕ್ಷಿಗಳನ್ನು ಧರಿಸುವರೋ, ಅಷ್ಟು ಜನ ದೇವತೆಗಳು ಅವರಿಗೆ ಪ್ರಸನ್ನರಾಗಿ ಫಲಕೊಡಲು ಸಿದ್ಧರಾಗುವರು. ಅವನ ಪಾಪಪರ್ವತಗಳೆಲ್ಲಾ ಕ್ಷಣಕಾಲದಲ್ಲಿ ನಾಶವಾಗುವುವು. ಶತ್ರುಗಳು ಧ್ವಂಸವಾಗುವರು. ರುದ್ರಾಕ್ಷಿಮಾಲಾ

ರುದ್ರಾ ಏವ ಭವಂತಿ ರುದ್ರಪರಮಾ ರುದ್ರಾಕ್ಷವಕ್ಷಾಸ್ಸದಾ
ರುದ್ರಾಕ್ಷೋತ್ತಮವಕ್ಷಸಾನುಜಪತೋ ಮಂತ್ರೋ ವಿಶಿಷ್ಟಾರ್ಥದಃ ॥೧೫॥

ತನ್ನಾಮಾಕೃತಸಂಖ್ಯಯಾ ಚ ವಿಹಿತೋ ನಿತ್ಯಂ ಶಿವೇ ಪಾವನ
ಸ್ತಸ್ಮಾದೇಯಫಲಂ ಭವೇತ ಸತತಂ ಮದ್ರುದ್ರಪಂಚಾಕ್ಷರಂ ।
ಚಾವೃತ್ಯಾ ಭಸಿತೇನ ದೇಹಗತಕೇನಾಯುಷ್ಯವೃದ್ಧಿರ್ಭವೇತ್[1] ॥೧೬॥

ವಿಷ್ಣುರ್ಬ್ರಹ್ಮಾ ಸುರಾಯೇ ಪಿತೃಮುನಿನಿವಹಾಸ್ತನ್ನಮಸ್ಯಂತಿ ದೂರಾ
ದ್ರುದ್ರಾಕ್ಷೋತ್ತಮವಕ್ಷಸಂ ದ್ವಿಜವರಂ ನೀಚಂ ಜನಂ ವಾ ಶಿವೇ ।
ತದ್ದೃಷ್ಟ್ಯಾಭಿಭವಂತಿ ರಾಕ್ಷಸಗಣಾಃ ಪ್ರೇತಾಃ ಪಿಶಾಚಾಸ್ತಥಾ
ರಕ್ಷಂತ್ಯೇವ ಸದಾ ಮುದಾ ಸುಕೃತಿನಂ ರುದ್ರಾಕ್ಷಯುಕ್ತಂ ನರಂ ॥೧೭॥

ಸಂಕ್ರಾಂತಾವಯನದ್ವಯೇ ಶಶಿರವಿಗ್ರಾಹೇ ಸುಪರ್ವಸ್ವಪಿ
ಧಾರ್ಯಂ ತ್ವೇವಮಿತಿ ದುಶಂತಿ (?) ಶ್ರುತಿಗಿರೋಪುಣ್ಯಂ ಹಿ ರುದ್ರಾಕ್ಷಕಂ ।
ಆಯುಷ್ಯಂ ತ್ವಿಹ ಪುತ್ರ್ಯಮಗ್ರ್ಯಗತಿದಂ ತೂಗ್ರಪ್ರಿಯಸ್ಸ್ಯಾನ್ನರೋ
ಸ್ವರ್ಗ್ಯಂ ಪಾಪಹರಂ ಸದೈವ ವಿಧೃತಂ ಕಿಂ ವಚ್ಮಿತತ್ತೇ ಫಲಂ ॥೧೮॥

---

ಧಾರಿಗಳು ರುದ್ರರೂಪದಿಂದಲೇ ಪಾಪಿಗಳಿಗೆ ತೋರಿಬರುವರು. ರುದ್ರಾಕ್ಷಿಧಾರಿಯು ಮಾಡಿದ ಮಂತ್ರಜಪವು ವಿಶೇಷ ಫಲಪ್ರದವಾಗಿ ಪರಿಣಮಿಸುವುದು. ॥೧೫॥

ರುದ್ರಾಕ್ಷಿಯವದನಗಳ ಸಂಖ್ಯೆ ಹೆಚ್ಚಿದಷ್ಟೂ ಆಯುಸ್ಸು ವೃದ್ಧಿಯಾಗುವುದು. ಅದರಂತೆಯೇ ಫಲವೂ ವೃದ್ಧಿಹೊಂದುವುದು. ಶಿವಪಂಚಾಕ್ಷರೀಮಂತ್ರಜಪ, ಭಸ್ಮ ರುದ್ರಾಕ್ಷಿಧಾರಣೆ ಇವು ಆಯುರ್ವೃದ್ಧಿಕರಗಳೆಂದು ವಿಹಿತವಾಗಿವೆ. ॥೧೬॥

ರುದ್ರಾಕ್ಷಮಾಲಾಧಾರಿಯನ್ನು ನೋಡಿದೊಡನೆಯೇ ಬ್ರಹ್ಮ, ವಿಷ್ಣು, ಪಿತೃ ದೇವತೆಗಳು ಇವರೇಮೊದಲಾದ ದೇವವರ್ಗವೆಲ್ಲಾ ಅವನು ಎಂತಹ ನೀಚಜಾತಿ ಯವನಾಗಿದ್ದರೂ, ವಂದಿಸುವುದು. ಆ ರುದ್ರಾಕ್ಷಧಾರಿಯ ನೋಟದಿಂದಲೇ, ಭೂತ, ಪ್ರೇತ, ಪಿಶಾಚರಾಕ್ಷಸರು ಹೆದರಿ ದೂರ ಓಡಿಹೋಗುವರು. ಒಟ್ಟಿನಲ್ಲಿ ರುದ್ರಾಕ್ಷ ಯುಕ್ತರಾದ ಮಾನವರನ್ನು ಸರ್ವದಾ ಸರ್ವದೇವತೆಗಳೂ ರಕ್ಷಿಸುತ್ತಿರುವರು. ॥೧೭॥

ಸಂಕ್ರಮಣಕಾಲ, ದಕ್ಷಿಣೋತ್ತರಾಯಣ ದಿನಗಳು, ಸೂರ್ಯಚಂದ್ರಗ್ರಹಣ ಸಮಯಗಳು, ಪರ್ವಕಾಲಗಳು, ಈದಿನಗಳಲ್ಲಿ ರುದ್ರಾಕ್ಷಿಯನ್ನು ಧರಿಸಿದವರಿಗೆ,

---

1 ಈ ಶ್ಲೋಕದ ಕೊನೆಯ ಪಾದವು ಮೂಲದಲ್ಲಿಲ್ಲ.

ಏಕಾಕ್ಷಂ ಕಲಿತಂ ಮುದಾಪಿ ಬಿಭೃಯಾತ್ಪುಣ್ಯಂ ತು ರುದ್ರಾಕ್ಷಕಂ
ತಸ್ಯಾನಂತಮಹಾಘಸಂಘಗಿರಯಃ ಕಂಪಂತಿ ಭಿಂದಂತ್ಯಪಿ ।
ಸಾಕ್ಷಾದಕ್ಷಮುಮೇ ಸ್ವವಕ್ಷಸಿ ಧೃತಂ ತ್ರ್ಯಕ್ಷಪ್ರಸಾದಾದ್ಗತಿಂ
ಪ್ರಾಪ್ಯಾನುಕ್ಷಣಮಕ್ಷಿಘಾಲಸುಗಿರಿಂ ಪ್ರಾಪ್ನೋತ್ಯಲಕ್ಷೋ ನರಃ ॥೯॥

ಅರ್ವಾಗಾಮಲಕಾಸ್ತ್ವತೋ ಲಘುತರಾಃ ಕ್ಷುದ್ರಾಸ್ತತೋಽಪ್ಯಂಬಿಕೇ
ಸಂದಷ್ಟಾಃ ಕ್ರಿಮಿಭಿಸ್ತನೂವಕಿಣ್ಯೈಶ್ಛಿದ್ರೇಣ ಹೀನಾಸ್ತಥಾ ।
ಧಾರ್ಯಾ ನೈವ ಶುಭೇಚ್ಛುಭಿಶ್ಚಣಕವದ್ರುದ್ರಾಕ್ಷಮಪ್ಯಂತತೋ
ರುದ್ರಾದೌ ಮಮ ಲಿಂಗಮಂಗಲಮುಮೇ ಕ್ಷುಣ್ಣಂ ಪ್ರಶಸ್ತಂ ಸದಾ ॥೩೦॥

---

ಆಯುಸ್ಸು, ಪುತ್ರಸಂಪತ್ತು, ಮೋಕ್ಷಸುಖ, ಸ್ವರ್ಗಭೋಗ, ಪಾಪನಾಶ ಇವೆಲ್ಲವೂ ಸಂಭವಿಸುತ್ತವೆಯೆಂದು ಶ್ರುತಿಯು ಸರ್ವದಾ ಘೋಷಿಸುತ್ತಿರುವುದು. ಹೀಗಿರುವಾಗ ಇದರವಿಷಯವಾಗಿ ನಿನಗೆ ಮತ್ತೇನನ್ನು ಹೇಳಬಹುದು? ॥೧೮॥

ಯಾವನು ಈಶ್ವರಭಕ್ತಿಯುಕ್ತನಾಗಿ ಮೇಲೆ ಹೇಳಿದ ಪುಣ್ಯದಿನಗಳಲ್ಲಿ ಏಕಾಕ್ಷಯುಕ್ತವಾದ ರುದ್ರಾಕ್ಷಧಾರಣೆಮಾಡುವನೋ, ಅವನ ಸಕಲ ಪಾಪಪರ್ವತಗಳೂ ನಿರ್ಮೂಲವಾಗಿ ನಾಶಹೊಂದುವುವು. ಹೊಸ ಪಾಪರಾಶಿಯು ಅವನನ್ನು ಸ್ಪರ್ಶಿಸುವುದಕ್ಕೂ ಹಿಂಜರಿಯುವುದು. ಒಂದು ರುದ್ರಾಕ್ಷಿಯನ್ನು ವಕ್ಷಸ್ಸಿನಲ್ಲಿ ಧರಿಸಿದವನು ನಿಜವಾಗಿಯೂ ಸಾಕ್ಷಾತ್ಪರಶಿವನನ್ನು ತನ್ನ ಹೃದಯದಲ್ಲಿ ನಿಲ್ಲಿಸಿದಂತೆಯೇ ಆಗುವುದು. ಮಂಗಳಕರನಾದ ಶಂಕರನು ಅಂತಹವನಿಗೆ ವಿಶೇಷವಾದ ಸೌಖ್ಯಗಳನ್ನು ಒದಗಿಸುವನಲ್ಲದೆ, ಈ ಜನ್ಮಕಳೆದ ಮೇಲೆ ಅವನಿಗೆ ತನ್ನ ಸಾನ್ನಿಧ್ಯವನ್ನೇ ಕರುಣಿಸಿ, ಆತನು ಸದಾ ಕೈಲಾಸದಲ್ಲಿ ನಿಲ್ಲುವಂತೆ ಅನುಗ್ರಹಿಸುವನು. ಇದರಲ್ಲಿ ಸಂಶಯವಿಲ್ಲ. ॥೯॥

ರುದ್ರಾಕ್ಷಿಯು ನೆಲ್ಲಿಯಕಾಯಿಯಷ್ಟು ದಪ್ಪ ಅಥವಾ ಸ್ವಲ್ಪಚಿಕ್ಕದಾಗಿದ್ದರೂ ಅದನ್ನು ಧರಿಸಬಹುದು. ಅದು ಹುಳುಗಳಿಂದ ಕೊರೆದದ್ದಾಗಿರಬಾರದು. ಮಧ್ಯಭಾಗದಲ್ಲಿ ರಂಧ್ರವಿರಬೇಕು. ಒಂದೇ ಭಾಗದಲ್ಲಿ ಯಾವಕಾರಣದಿಂದಲೂ ಸವೆದಿರಕೂಡದು. ವದನಗಳು ಸ್ಪಷ್ಟವಾಗಿ ಕಾಣುವಂತಿರಬೇಕು. ಕಡಲೇಕಾಳಿಗಿಂತಲೂ ಕಮ್ಮಿಗಾತ್ರವಿರುವ ರುದ್ರಾಕ್ಷಿಗಳು ಧಾರಣೆಗೆ ಯೋಗ್ಯವಲ್ಲ. ರುದ್ರಮಂತ್ರಪಠನ ಪುರಸ್ಸರವಾಗಿ ಶಿವಲಿಂಗಕ್ಕೆ ಧರಿಸಿದ ರುದ್ರಾಕ್ಷಿಧಾರಣೆಯು ಅತ್ಯಂತ ಪ್ರಶಸ್ತವೆನಿಸುವುದು. ಮತ್ತು ಸನ್ಮಂಗಳಪ್ರದವೆನಿಸುವುದು. ॥೩೦॥

ಸ್ವರ್ಣೇನಾಪಿ ಚ ರಾಜತೇನ ಗಿರಿಜೇ ತಾಮ್ರೇಣ ವಾ ಮೌಕ್ತಿಕೈಃ
ರತ್ನೈರ್ವಿದ್ರುಮಸ್ಫಾಟಿಕಾಕ್ಷಮಣಿಭಿರ್ಮಧ್ಯಾಸ್ಥಿತೈರ್ಧಾರಯೇತ್ ।
ನಾನ್ಯತ್ಸೂತಕಶಾವಯೋರ್ಮಲಜಲೋತ್ಸರ್ಗೇ ತಥಾ ಸಂಗಮೇ
ಧಾರ್ಯಾ ನೋತ್ತಮಮಾಲಿಕಾ ಶ್ರುತಿಗತಾ ವಿಪ್ರೈಸ್ಸದೈವಾದರಾತ್ ॥೨೧॥

ಇತಿ ಶ್ರೀ ಶಿವರಹಸ್ಯೇ ಈಶ್ವರಾಖ್ಯೇ ದಶಮಾಂಶೇ ಪೂರ್ವಾರ್ಧೇ
ರುದ್ರಾಕ್ಷಧಾರಣಮಹಿಮಾವರ್ಣನಂ ನಾಮ ಪಂಚವಿಂಶೋಽಧ್ಯಾಯಃ

---

ಚಿನ್ನದ, ಅಥವಾ ಬೆಳ್ಳಿಯ, ಅಥವಾ ತಾಮ್ರದ ತಂತಿಯಲ್ಲಿ ರುದ್ರಾಕ್ಷಿಗಳನ್ನು ಪೋಣಿಸಿ ಧರಿಸಬಹುದು. ಮಧ್ಯೆಮಧ್ಯೆ ರತ್ನಗಳು, ಹವಳಗಳು, ಸ್ಫಟಿಕಮಣಿಗಳು ಇವುಗಳನ್ನು ಜೋಡಿಸಿರಬಹುದು. ಈ ರುದ್ರಾಕ್ಷಿಮಾಲೆಯನ್ನು, ಜಾತಾಶೌಚ, ಮೃತಾಶೌಚಗಳಲ್ಲಿಯೂ, ಜಲವಿಸರ್ಜನೆಮಾಡುವ ಸಮಯದಲ್ಲಿಯೂ, ಸ್ತ್ರೀಸಂಗ ಮಾದಿ ಕಾಲಗಳಲ್ಲಿಯೂ ಧರಿಸಿರಬಾರದು. ಮಿಕ್ಕೆಲ್ಲವೇಳೆಗಳಲ್ಲಿಯೂ ಸದಾಚಾರ ಸಂಪನ್ನನಾದ ಬ್ರಾಹ್ಮಣನು ಧರಿಸಿರಲೇಬೇಕೆಂಬ ಶ್ರುತಿನಿಯಮವಿರುವುದು. ಪವಿತ್ರ ರುದ್ರಾಕ್ಷಿಧಾರಣೆಯಿಂದ ಮಾನವವೃಂದವು ನಿಜವಾಗಿಯೂ ಶಿವಾನುಗ್ರಹವನ್ನು ಪಡೆಯುವುದೆಂದು ಕುಮಾರಸ್ವಾಮಿಯು ಜೈಗೀಷವ್ಯಾದಿ ಮಹಾಮುನಿಗಳಿಗೆ ವಿವರಿಸಿದನು. ॥೨೧॥

ಇಲ್ಲಿಗೆ ಶ್ರೀಶಿವರಹಸ್ಯದ ಈಶ್ವರನಾಮಕವಾದ ಹತ್ತನೆಯ ಅಂಶದ ಪೂರ್ವಾರ್ಧದಲ್ಲಿ
ರುದ್ರಾಕ್ಷಧಾರಣೆಯ ಮಹಿಮೆಯನ್ನು ವಿವರಿಸುವ ಇಪ್ಪತ್ತೈದನೆಯ
ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ಶ್ರೀ ಶಿವಾಯನಮಃ ॥

# ಅಥ ಶ್ರೀ ಶಿವರಹಸ್ಯೇ

## ಈಶಾನಾಖ್ಯೇ

## ದಶಮಾಂಶೇ ಪೂರ್ವಾರ್ಧೇ

## ಷಡ್ವಿಂಶೋಽಧ್ಯಾಯಃ

॥ ಶ್ರೀಸ್ಕಂದ ಉವಾಚ ॥

ಕೈಲಾಸಶೈಲಸದನೇ ದೇವ್ಯಾ ಪೃಷ್ಟೋ ಮಹೇಶ್ವರಃ ।
ಶತರುದ್ರೀಯಮಾಹಾತ್ಮ್ಯಮಭಿಷೇಕಜಪಕ್ರಮಂ ॥೧॥

ಅತಿರುದ್ರಮಹಾರುದ್ರವಿಧಿಮೇಕಾದಶಾವೃತ್ತೈಃ ।
ಜಪಾಧಿಕಾರಿಣಂ ಚಾಪಿ ಪ್ರೋಕ್ತವಾನ್ಪರಮೇಶ್ವರಃ ॥೨॥

ತತ್ತೇಽಹಂ ಸಂಪ್ರವಕ್ಷ್ಯಾಮಿ ತ್ವಮಿಹೈಕಮನಾಃ ಶೃಣು ॥೩॥

---

## ಇಪ್ಪತ್ತಾರನೆಯ ಅಧ್ಯಾಯ

ಕೈಲಾಸಪರ್ವತ ಗೃಹದಲ್ಲಿ ಪಾರ್ವತಿಯಿಂದ ಪ್ರಶ್ನಿಸಲ್ಪಟ್ಟ ಮಹಾದೇವನು ಶತರುದ್ರೀಯಮಹಿಮೆ, ಶತರುದ್ರೀಯಾಭಿಷೇಕ ಮತ್ತು ಶತರುದ್ರಜಪಕ್ರಮ, ಹನ್ನೊಂದು ಸಂಖ್ಯೆಯಿಂದ ವೃದ್ಧಿಯಾಗುವ ಅತಿರುದ್ರ ಮತ್ತು ಮಹಾರುದ್ರಗಳ ವಿಧಿ, ಇವುಗಳ ಜಪಕ್ಕೆ ಅಧಿಕಾರಿಗಳು, ಮುಂತಾದವುಗಳನ್ನೆಲ್ಲಾ ಪಾರ್ವತಿಗೆ ವಿಸ್ತಾರವಾಗಿ ಹೇಳಿದನು. ಜೈಗೀಷವ್ಯನೇ, ಅದನ್ನು ನಾನು ನಿನಗೆ ಈಗ ಹೇಳುವೆನು. ನೀನು ಸಾವಧಾನಮನಸ್ಕನಾಗಿ ಕೇಳು ಎಂದು ಕುಮಾರಸ್ವಾಮಿಯು ಹೇಳಲು, ಕೂಡಲೇ ಜೈಗೀಷವ್ಯಮಹಾಮುನಿಯು, ॥೧-೨-೩॥

॥ ಜೈಗೀಷವ್ಯ ಉವಾಚ ॥

ಕಥಂ ದೇವ್ಯಾ ಪುರಾ ಪೃಷ್ಟಃ ಶಿಪಿವಿಷ್ಟೋ ಮಹೇಶ್ವರಃ ।
ಶ್ರೀರುದ್ರಮಂತ್ರಮಾಹಾತ್ಮ್ಯಮುಕ್ತವಾಸ್ತಜ್ಜಪೇ ವಿಧಿಂ ॥೪॥

ತನ್ಮೇ ವಿಸ್ತರತೋ ಬ್ರೂಹಿ ನಿಸ್ತಾರಾಯ ಭವಾರ್ಣವೇ ॥೫॥

॥ ಸೂತ ಉವಾಚ ॥

ಜೈಗೀಷವ್ಯವಚಃ ಶ್ರುತ್ವಾ ಸುಬ್ರಹ್ಮಣ್ಯೋಂಬಿಕಾಸುತಃ ।
ದೇವ್ಯೈ ದೇವೇನ ಕಥಿತಮುವಾಚ ವಿಧಿವಿಸ್ತರಂ ॥೬॥

॥ ಸುಬ್ರಹ್ಮಣ್ಯ ಉವಾಚ ॥

ಕೈಲಾಸಶಿಖರೇ ದೇವ್ಯಾ ಪೃಷ್ಟೋ ರುದ್ರವಿಧಿಂ ಹರಃ ।
ಸಂತುಷ್ಟೇನೈವ ಮನಸಾ ಪ್ರಾಹ ದೇವೋ ಮಹೇಶ್ವರಃ ॥೭॥

---

ಕುಮಾರಸ್ವಾಮಿಯೇ, ಕಿರಣರೂಪದಿಂದ ಸರ್ವವ್ಯಾಪಿಯಾಗುವ ಮಹೇಶ್ವರನನ್ನು ಕುರಿತು ದೇವಿಯು ಹೇಗೆ ಪ್ರಶ್ನೆಮಾಡಿದಳು? ಮಹಾದೇವನು ಅದಕ್ಕೆ ಶ್ರೀ ರುದ್ರಮಂತ್ರಮಹಿಮೆ ಮತ್ತು ಅದರ ಜಪವಿಧಿಯನ್ನು ಯಾವರೀತಿ ತಿಳಿಸಿದನು? ಈ ಸಂಸಾರಸಾಗರದಿಂದುದ್ಧಾರವಾಗಲು ಅದನ್ನು ನನಗೆ ವಿಸ್ತಾರವಾಗಿ ನಿರೂಪಿಸೆಂದು ಅತಿವಿನಯದಿಂದ ಸ್ಕಂದನನ್ನು ಪ್ರಾರ್ಥಿಸಿದನು ಎಂಬುದಾಗಿ ಸೂತಮಹರ್ಷಿಗಳು ವಾಜಶ್ರವಸಾದಿಗಳಿಗೆ ವಿವರಿಸುತ್ತಾ ಋಷಿವೃಂದವನ್ನು ಕುರಿತು, ॥೪-೫॥

ವಾಜಶ್ರವಸಾದಿ ಮಹರ್ಷಿಗಳೇ, ಹಾಗೆ ಪ್ರಾರ್ಥಿಸಿದ ಜೈಗೀಷವ್ಯನ ಮಾತುಗಳನ್ನು ಕೇಳಿ, ಅಂಬಿಕಾಪುತ್ರನಾದ ಸುಬ್ರಹ್ಮಣ್ಯಸ್ವಾಮಿಯು ಮಹಾದೇವನು ಪಾರ್ವತಿಗೆ ಹೇಳಿದ ವಿಧಿಯನ್ನು ವಿಸ್ತಾರವಾಗಿ ಹೀಗೆ ಹೇಳಿದನೆಂದು, ಆ ಸ್ಕಂದೋಕ್ತಿಯನ್ನು ಅನುವಾದಮಾಡಲಾರಂಭಿಸಿದರು. ॥೬॥

ಜೈಗೀಷವ್ಯಮಹರ್ಷಿಯೇ ಕೇಳು. ಕೈಲಾಸಪರ್ವತಶಿಖರದಲ್ಲಿ ದೇವಿಯಿಂದ ರುದ್ರಮಂತ್ರವಿಷಯವಾಗಿ ಪ್ರಶ್ನೆಮಾಡಲ್ಪಟ್ಟ ಮಹೇಶ್ವರನು ದೇವಿಯನ್ನು ಕುರಿತು ಸಂತೋಷಭರಿತವಾದ ಮನಸ್ಸಿನಿಂದ ಹೀಗೆ ನಿರೂಪಿಸಿದನು. ಆ ಮೊದಲು ಪಾರ್ವತಿಯು ಈ ರೀತಿ ಪರಶಿವನನ್ನು ಪ್ರಶ್ನೆಮಾಡಿದಳು. ॥೭॥

॥ ಉಮೋವಾಚ ॥

ದೇವದೇವ ಮಹಾದೇವ ಶೂಲಪಾಣೇ ಜಗತ್ಪ್ರಭೋ ।
ಶ್ರೀರುದ್ರಾಣಾಂ ಚ ಮಾಹಾತ್ಮ್ಯಂ ವದ ಮೇ ಕರುಣಾರ್ಣವ ॥೮॥

ಅಭಿಷೇಕೇ ಜಪೇಚೈವ ಮಹಾರುದ್ರಾತಿರುದ್ರಕೇ ।
ಪುಣ್ಯಪಾಪಹರಾ ಶಂಭೋ ಶ್ರುತಿರ್ನೋ ಯಾಜುಷೀವರಾ ॥೯॥

ಪಾಪಾನಾಂ ನಾಶಿನೀ ದೇವ ರುದ್ರೈಕಾದಶನೀವಿಧಿಃ ॥೧೦॥

॥ ಶ್ರೀಸ್ಕಂದ ಉವಾಚ ॥

ತದಾ ದೇವ್ಯಾ ವಚಃ ಶ್ರುತ್ವಾ ಪ್ರಾಹ ದೇವೋ ಮಹೇಶ್ವರಃ ।
ರುದ್ರಾತಿರುದ್ರಮಾಹಾತ್ಮ್ಯಂ ಜಾಪ್ಯೇ ಚೈವಾಭಿಷೇಚನೇ ॥೧೧॥

॥ ಶ್ರೀ ಈಶ್ವರ ಉವಾಚ ॥

ಶತರುದ್ರಿಯಮಾಹಾತ್ಮ್ಯಮಧುನಾ ಸಂಪ್ರವಕ್ಷ್ಯತೇ ।
ಯಸ್ಯ ವಿಜ್ಞಾನಮಾತ್ರೇಣ ಪಾಪನಾಶಃ ಪ್ರಜಾಯತೇ ॥೧೨॥

---

ದೇವಾದಿದೇವನಾದ ಮಹಾದೇವನೇ, ತ್ರಿಶೂಲಪಾಣಿಯಾದ ಜಗದೊಡೆಯನೇ, ದಯಾಸಮುದ್ರನೇ, ಶ್ರೀ ರುದ್ರಮಂತ್ರಗಳ ಮಹಿಮೆಯನ್ನು ನನಗೆ ಈಗ ಹೇಳುವನಾಗು; ಶಂಭುವೇ, ಮಹಾರುದ್ರ ಮತ್ತು ಅತಿರುದ್ರಮಂತ್ರಗಳ ಅಭಿಷೇಕ ಮತ್ತು ಜಪಕಾರ್ಯಗಳಲ್ಲಿ ಪುಣ್ಯಕರವೂ, ಪಾಪನಾಶಕವೂ ಆದ ಯಜುರ್ವೇದಮಂತ್ರವು ಅತ್ಯಂತ ಶ್ರೇಷ್ಠವಾದುದಲ್ಲವೆ! ಈ ರುದ್ರಮಂತ್ರವನ್ನು ಹನ್ನೊಂದುಸಾರಿ ಜಪ ಮಾಡುವ ಜಪವಿಧಿಯು ಸಕಲಪಾಪಗಳನ್ನೂ ನಾಶಪಡಿಸುವುದೆಂದು ಕೇಳಿರುವೆನು. ಅದರ ವಿಧಿಯನ್ನು ನನಗೆ ವಿಸ್ತರಿಸಿ ಬೋಧಿಸಬೇಕು. ॥೮-೯-೧೦॥

ಎಂದು ಕೇಳಿದ ಪಾರ್ವತಿಯ ಪ್ರಾರ್ಥನೆಯಂತೆ ಮಹಾದೇವನು ಜಪ ಮತ್ತು ಅಭಿಷೇಕಯೋಗ್ಯವಾದ ರುದ್ರ ಮತ್ತು ಅತಿರುದ್ರಗಳ ಮಹಿಮೆಯನ್ನು ತಿಳಿಸುತ್ತಾ ಈ ರೀತಿ ನುಡಿದನು. ॥೧೧॥

ದೇವಿಯೇ, ಯಾವುದರ ತಿಳಿವಳಿಕೆಯ ಮಾತ್ರದಿಂದಲೇ ಸಕಲ ಮಾನವರ ಪಾಪಗಳೂ ನಾಶವಾಗುವುವೋ ಅಂತಹ ಶತರುದ್ರೀಯ ಮಂತ್ರದ ಮಹಿಮೆಯನ್ನು

ಋಗ್ವೇದೇ ಚ ಯಜುರ್ವೇದೇ ಸಾಮಾಥರ್ವಣವೇದಕೇ ।
ಸಾರಾತ್ಸಾರತರಂ ಪುಣ್ಯಂ ಶತರುದ್ರೀಯಮೀರಿತಂ ॥೧೩॥

ಶ್ರುತಸ್ಯಾಧ್ಯಯನಂ ಯಸ್ಯ ಸ್ಯಾದಧೀತಸ್ಯ ನಾಶನಂ ।
ಸ ವೇದಬಾಹ್ಯ ಇತ್ಯುಕ್ತಃ ಸರ್ವಕರ್ಮಬಹಿಷ್ಕೃತಃ ॥೧೪॥

ದೇವೇ ಪಿತ್ರ್ಯಾದಿಕಾರ್ಯೇಷು ಸ ನ ಯೋಗ್ಯಃ ಕದಾಚನ ।
ಯಸ್ಯಾಯಾತಿ ಮಹಾವಿದ್ಯಾ ಶತರುದ್ರೀಯನಾಮಿಕಾ ॥೧೫॥

ತೇನಾಭ್ಯಸ್ತಾಶ್ಚತುರ್ವೇದಾ ಅನಧೀತಾ ಅಪಿ ದ್ವಿಜಾಃ ।
ಜಪ್ಯತೇ ಶತರುದ್ರೀಯಂ ಯೇನ ನಿತ್ಯಂ ದ್ವಿಜೋತ್ತಮಾಃ ॥೧೬॥

ಸ ಏವ ದೇವಪಿತ್ರ್ಯಾದಿ ಕರ್ಮಯೋಗ್ಯೋ ನ ಸಂಶಯಃ ।
ಉಪಾಸ್ಯ ನಿತ್ಯಂ ಗಾಯತ್ರೀಂ ಪ್ರಜಪ್ತ್ವಾ ಶತರುದ್ರಿಯಂ ॥೧೭॥

---

ಈಗ ನಾನು ಹೇಳಿರುವೆನು. ಋಗ್ವೇದ, ಯಜುರ್ವೇದ, ಸಾಮವೇದ ಮತ್ತು ಅಥರ್ವಣವೇದಗಳಲ್ಲಿ ಅತ್ಯಂತಸಾರಭೂತವೂ ಪುಣ್ಯಕರವೂ ಆದ ಮಂತ್ರವು ಶತರುದ್ರೀಯವೆಂದೇ ನಿಶ್ಚಿತವಾಗಿದೆ. ॥೧೨-೧೩॥

ವೇದಾಧ್ಯಯನ ಮಾಡದಿರುವವನೂ, ವೇದಾಧ್ಯಯನ ಮಾಡಿ ಎಲ್ಲವನ್ನೂ ಮರೆತಿರುವವನೂ, ವೇದಬಾಹ್ಯರೆನಿಸಿ ಸಕಲ ಕರ್ಮಗಳಲ್ಲಿಯೂ ಬಹಿಷ್ಕರಿಸಲ್ಪಡುವರು. ಅವನು ದೇವ ಮತ್ತು ಪಿತೃಕಾರ್ಯಗಳಿಗೆ ಎಂದಿಗೂ ಯೋಗ್ಯನೆನಿಸಲಾರನು. ಶತರುದ್ರೀಯಸಂಜ್ಞಕವಾದ ಈ ಮಹಾವಿದ್ಯೆಯು ಯಾರಿಗೆ ಸ್ವಾಧೀನವಾಗಿರುವುದೋ ಅವನು ಅಧ್ಯಯನ ಮಾಡದಿದ್ದರೂ ಋಗ್ವೇದಾದಿ ನಾಲ್ಕು ವೇದಗಳನ್ನೂ ಓದಿದಂತೆಯೇ ಪರಿಗಣಿಸಲ್ಪಡುವನು. ॥೧೪-೧೫॥

ಬ್ರಾಹ್ಮಣೋತ್ತಮರೆ, ನಿತ್ಯವೂ ಶತರುದ್ರಿಯಮಂತ್ರವನ್ನು ಜಪಮಾಡುವ ವಿಪ್ರನೇ ದೇವತಾ ಮತ್ತು ಪಿತೃಕಾರ್ಯಗಳಿಗೆ ಯೋಗ್ಯನೆನಿಸುವನು. ನಿತ್ಯವೂ ಗಾಯತ್ರೀಮಂತ್ರವನ್ನು ಪುರಶ್ಚರಣೆಮಾಡಿ ಅನಂತರ ಶತರುದ್ರೀಯಮಂತ್ರವನ್ನು ಜಪಿಸಿದವರು ಬ್ರಹ್ಮರ್ಷಿಪದವಿಯನ್ನು ಹೊಂದಿ ಬ್ರಹ್ಮಸ್ವರೂಪವನ್ನೈದಲು ಸಮರ್ಥರಾಗುತ್ತಾರೆ. ॥೧೬-೧೭॥

ಬ್ರಹ್ಮರ್ಷಿತ್ವಮಯಂ ಪ್ರಾಪ್ಯ ಬ್ರಹ್ಮಭೂಯಾಯ ಕಲ್ಪತೇ ।
ತ್ಯಕ್ತ್ವಾ ಯಃ ಶತರುದ್ರೀಯಮನ್ಯಜ್ಜಪ್ತುಮಿಹೇಚ್ಛತಿ ॥೧೮॥

ಸ್ವಗೃಹೇ ಪಾಯಸಂ ತ್ಯಕ್ತ್ವಾ ಭಿಕ್ಷಾಮಟತಿ ದುರ್ಮತಿಃ
ತ್ಯಕ್ತ್ವಾ ಯಃ ಶತರುದ್ರೀಯಮನ್ಯಜ್ಜಪ್ತುಮಿಹೇಚ್ಛತಿ ।
ತಟಾಕಸ್ಥ ಜಲಂ ತ್ಯಕ್ತ್ವಾ ಮೃಗತೃಷ್ಣಾಸು ಧಾವತಿ ॥೧೯॥

ತ್ಯಕ್ತ್ವಾ ಯಃ ಶತರುದ್ರೀಯಮನ್ಯಜ್ಜಪ್ತುಮಿಹೇಚ್ಛತಿ ।
ಕಾಮಧೇನುಪಯಸ್ತ್ಯಕ್ತ್ವಾ ಖರಕ್ಷೀರಂ ಪ್ರಧಾವತಿ ॥೨೦॥

ತ್ಯಕ್ತ್ವಾ ಯಃ ಶತರುದ್ರೀಯಮನ್ಯಜ್ಜಪ್ತುಮಿಹೇಚ್ಛತಿ ।
ಸುಹೇಮಭಾರಂ ತ್ಯಕ್ತ್ವಾ ಸಾವಯಃ ಪಿಂಡಂ ಪ್ರಧಾವತಿ ॥೨೧॥

ಯಥೇಂದ್ರಜಾಲಿಕಾಲಾಭಃ ಕ್ಷಣಮಾತ್ರಸುಖಾವಹಃ ।
ಏತಸ್ಮಾದಪರಾ ವಿದ್ಯಾಸ್ತಾದೃಶಾ ಮುನಿಪುಂಗವಾಃ ॥೨೨॥

ವೇದಾನಾಮಪಿ ಶಾಸ್ತ್ರಾಣಾಂ ಪುರಾಣಾನಾಮಪಿ ದ್ವಿಜಾಃ ।
ಶತರುದ್ರೀಯಮಾಹಾತ್ಮ್ಯಂ ಕಥನಾತ್ತದುಪಾಸ್ಯತಾಂ ॥೨೩॥

---

ಈ ಶತರುದ್ರೀಯ ಮಂತ್ರವನ್ನು ಬಿಟ್ಟು ಬೇರೆ ಬೇರೆ ಮಂತ್ರಗಳನ್ನು ಜಪಿಸ ಲಪೇಕ್ಷಿಸುವವನು ತನ್ನ ಮನೆಯಲ್ಲಿ ಮಾಡಿರುವ ಪಾಯಸವನ್ನು ಊಟಮಾಡದೆ ಬುದ್ಧಿಹೀನನಾಗಿ ಭಿಕ್ಷೆಬೇಡುವನಂತಾಗುವನು. ಕೆರೆಯಲ್ಲಿ ನೀರಿದ್ದರೂ ಅದನ್ನು ಬಿಟ್ಟು, ಬಿಸಿಲು ಕುದುರೆಯನ್ನು ನೀರೆಂದು ತಿಳಿದು ಧಾವಿಸುವವನಂತೆ ಮೂರ್ಖನೆನಿಸುವನು. ಕಾಮಧೇನುವಿನ ಹಾಲನ್ನು ತೊರೆದು ಕತ್ತೆ ಹಾಲನ್ನು ಕುಡಿಯಲು ಹಾತೊರೆಯುವನಂತೆಯೂ, ಅಪರಂಜಿ ಚಿನ್ನದ ಗಟ್ಟಿಯಿದ್ದರೂ ಅದನ್ನು ತ್ಯಜಿಸಿ ಕಬ್ಬಿಣದ ಗುಂಡನ್ನು ನೋಡಿ ಓಡುವನಂತೆಯೂ ಆತನು ವ್ಯರ್ಥ ಶ್ರಮವುಳ್ಳವನಾಗುವನು. ॥೧೮-೧೯-೨೦-೨೧॥

ಓ ಮುನಿಶ್ರೇಷ್ಠರೆ, ಇಂದ್ರಜಾಲಿಕಾವಿದ್ಯಾಲಾಭವು ಕ್ಷಣಕಾಲ ಮಾತ್ರ ಸುಖವನ್ನುಂಟುಮಾಡುವಂತೆ ಈ ರುದ್ರಮಂತ್ರವನ್ನು ಬಿಟ್ಟು ಉಳಿದ ವಿದ್ಯೆಗಳೆಲ್ಲವೂ ತತ್ಕಾಲದಲ್ಲಿ ಮಾತ್ರ ಸುಖಪ್ರದಗಳೆನಿಸುವುವು. ಓ ವಿಪ್ರರೆ, ಎಲ್ಲ ವೇದಗಳೂ,

ಬ್ರಹ್ಮಾದಯಃ ಸುರಾಃ ಸರ್ವೇ ವಸಿಷ್ಠಾದ್ಯಾ ಋಷೀಶ್ವರಾಃ ।
ಸನಕಾದ್ಯಾಶ್ಚ ಯೋಗೀಂದ್ರಾ ಜೀವನ್ಮುಕ್ತಾಃ ಶುಕಾದಯಃ ॥೨೪॥

ಬ್ರಹ್ಮರ್ಷಯೋ ಮರೀಚ್ಯಾದ್ಯಾ ನಾರದಾದ್ಯಾಃ ಸುರರ್ಷಯಃ ।
ಯಕ್ಷಕಿಂನರಗಂಧರ್ವಸಿದ್ಧವಿದ್ಯಾಧರಾದಯಃ ॥೨೫॥

ಪ್ರಜಪ್ಯಾ ಶತರುದ್ರೀಯಂ ಶ್ರುತಿಸಾರಮಹೋದಯಂ ।
ಅವಾಪ್ಯ ಸಕಲಾನ್ಕಾಮಾನ್ಜಪಂತ್ಯದ್ಯಾಪಿ ಸರ್ವದಾ ॥೨೬॥

ಕೃತೇ ಯುಗೇ ತು ಋಗ್ವೇದಮಂತ್ರಾ ಜಪ್ಯಾಃ ಸದಾದ್ವಿಜೈಃ ।
ಅಥರ್ವಾಂಗಿರಸಾ ವಿದ್ಯಾ ಜಪ್ಯಾ ತ್ರೇತಾಯುಗೇ ಸದಾ ॥೨೭॥

ಪ್ರಜಪ್ತವ್ಯಾನಿ ಸಾಮಾನಿ ಯುಗೇ ದ್ವಾಪರನಾಮಕೇ ।
ಪ್ರಜಪ್ತವ್ಯೋ ಯಜುರ್ವೇದೋ ಯುಗೇಽಸ್ಮಿನ್ಕಲಿನಾಮಕೇ ॥೨೮॥

---

ಶಾಸ್ತ್ರಗಳೂ, ಪುರಾಣಗಳೂ ಈ ಶತರುದ್ರೀಯ ಮಂತ್ರಮಹಿಮೆಯನ್ನು ಹೇಳುವುದರಿಂದ ಇದು ಸರ್ವದಾ ಉಪಾಸನೀಯವೆನಿಸಿದೆ. ॥೨೨-೨೩॥

ಬ್ರಹ್ಮನೇ ಮೊದಲಾದ ಸಕಲ ದೇವತೆಗಳೂ, ವಸಿಷ್ಠಾದಿಗಳಾದ ಋಷಿವರ್ಯರೂ ಸನಕಸನಂದನಾದಿ ಯೋಗಿವರ್ಯರೂ, ಶುಕರೇ ಮುಂತಾದ ಜೀವನ್ಮುಕ್ತರೂ, ಮರೀಚಿಯೇ ಮೊದಲಾದ ಬ್ರಹ್ಮರ್ಷಿಗಳೂ, ನಾರದರೇ ಮೊದಲಾದ ದೇವರ್ಷಿಗಳೂ, ಯಕ್ಷ, ಕಿನ್ನರ, ಗಂಧರ್ವ, ಸಿದ್ಧ ಮತ್ತು ವಿದ್ಯಾಧರರೇ ಮೊದಲಾದ ದೇವಯೋನಿಗಳೂ, ಒಟ್ಟುಗೂಡಿ ವೇದಸಾರವೂ ವಿಶೇಷ ಮಹಿಮೆಯುಳ್ಳದೂ ಆದ ಈ ಶತರುದ್ರೀಯ ಮಂತ್ರವನ್ನು ಜಪಿಸಿ, ಸಕಲ ಇಷ್ಟಾರ್ಥಗಳನ್ನೂ ಪಡೆದಿರುವರಲ್ಲದೇ ಈಗಲೂ ಅದನ್ನು ತಪ್ಪದೆ ಜಪಿಸುತ್ತಿರುವರು. ॥೨೪-೨೫-೨೬॥

ಓ ವಿಪ್ರರೆ, ಕೃತಯುಗದಲ್ಲಿ ಬ್ರಾಹ್ಮಣರು ಯಾವಾಗಲೂ ಋಗ್ವೇದ ಮಂತ್ರಗಳನ್ನು ಜಪಿಸಬೇಕು ; ತ್ರೇತಾಯುಗದಲ್ಲಿ ಅಥರ್ವಣವಿದ್ಯಾಮಂತ್ರವೂ, ದ್ವಾಪರದಲ್ಲಿ ಸಾಮವೇದಮಂತ್ರವೂ, ಕಲಿಯುಗದಲ್ಲಿ ಯಜುರ್ವೇದ ಮಂತ್ರವೂ ಪ್ರಧಾನವಾಗಿ ಜಪಿಸಲು ಯೋಗ್ಯವೆನಿಸಿರುವುದು. ॥೨೭-೨೮॥

ವೇದಾಃ ಸರ್ವೇಽಪಿ ಜಪ್ತವ್ಯಾ ಯುಗೇಷು ತ್ರಿಷು ಚ ದ್ವಿಜಾಃ ।
ಶತರುದ್ರೀಯಮಭ್ಯಸ್ಯೇತ್ಸತತಂ ನಿಯಮೇನ ಯಃ ॥೨೯॥

ಸ ಏವ ವಿಪ್ರಲೋಕೇಷು ಪೂಜ್ಯೋ ವಂದ್ಯೋ ನ ಸಂಶಯಃ ।
ಸ ವ್ರತೀ ಸ ತಪಸ್ವೀ ಚ ಸ್ತೋತವ್ಯಃ ಸ ಯತಿಪ್ರಿಯಃ ॥೩೦॥

ಸ ಚಾಚಾರ್ಯಃ ಸ ಮತಿಮಾನ್ಸ ಜ್ಞಾನೀ ಸ ಚ ಸಾಧಕಃ ।
ಸ ಯಜ್ವಾ ಸ ಚ ಪೂತಾತ್ಮಾ ಸ ದೈವಜ್ಞಃ ಸಮಾಂತ್ರಿಕಃ ॥೩೧॥

ಸ ಯೋಗೀ ಸ ಚ ದೇವರ್ಷಿಃ ಸ ಬ್ರಹ್ಮರ್ಷಿಃ ಸುರೋತ್ತಮಃ ।
ಸ ಬ್ರಹ್ಮಾ ಸ ವಿಧಾತಾ ಚ ಸ ವಿಷ್ಣುಃ ಶಂಕರೋ ದ್ವಿಜಾಃ ॥೩೨॥

ತತ್ಕುಲಂ ಪಾವನಂ ನಿತ್ಯಂ ಧನ್ಯಾ ತಜ್ಜನನೀ ಸದಾ ।
ತತ್ಪಿತಾ ಚ ಕೃತಾರ್ಥಃ ಸ್ಯಾನ್ಮುಕ್ತಾಸ್ತತ್ಪಿತರೋ ದ್ವಿಜಾಃ ॥೩೩॥

---

ಓ ಬ್ರಾಹ್ಮಣರೆ, ಕೃತ, ತ್ರೇತ ಮತ್ತು ದ್ವಾಪರವೆಂಬ ಮೂರು ಯುಗಗಳಲ್ಲಿ ಎಲ್ಲಾ ವೇದಮಂತ್ರಗಳನ್ನೂ ಜಪಮಾಡಬಹುದು. ಆದರೆ ನಿಯಮದಿಂದ ಶತರುದ್ರೀಯಮಂತ್ರವನ್ನು ಅನವರತವೂ ಜಪಿಸುವವನೇ ಲೋಕಗಳಲ್ಲೆಲ್ಲಾ ಪೂಜಾರ್ಹನೂ, ನಮಸ್ಕಾರಾರ್ಹನೂ ಎನಿಸುವನು. ಇದರಲ್ಲಿ ಸಂಶಯವಿಲ್ಲ. ಆತನೇ ವ್ರತನಿಯಮಪಾಲಕನೂ, ತಪಸ್ವಿಯೂ, ಸ್ತೋತ್ರಯೋಗ್ಯನೂ ಅಲ್ಲದೇ ಯತಿಪ್ರಿಯನೂ ಆಗುವನು. ಅಂತಹವನು ಇತರರಿಗೆ ಪೂಜ್ಯನೆನಿಸುವನು. ॥೨೯-೩೦॥

ತಪ್ಪದೆ ಶತರುದ್ರೀಯಮಂತ್ರಗಳನ್ನು ಜಪಿಸುವ ಪುಣ್ಯಾತ್ಮನು ಆಚಾರ್ಯನೂ, ಬುದ್ಧಿವಂತನೂ, ಜ್ಞಾನಿಯೂ, ಸಾಧಕನೂ, ಯಜಮಾನನೂ, ಪವಿತ್ರಾಂತ ರಂಗನೂ, ದೈವಜ್ಞನೂ, (ಜೋಯಿಸನೂ) ಮಂತ್ರಸಿದ್ಧಿಪಡೆದವನೂ, ಯೋಗಿಯೂ, ಎನಿಸುವನು. ಅಷ್ಟೇ ಅಲ್ಲ. ಆತನು ದೇವತೋತ್ತಮರಾದ, ಬ್ರಹ್ಮ, ವಿಧಾತೃ, ವಿಷ್ಣು, ಶಂಕರ ಇವರಿಗೆ ಸಮನೆನಿಸುವನು. ಓ ವಿಪ್ರರೆ, ಅವನ ವಂಶವೇ ಪಾವನವೆನಿಸುವುದು. ಅವನ ತಾಯಿಯು ಯಾವಾಗಲೂ ಧನ್ಯಳೆನಿಸುವಳು. ಆವನ ತಂದೆಯು ಕೃತಕೃತ್ಯನು, ಅಲ್ಲದೆ ಆತನ ಪಿತೃದೇವತೆಗಳೆಲ್ಲರೂ ಅದರಿಂದ ತೃಪ್ತರಾಗುವರು. ॥೩೧-೩೨-೩೩॥

ಪುಣ್ಯಾಸ್ತದ್ವಂಶಜಾಃ ಸರ್ವೇ ಪೂತಾಸ್ತನ್ಮಿತ್ರಬಾಂಧವಾಃ ।
ಕಿಮತ್ರ ಬಹುನೋಕ್ತೇನ ಸಾರಂ ವಕ್ಷ್ಯೇ ಮುನೀಶ್ವರಾಃ ॥೩೪॥

ಶತರುದ್ರೀಯಜಪ್ತಾರಂ ದೃಷ್ಟ್ವಾ ಸ್ಪೃಷ್ಟ್ವಾ ಸ್ಮರನ್ನಪಿ ।
ಸಂಭಾಷ್ಯ ವಾ ಸಮಾಯಾತಿ ರಾಜಸೂಯಾಧಿಕಂ ಫಲಂ ॥೩೫॥

ಯಸ್ಮಿನ್ದೇಶೇ ಸ್ಥಿತಾ ವಿಪ್ರಾಃ ಶತರುದ್ರೀಯಜಾಪಕಾಃ ।
ದಿವ್ಯಕ್ಷೇತ್ರಂ ತದುದ್ದಿಷ್ಟಂ ಸಮಂತಾದ್ಯೋಜನಾಯುತಂ ॥೩೬॥

ತತ್ರೈವ ದೇವಾಸ್ತಿಷ್ಠಂತಿ ವೇದಾಯಜ್ಞಾಃ ಸಮಂತ್ರಕಾಃ ।
ಮುನಯಃ ಸಿದ್ಧಯಸ್ತತ್ರ ಋಷಯಃ ಪಿತೃಭಿಃ ಸಹ ॥೩೭॥

ಇದಂ ಚ ಪರಮಂಶ್ರೇಯೋ ಇದಮೇವ ಪರಂ ತಪಃ ।
ಇದಮೇವ ಪರಂ ತೀರ್ಥಮಿದಮೇವ ಮಹಾದ್ಭುತಂ ॥೩೮॥

---

ಅವನ ವಂಶದವರೆಲ್ಲರೂ ಪುಣ್ಯಪುರುಷರೇ ಎನಿಸುವರು ; ಅವನ ಸ್ನೇಹಿತರು, ಬಂಧುಗಳೂ ಸಹ ಪಾವನರಾಗುವರು: ಓ ಮುನಿಪುಂಗವರೆ, ಹೆಚ್ಚು ವಿಸ್ತಾರ ಪಡಿಸುವುದರಿಂದ ಪ್ರಯೋಜನವೇನು ? ಸಾರವನ್ನು ಮಾತ್ರ ಹೇಳುತ್ತೇನೆ ಕೇಳಿರಿ ; ಈ ಶತರುದ್ರೀಯಮಂತ್ರ ಜಪಮಾಡುವವನನ್ನು ದರ್ಶನಮಾಡಿ, ಮುಟ್ಟಿ, ಸ್ಮರಿಸಿ ಕೊಂಡು ಅಥವಾ ಮಾತನಾಡಿಸಿ, ತನ್ನ ಮನೆಗೆ ಹೋಗುವವನೂ ಸಹ ರಾಜ ಸೂಯಯಾಗಕ್ಕಿಂತಲೂ ಮಿಗಿಲಾದ ಫಲವನ್ನು ಪಡೆಯುತ್ತಾನೆ. ॥೩೪-೩೫॥

ಈ ಶತರುದ್ರೀಯಮಂತ್ರವನ್ನು ಜಪಮಾಡುವ ವಿಪ್ರರು ಯಾವ ದೇಶದಲ್ಲಿ ಹೆಚ್ಚಾಗಿ ನೆಲಸಿರುವರೋ ಆ ಪ್ರದೇಶದ ಸುತ್ತಲೂ ಯೋಜನವಿಸ್ತಾರವುಳ್ಳ ಭೂಮಿ ಯೆಲ್ಲಾ ದಿವ್ಯಕ್ಷೇತ್ರವೆನಿಸುವುದು. ಸಕಲ ವೇದಗಳೂ, ಮಂತ್ರಸಹಿತಗಳಾದ ಸಮಸ್ತ ಯಜ್ಞಗಳೂ ಸಹ ಅಲ್ಲಿಯೇ ನೆಲಸಿರುವುವು. ಮುನಿಗಳು, ಸಿದ್ಧಿಗಳೂ, (ಅಣಿಮಾ ದ್ಯಷ್ಟಸಿದ್ಧಿಗಳೂ) ಋಷಿಗಳೂ, ಪಿತೃದೇವತೆಗಳೊಡನೆ ಅಲ್ಲಿಯೇ ಸದಾ ವಾಸ ಮಾಡಲು ಇಚ್ಛಿಸುವರು. ॥೩೬-೩೭॥

ಈ ಶತರುದ್ರೀಯಮಂತ್ರಜಪವೇ ಪರಮಶ್ರೇಯಸ್ಕರವಾದ, ದಿವ್ಯತಪಸ್ಸು, ಶ್ರೇಷ್ಠವಾದ ತೀರ್ಥ, ಅತ್ಯದ್ಭುತವಾದ ಪರಮದೀಕ್ಷೆ, ಉತ್ತಮವಾದ ಗತಿ, ಶ್ರೇಷ್ಠ

ಇದಮೇವ ಪರಾ ದೀಕ್ಷಾ ಇದಮೇವ ಪರಾಗತಿಃ ।
ಇದಮೇವ ಪರೋ ಯೋಗೋ ಇದಮೇವ ಪರಂ ಸುಖಂ ॥೩೯॥

ಇದಮೇವ ಪರಂ ಪುಣ್ಯಮಿದಮೇವ ಮಹಾಫಲಂ ।
ಅಯಮೇವ ಸದಾಚಾರೋ ಅಯಮೇವ ಮಹಾಮಖಃ ॥೪೦॥

ಅಯಂ ಸರ್ವೋಪನಿಷದಾಂ ಸಾರಭೂತಾರ್ಥಸಂಗ್ರಹಃ ।
ನಿರ್ಮಲಂ ನಿರ್ಗುಣಂ ನಿತ್ಯಂ ನಿಷ್ಕಲಂ ಚ ನಿರಂಜನಂ ॥೪೧॥

ಅನಂತಮವ್ಯಯಂ ಜ್ಯೋತಿರ್ಮನೋವಾಚಾಮಗೋಚರಂ ।
ಅದಿಮಧ್ಯಾಂತರಹಿತಂ ಸರ್ವಭೂತಹೃದಿ ಸ್ಥಿತಂ ॥೪೨॥

ಸ್ವಪ್ರಕಾಶಂ ಪರಂ ಬ್ರಹ್ಮ ಸತ್ಯಾನಂದಚಿದಾತ್ಮಕಂ ।
ಸತತಂ ಶತರುದ್ರೀಯಜಪಾತ್ಸಾಕ್ಷಾತ್ಪ್ರಕಾಶತೇ ॥೪೩॥

ಬ್ರಹ್ಮಹತ್ಯಾ ಶತಂ ವಾಪಿ ಸುರಾಪಾನಶತಂ ತು ವಾ ।
ಮಾತೃಹತ್ಯಾದಿಕಂ ವಾಪಿ ಪಿತೃಹತ್ಯಾದಿಕಂ ತು ವಾ ॥೪೪॥

---

ಯೋಗ, ಶಾಶ್ವತಸುಖ, ಅಕೃತ್ರಿಮಪುಣ್ಯ, ಮಹಾಪ್ರಯೋಜನ, ಸದಾಚಾರ, ಮಹಾಯಜ್ಞ, ಇವೆಲ್ಲವೂ ಈ ಶತರುದ್ರೀಯಮಂತ್ರಜಪದಿಂದಲೇ ಸಿದ್ಧಿಸುವುದು. ॥೩೮-೩೯-೪೦॥

ಇದೇ ಸಮಸ್ತ ಉಪನಿಷತ್ತುಗಳ ಸಾರಭೂತವಾದ ಅರ್ಥಗಳ ಸಂಗ್ರಹವು. ಮಲರಹಿತವೂ, ಗುಣಶೂನ್ಯವೂ, ಶಾಶ್ವತವೂ, ಕಲಂಕವಿಲ್ಲದುದೂ, ನಿರ್ಲಿಪ್ತವೂ, ನಾಶವಿಲ್ಲದುದೂ, ಅಪಾಯರಹಿತವೂ, ಜ್ಯೋತಿಸ್ವರೂಪವೂ, ಮನಸ್ಸು, ಮಾತು ಇವುಗಳಿಗೆ ಗೋಚರವಾಗದುದೂ, ಆದಿ, ಮಧ್ಯ ಮತ್ತು ಅಂತಗಳಿಲ್ಲದುದೂ, ಸಕಲ ಪ್ರಾಣಿಗಳ ಮನಸ್ಸಿನಲ್ಲಡಗಿರುವುದೂ, ಸ್ವಪ್ರಕಾಶವೂ, ಪರಬ್ರಹ್ಮವೂ, ಸತ್ಯ, ಆನಂದ ಮತ್ತು ಚಿತ್ಸ್ವರೂಪವೆನಿಸಿರುವುದೂ ಆದ ಪರಬ್ರಹ್ಮವಸ್ತುವು ಅನವರತವೂ ಈ ಶತರುದ್ರೀಯ ಮಂತ್ರಜಪದಿಂದ ಸಾಕ್ಷಾತ್ಪ್ರಕಾಶವಾಗಿ ತನ್ಮಯತೆಯು ತನಗೆ ಲಭಿಸುವುದು. ॥೪೧-೪೨-೪೩॥

ನೂರುಬಾರಿ ಮಾಡಿದ ಬ್ರಹ್ಮಹತ್ಯೆ, ನೂರುಸಾರಿ ನಡೆಸಿದ ಸುರಾಪಾನ ಅಧಿಕಸಂಖ್ಯೆಯ ಮಾತೃಹತ್ಯೆ, ಪಿತೃಹತ್ಯೆ ಇವು ಎಷ್ಟೇ ಅಧಿಕವಾಗಿದ್ದರೂ ಈ ಶತರು

ಶತರುದ್ರೀಯಜಪತೋ ವಿನಶ್ಯತಿ ನ ಸಂಶಯಃ ।
ಶತರುದ್ರೀಯಮಭ್ಯಸ್ಯ ನಿಯತೋ ನಿಯತಾಶನಃ ॥೪೫॥

ಪುತ್ರಪೌತ್ರಮತಿವೃದ್ಧಿಮಣಿಮಾದಿಗುಣಾನ್ವಿತಂ ।
ಅವಾಪ್ಯ ಜೀವನ್ಮುಕ್ತಃ ಸನ್ವಿದ್ಯತೇ ನಾತ್ರ ಸಂಶಯಃ ॥೪೬॥

ಸಾಷ್ಟಾಂಗಯೋಗಾಭ್ಯಾಸೇನ ನ ದಾನೇನ ನಚೇಜ್ಯಯಾ ।
ನ ವೇದೈರ್ನಾಗಮೈಶ್ಶಾಸ್ತ್ರೈರ್ನ ಪುರಾಣೈಃ ಸುವಿಸ್ತರೈಃ ॥೪೭॥

ಗತಿರ್ಭವತಿ ಮರ್ತ್ಯಾನಾಂ ಶತರುದ್ರೀಯಜಾಪಿನಾಂ ।
ವೇದಸಾರಮಿದಂ ಗುಹ್ಯಂ ಪಾವನಂ ಸರ್ವದೇಹಿನಾಂ ॥೪೮॥

ಮಹಾಪಾಪಕ್ಷಯಕರಂ ಮಹಾಪುಣ್ಯಫಲಪ್ರದಂ ।
ಯಜುರ್ವೇದೇ ಚತುರ್ಥೇಽಸ್ಮಿನ್ಕಾಂಡೇ ಪ್ರಶ್ನೇ ಹಿ ಪಂಚಮಃ ॥೪೯॥

---

ದ್ರೀಯಮಂತ್ರಜಪದಿಂದ ಸಮಸ್ತ ಪಾಪವೂ ನಾಶವಾಗುವುದು. ನಿಯಮದಿಂದ ಈ ಶತರುದ್ರೀಯಮಂತ್ರವನ್ನು ಅಭ್ಯಾಸಮಾಡಿ, ನಿಯಮದಿಂದ ಊಟಮಾಡುವವನು, ಮಕ್ಕಳು, ಮೊಮ್ಮಕ್ಕಳುಗಳ ಅಭಿವೃದ್ಧಿರೂಪವಾದ ಶ್ರೇಯಸ್ಸನ್ನೂ ಅಣಿಮಾದ್ಯಷ್ಟೈಶ್ವರ್ಯಸಂಪತ್ತಿಯನ್ನೂ ಪಡೆದು ಜೀವನ್ಮುಕ್ತನಂತೆ ಜೀವಿಸುವುದರಲ್ಲಿ ಸಂದೇಹವಿಲ್ಲ. ॥೪೪-೪೫-೪೬॥

ಯಮ, ನಿಯಮ, ಆಸನ, ಪ್ರಾಣಾಯಾಮ, ಪ್ರತ್ಯಾಹಾರ, ಧ್ಯಾನ, ಧಾರಣ, ಮುಂತಾದ ಅಷ್ಟಾಂಗಗಳುಳ್ಳ ಯೋಗಾಭ್ಯಾಸ, ಗೋಭೂಹಿರಣ್ಯದಾನಗಳು, ಯಾಗ, ವೇದ, ಆಗಮ, ಪುರಾಣ, ವಿಸ್ತಾರವಾದ ಶಾಸ್ತ್ರ, ಇವುಗಳ ಅಭ್ಯಾಸ, ಇವುಗಳಾವುದರಿಂದಲೂ ಲಭಿಸಲಾರದ ಮೋಕ್ಷವು ಶತರುದ್ರೀಯಮಂತ್ರಜಪಮಾಡುವ ಮಾನವರಿಗೆ ಮಾತ್ರ ಸುಲಭವಾಗಿ ದೊರೆಯುವುದು. ಓ ವಿಪ್ರರೆ, ಇದು ವೇದದ ರಹಸ್ಯವಾದ ಸಾರವು, ರಹಸ್ಯಾಂಶವು, ಸಕಲ ಪ್ರಾಣಿಗಳನ್ನೂ ಪಾವನಗೊಳಿಸುವುದು. ಬ್ರಹ್ಮಹತ್ಯೆ, ಸುರಾಪಾನ, ಸ್ವರ್ಣಸ್ತೇಯ, ಗುರುಪತ್ನೀಗಮನ ಮತ್ತು ಈ ನಾಲ್ವರ ಸಹವಾಸರೂಪವಾದ ಮಹಾಪಾಪ, ಇವುಗಳನ್ನು ನಾಶಮಾಡುವುದಲ್ಲದೆ ಅದು ವಿಶೇಷ ಪುಣ್ಯಪ್ರದವೂ ಎನಿಸಿರುವುದು. ॥೪೭-೪೮॥

ಯಜುರ್ವೇದದ ನಾಲ್ಕನೆಯ ಕಾಂಡದಲ್ಲಿ ಐದನೆಯ ಪ್ರಶ್ನೆಯಲ್ಲಿ ಸಿದ್ಧಪ್ರದ

ಅಸ್ಮಿನ್ಪ್ರಶ್ನೇ ಶತರುದ್ರಮಂತ್ರಾಸ್ತಿಷ್ಠಂತಿ ಸಿದ್ಧಿದಾಃ ।
ತಸ್ಮಾದೇತದ್ವೇದಸಾರಂ ಶತರುದ್ರೀಯಮೀರಿತಂ ॥೫೦॥

ಶತರುದ್ರೀಯಜಪತೋ ಬ್ರಹ್ಮ ಸಾಕ್ಷಾತ್ಪ್ರಕಾಶತೇ ।
ಜಾತಿಸ್ಮರತ್ವಮಾಸಾದ್ಯ ಭವೇತ್ಸಾಕ್ಷಾತ್ಪರಃ ಶಿವಃ ॥೫೧॥

ಶತರುದ್ರೀಯಮಾಹಾತ್ಮ್ಯಂ ಕಿಂಚಿದೇತನ್ಮಯೋದಿತಂ ।
ಸರ್ವಪಾಪಪ್ರಶಮನಂ ಕಿಂ ಭೂಯಃ ಶ್ರೋತುಮಿಚ್ಛಥ ॥೫೨॥

ವೇದಕ್ಷೀರಮಹಾರ್ಣವೋದ್ಯಸದಧಿಪ್ರೋದ್ಯತ್ಸುಮಂಥಾನವ
ಚ್ಛ್ರೀರುದ್ರಾಂತರಮಧ್ಯಸಂಸ್ಥಿತಮಹಾಪಂಚಾಕ್ಷರಾವೃತ್ತಿಭಾಕ್ ।
ತನ್ಮಧ್ಯಸ್ಥಶಿವಾಭಿಧಾನಮಸಕೃಜ್ಜಪ್ತ್ವಾ ಜನೋ ಮುಕ್ತಿಭಾ
ಗ್ಯೋಗ್ಯಾಯುಷ್ಯಮುಪಾರ್ಜತೇ ಸ ಯಜುಷಾಂ ಮಧ್ಯಾರ್ಥಸಾರೋದರೋ
ದೂರಾತ್ಪಾಪಮಪಾಕರೋತಿ ಸ ತದಾ ಶಂಭೋಃ ಪ್ರಸಾದಾತ್ಸ ವೈ ॥೫೩॥

ಇತಿ ಶ್ರೀಶಿವರಹಸ್ಯೇ ಈಶ್ವರಾಖ್ಯೇ ದಶಮಾಂಶೇ ರುದ್ರಾಧ್ಯಾಯ
ಮಹಿಮಾವರ್ಣನಂ ನಾಮ ಷಡ್ವಿಂಶೋಽಧ್ಯಾಯಃ

---

ಗಳಾದ ಶತರುದ್ರಮಂತ್ರಗಳಿರುವುವು. ಆ ಭಾಗದಿಂದಲೇ ವೇದಸಾರಭೂತವಾದ ಈ ರುದ್ರಮಂತ್ರಗಳು ಪ್ರಕಾಶಿಸಲ್ಪಟ್ಟಿವೆ. ॥೪೯-೫೦॥

ಈ ಶತರುದ್ರೀಯ ಮಂತ್ರಜಪದಿಂದ ಸಾಕ್ಷಾತ್ಪರಬ್ರಹ್ಮಸ್ವರೂಪವು ಪ್ರತ್ಯಕ್ಷವಾಗುವುದು. ಹಿಂದಿನ ಜನ್ಮಗಳ ಸ್ಮರಣೆಯನ್ನು ಪಡೆದು ಅವನು ಸಾಕ್ಷಾತ್ಪರ ಶಿವನೇ ಎನಿಸುವನು. ಓ ವಿಪ್ರರೆ, ಈ ಶತರುದ್ರಮಂತ್ರದ ಮಹಿಮೆಯಲ್ಲಿ ಕೊಂಚ ಭಾಗವು ಮಾತ್ರ ನನ್ನಿಂದ ಹೇಳಲ್ಪಟ್ಟಿದೆ. ಇದು ಸಕಲ ಪಾಪಗಳನ್ನೂ ಶಮನ ಮಾಡಬಲ್ಲುದು. ಓ ಜೈಗೀಷವ್ಯಾದಿ ಮುನಿಗಳೆ, ಮತ್ತೇನು ಕೇಳಬಯಸುವಿರಿ? ಎಂದು ಕುಮಾರಸ್ವಾಮಿಯು ಆಸಕ್ತಿಯಿಂದ ಹೇಳಿದನು. ॥೫೧-೫೨॥

ವೇದವೆಂಬ ಕ್ಷೀರಸಮುದ್ರದಿಂದುಂಟಾದ ಮೊಸರನ್ನು ಚೆನ್ನಾಗಿ ಕಡೆದು ಅದರಿಂದ ಬಂದ ಶ್ರೀರುದ್ರಮಂತ್ರದ ಮಧ್ಯದಲ್ಲಿರುವ ಶ್ರೀ ಶಿವಪಂಚಾಕ್ಷರೀಮಹಾ ಮಂತ್ರವನ್ನು ಆವೃತ್ತಿಮಾಡುತ್ತಾ ಆ ಮಂತ್ರಮಧ್ಯಗತವಾದ ಶಿವನಾಮವನ್ನು

ಅನೇಕ ಬಾರಿ ಜಪಿಸಿದರೆ ಮಾನವನು ಮುಕ್ತನಾಗುವನು. ಅವನು ಇಹದಲ್ಲಿ ಸಂಪೂರ್ಣವಾದ ಆಯುಷ್ಯವನ್ನು ಪಡೆದು ಯಜುರ್ವೇದ ಮಂತ್ರಗಳ ಮಧ್ಯ ಭಾಗದಲ್ಲಿ ಸಾರವತ್ತಾದ ಈ ರುದ್ರದಲ್ಲಿ ಆದರಹೊಂದಿ, ಮಹಾದೇವನ ಕೃಪೆಯಿಂದ ಸಕಲ ಪಾಪಗಳನ್ನೂ ದೂರದಿಂದಲೇ ಹೋಗಲಾಡಿಸಿಕೊಳ್ಳುತ್ತಾನೆ ಎಂಬುದರಲ್ಲಿ ಸಂಶಯವಿಲ್ಲ. ||೫೩||

ಇಲ್ಲಿಗೆ ಶ್ರೀಶಿವರಹಸ್ಯದಲ್ಲಿ ಈಶ್ವರಸಂಜ್ಞಕವಾದ ಹತ್ತನೆಯ ಅಂಶದಲ್ಲಿ
ರುದ್ರಾಧ್ಯಾಯದ ಪ್ರಭಾವವರ್ಣನೆಯೆಂಬ ಇಪ್ಪತ್ತಾರನೆಯ
ಅಧ್ಯಾಯವು ಮುಗಿದುದು.

---

॥ ಶ್ರೀಃ ॥

॥ ಶ್ರೀ ಶಿವಾಯನಮಃ ॥

# ಅಥ ಶ್ರೀಶಿವರಹಸ್ಯೇ

## ಈಶಾನಾಖ್ಯೇ

## ದಶಮಾಂಶಪೂರ್ವಾರ್ಧೇ

## ಸಪ್ತವಿಂಶೋಽಧ್ಯಾಯಃ

॥ ಶ್ರೀ ಸ್ಕಂದ ಉವಾಚ ॥

ಭಗವನ್ಸರ್ವತತ್ವಜ್ಞ ಸ್ಕಂದ ಶಂಕರಸಂಭವ ।
ಕಾಂಡೇ ಚತುರ್ಥೇ ಯಜುಷಿ ಪ್ರಶ್ನೇಽಸ್ಮಿನ್ಪಂಚಮೇ ಶುಭೇ ॥೧॥

ರುದ್ರಮಂತ್ರಾಃ ಶತಂ ತಸ್ಮಾಚ್ಛತರುದ್ರೀಯಮುಚ್ಯತೇ ।
ನಾಮಾನಿ ಶ್ರೋತುಮಿಚ್ಛಾಮಿ ತೇಷಾಂ ಸ್ಕಂದ ಮಹಾಮತೇ ॥೨॥

॥ ಸೂತ ಉವಾಚ ॥

ಜೈಗೀಷವ್ಯವಚಃ ಶ್ರುತ್ವಾ ಸ್ಕಂದಃ ಸೂದಿತತಾರಕಃ ।
ನಮಸ್ಕೃತ್ಯ ಮಹಾದೇವಂ ಪ್ರವಕ್ತುಮುಪಚಕ್ರಮೇ ॥೩॥

---

## ಇಪ್ಪತ್ತೇಳನೆಯ ಅಧ್ಯಾಯ

ಸಮಸ್ತ ತತ್ವಗಳನ್ನು ಅರಿತವನೂ, ಶಂಕರಪುತ್ರನೂ, ಷಡ್ಗುಣೈಶ್ವರ್ಯ ಪರಿಪೂರ್ಣನೂ ಆದ ಸ್ಕಂದದೇವನೆ, ಯಜುರ್ವೇದದ ನಾಲ್ಕನೆಯ ಕಾಂಡದ ಮಂಗಳ ಕರವಾದ ಐದನೆಯ ಪ್ರಶ್ನೆಯಲ್ಲಿ ನೂರುರುದ್ರಮಂತ್ರಗಳು ಹೇಳಲ್ಪಟ್ಟಿವೆಯಾದ್ದ ರಿಂದ ಆ ಮಂತ್ರಕ್ಕೆ ಶತರುದ್ರೀಯವೆಂದು ಹೆಸರಾಗಿದೆ ಎಂದು ಹೇಳಿದೆಯಲ್ಲವೆ! ಕುಮಾರಸ್ವಾಮಿಯೇ, ಮಹಾ ಮೇಧಾವಿಯಾದ ನಿನ್ನಿಂದ ಆ ಮಹಾದೇವನ ದಿವ್ಯನಾಮಗಳನ್ನು ಕೇಳಲಿಚ್ಛಿಸುತ್ತೇನೆಂದು ಜೈಗೀಷವ್ಯಮುನಿಯು ಸ್ಕಂದನನ್ನು ವಿನಯದಿಂದ ಪುನಃ ಪ್ರಾರ್ಥಿಸಿದನು. ॥೧-೨॥

ಓ ಶೌನಕಾದಿಮುನಿಗಳಿರಾ, ಹೀಗೆ ಕೇಳಿಕೊಂಡ ಜೈಗೀಷವ್ಯನ ಮಾತು

॥ ಸ್ಕಂದ ಉವಾಚ ॥

ಶತರುದ್ರೀಯಮಾಹಾತ್ಮ್ಯಂ ಭೂಯೋ ವಕ್ಷ್ಯಾಮಿ ತೇ ಶೃಣು ।
ಯಸ್ಯ ವಿಜ್ಞಾನಮಾತ್ರೇಣ ಸಿದ್ಧಿಃ ಕರತಲೇ ಸ್ಥಿತಾ ॥೪॥

ವೇದೇಷು ಶತರುದ್ರೀಯಂ ದೇವತಾಸು ಮಹೇಶ್ವರಃ ।
ಕ್ಷೇತ್ರೇಷು ಚಾವಿಮುಕ್ತಂ ಮೇ ಮಂತ್ರೇ ಪಂಚಾಕ್ಷರೋ ವರಃ ॥೫॥

ಭೂಷಣೇಷು ಯಥಾ ಮುಖ್ಯಂ ರುದ್ರಾಕ್ಷಂ ಪಾವನಂ ದ್ವಿಜ ।
ಪುರಾಣೇಷು ಯಥಾ ಸ್ಕಾಂದಂ ಸರ್ವಸ್ಮೃತಿಷು ಮಾನವೀ ॥೬॥

ನೃಣಾಂ ಯಥಾ ದ್ವಿಜೋ ಮುಖ್ಯೋ ದ್ವಿಜೇಷ್ವಪಿ ಚ ಶಾಂಭವಃ ।
ಪಾಪನಾಶಕರಂ ವಿಪ್ರ ಯಥಾ ಭಸ್ಮೈವ ಪಾವನಂ ॥೭॥

ಯಥಾ ಪ್ರಮಾಣಂ ಮಾನಾನಾಂ ಶ್ರುತಿರೇವ ಸನಾತನೀ ।
ಇತಿಹಾಸೇಷು ಪರಮಂ ಯಥಾ ಶಿವರಹಸ್ಯಕಂ ॥೮॥

---

ಗಳನ್ನು ಕೇಳಿ ತಾರಕಾಸುರನನ್ನು ಧ್ವಂಸಮಾಡಿದ ಕುಮಾರಸ್ವಾಮಿಯು ಮಹಾದೇವನಿಗೆ ನಮಸ್ಕಾರಮಾಡಿ, ಮುಂದೆ ಹೇಳಲುಪಕ್ರಮಿಸಿದನೆಂದು ಸೂತರು ವಾಜಶ್ರವಸಾದಿಗಳಿಗೆ ಹೇಳಿದರು. ಆಗ ಸ್ಕಂದನು, ಓ ಜೈಗೀಷವ್ಯನೇ, ಆದೇ ಶತರುದ್ರೀಯಮಂತ್ರಮಹಿಮೆಯನ್ನು ಪುನಃ ಹೇಳುತ್ತೇನೆ ಕೇಳು ; ಇದರ ತಿಳುವಳಿಕೆಯ ಮಾತ್ರದಿಂದಲೇ ಸಕಲ ಸಿದ್ಧಿಗಳೂ ಅಂಗೈನಲ್ಲಿದ್ದಂತೆಯೇ ಆಗುವುವು. ॥೩-೪॥

ವೇದಗಳಲ್ಲಿ ಶತರುದ್ರೀಯವೂ, ದೇವತೆಗಳಲ್ಲೆಲ್ಲಾ ಮಹೇಶ್ವರನೂ, ಕ್ಷೇತ್ರಗಳಲ್ಲಿ ಅವಿಮುಕ್ತಕ್ಷೇತ್ರವೆನಿಸಿದ ಕಾಶಿಯೂ, ಮಂತ್ರಗಳಲ್ಲೆಲ್ಲಾ ಶಿವಪಂಚಾಕ್ಷರವೂ, ಲೋಕದಲ್ಲಿ ಶ್ರೇಷ್ಠಗಳೆನಿಸಿವೆ. ಅಯ್ಯ ದ್ವಿಜನೆ, ಆಭರಣಗಳಲ್ಲಿ ಪವಿತ್ರವಾದ ರುದ್ರಾಕ್ಷವೂ, ಪುರಾಣಗಳಲ್ಲಿ ಸ್ಕಾಂದಪುರಾಣವೂ, ಸ್ಮೃತಿಗಳಲ್ಲೆಲ್ಲಾ ಮನುಸ್ಮೃತಿಯೂ, ಮಾನವರಲ್ಲಿ ವಿಪ್ರನೂ, ವಿಪ್ರರಲ್ಲಿಯೂ ಶೈವದ್ವಿಜನೂ ಶ್ರೇಷ್ಠರೆನಿಸಿರುವರು. ಓ ಬ್ರಾಹ್ಮಣನೆ, ಪಾಪನಾಶಕರವಾದ ವಸ್ತುಗಳಲ್ಲಿ ಭಸ್ಮವೇ ಅತ್ಯಂತ ಪವಿತ್ರವಾಗಿರುವಂತೆಯೂ ಎಲ್ಲಾ ಪ್ರಮಾಣಗಳಲ್ಲಿಯೂ ಅನಾದಿಯಾದ ವೇದವೇ ಮುಖ್ಯ ಪ್ರಮಾಣವಾಗಿರುವಂತೆಯೂ, ಇತಿಹಾಸಗಳಲ್ಲೆಲ್ಲಾ ಶಿವರಹಸ್ಯವೇ ಅತ್ಯಂತ ಶ್ರೇಷ್ಠವೆನಿಸಿಕೊಂಡಿರುವುದು. ॥೫-೬-೭-೮॥

ಶತಮಸ್ಮಿನ್ಮಹಾಮಂತ್ರಾಸ್ತಿಷ್ಠಂತಿ ಭುವಿ ದುರ್ಲಭಾಃ ।
ಋಷಿಶ್ಛಂದೋ ದೇವತಾಭಿರ್ವಿನಿಯೋಗೈಃ ಸಮನ್ವಿತಾಃ ॥೯॥

ಜಪೇತ್ಸಮಗ್ರಂ ನಮಕಂ ಸಮಗ್ರಂ ಚಮಕಂ ತಥಾ ।
ರುದ್ರಮಿತ್ಯುಚ್ಯತೇ ಸದ್ಭಿರ್ಮಹಾಘೌಘವಿನಾಶನಂ ॥೧೦॥

ನಮಕಂ ಚಮಕೈಕೇನಾನುವಾಕಯುತಂ ಜಪೇತ್ ।
ಏವಮೇಕಾದಶಾವೃತ್ಯಾ ರುದ್ರೈಕಾದಶನೀ ಸ್ಮೃತಾ ॥೧೧॥

ರುದ್ರೈಕಾದಶಿನೀಂ ಜಪ್ತ್ವಾ ತಥೈಕಾದಶನೀಂ ಪುನಃ ।
ಶ್ರೀರುದ್ರಮಿತಿ ವಿದ್ವದ್ಭಿಃ ಕಥ್ಯತೇ ಭುಕ್ತಿಮುಕ್ತಿದಂ ॥೧೨॥

ಶ್ರೀರುದ್ರೈಕಾದಶಾವೃತ್ಯಾ ಮಹಾರುದ್ರಮುದಾಹೃತಂ ।
ತಥೈಕಾದಶಧಾ ಜಪ್ತ್ವಾ ಅತಿರುದ್ರಮಿತಿ ಸ್ಮೃತಂ ॥೧೩॥

---

ಋಷಿ, ಛಂದಸ್ಸು, ದೇವತೆ ಮತ್ತು ವಿನಿಯೋಗಗಳಿಂದ ಕೂಡಿದ್ದಾಗಿ ಭೂಮಿಯಲ್ಲಿ ಜನಸಾಮಾನ್ಯಕ್ಕೆ ದುರ್ಲಭವಾದ ನೂರು ಮಂತ್ರಗಳು ಈ ಶತರುದ್ರೀಯಾಧ್ಯಾಯದಲ್ಲಿವೆ. ಜಪಮಾಡುವಾಗ ಸಂಪೂರ್ಣವಾಗಿ ನಮಕ ಮತ್ತು ಚಮಕಾಧ್ಯಾಯಗಳನ್ನು ಜಪಮಾಡಬೇಕು. ಹಾಗೆ ಒಂದುಸಾರಿ ಜಪಿಸಿದರೆ ಅದು ಮಹಾಪಾಪಗಳ ಗುಂಪನ್ನೂ ನಾಶಮಾಡುವ ರುದ್ರವೆನಿಸುತ್ತದೆ. ಪೂರ್ಣವಾಗಿ ನಮಕಮಂತ್ರವನ್ನೂ ಚಮಕದ ಒಂದೊಂದು ಅನುವಾಕವನ್ನೂ ಹೇಳಿ ಹಾಗೆಯೇ ಕ್ರಮವಾಗಿ ಹನ್ನೊಂದು ಬಾರಿ ಜಪ ಮಾಡಿದರೆ 'ರುದ್ರೈಕಾದಶಿನೀ' ಎನಿಸುವುದು. ॥೯-೧೦-೧೧॥

ಈ ರುದ್ರೈಕಾದಶಿನಿಯನ್ನು ಹನ್ನೊಂದುಬಾರಿ ಅಂದರೆ ರುದ್ರವನ್ನು ನೂರಿಪ್ಪತ್ತೊಂದು ಸಾರಿ ಜಪಿಸಿದರೆ ಅದು ಭೋಗಮೋಕ್ಷಗಳನ್ನು ಕೊಡುವ 'ಶ್ರೀರುದ್ರ'ವೆನಿಸಿಕೊಳ್ಳುವುದು. ಇಂತಹ ಶ್ರೀರುದ್ರಗಳು ಹನ್ನೊಂದು ಬಾರಿ ಜಪಿಸಲ್ಪಟ್ಟರೆ ಅದಕ್ಕೆ ಮಹಾರುದ್ರವೆಂಬ ಹೆಸರು ಬರುವುದು. ಅಂತಹ ಮಹಾರುದ್ರಗಳು ಹನ್ನೊಂದು ಬಾರಿ ಜಪಿಸಲ್ಪಟ್ಟರೆ ಆಗ ಅದು 'ಅತಿರುದ್ರ'ವೆನಿಸಿಕೊಳ್ಳುವುದು. ॥೧೨-೧೩॥

ನಾಮಧೇಯಾನಿ ವಕ್ಷ್ಯಾಮಿ ಮಂತ್ರಾಣಾಂ ಚ ಪೃಥಕ್ಪೃಥಕ್ ।
ವ್ಯೋಮಬೀಜಾದಿಕೋ ಮಂತ್ರಃ ಪ್ರಥಮಃ ಪರಿಕೀರ್ತಿತಃ ॥೧೪॥

ವಾಮದೇವರ್ಷಿಸಂಯುಕ್ತೋ ದ್ವಾತ್ರಿಂಶಾರ್ಣ ಉದಾಹೃತಃ ।
ಸಾಂಬಾಖ್ಯದೇವತಾಯುಕ್ತೋಽನುಷ್ಟುಪ್ಛಂದೋಽಷ್ಟಸಿದ್ಧಿದಃ ॥೧೫॥

ಪವನಾದಿಸ್ತೃತೀಯಃ ಸ್ಯಾದ್ದೈವತಂ ಛಂದಸಾನ್ವಿತಃ ।
ಅಂತರ್ಯಾಮೀ ಋಷಿಃ ಸಾಂಬಶಿವದೇವೋಽಷ್ಟಸಿದ್ಧಿದಃ ॥೧೬॥

ಚತುರ್ಥೋ ವಾಯುಬೀಜಾದಿರನುಷ್ಟುಪ್ಛಂದಸಾನ್ವಿತಃ ।
ಅಭೀಷ್ಟಸಿದ್ಧಿದಃ ಪ್ರೋಕ್ತಃ ಸ್ಕಂದರ್ಷಿಸ್ತ್ರಿಪುರಾಂತಕಃ ॥೧೭॥

ಅಮೃತಾದ್ಯಾದಿಮೋ ಮಂತ್ರೋ ಗಾಯತ್ರೀಛಂದಸಾವೃತಃ ।
ತಥೈವ ಸಪ್ತಚತ್ವಾರಿಂಶದ್ವರ್ಣೋಽಭೀಷ್ಟಸಿದ್ಧಿದಃ ॥೧೮॥

ಚತುರ್ಮುಖಾದಿಚಮಕೆಚತ್ವಾರಿಂಶಾಕ್ಷರೋ ಮನುಃ ।
ತ್ರಿಷ್ಟುಪ್ಛಂದಯುತಃ ಷಷ್ಠೋ ಭಾರ್ಗವರ್ಷಿಃ ಸುರೋತ್ತಮಃ ॥೧೯॥

---

ಓ ಜೈಗೀಷವ್ಯನೇ, ಪ್ರತಿಯೊಂದು ಮಂತ್ರಗಳಿಗೂ ಪ್ರತ್ಯೇಕಪ್ರತ್ಯೇಕವಾಗಿ ಹೆಸರುಗಳನ್ನು ಹೇಳುತ್ತೇನೆ ಕೇಳು. ವ್ಯೋಮವನ್ನೇ ಬೀಜವನ್ನಾಗಿ ಉಳ್ಳದ್ದು ಮೊದಲನೆಯ ಮಂತ್ರವು. ಆ ಮಂತ್ರವು ವಾಮದೇವ ಋಷ್ಯಾತ್ಮಕವಾಗಿ ಮೂವತ್ತೆರಡು ಅಕ್ಷರಗಳಿಂದ ಕೂಡಿರುವುದು. ಸಾಂಬಸಂಜ್ಞಕವಾದ ದೇವತೆಯಿಂದ ಕೂಡಿ ದ್ವಿತೀಯಮಂತ್ರವು ಅನುಷ್ಟುಪ್ ಛಂದಸ್ಸಿನದಾಗಿ ಸಕಲ ಸಿದ್ಧಿಪ್ರದವೆನಿಸಿರುವುದು. ॥೧೪-೧೫॥

ಪವನವೇ ಮೊದಲನೆಯದಾದ ಮೂರನೆಯ ಮಂತ್ರವು ಅಂತರ್ಯಾಮಿಯೆಂಬ ಋಷಿಯುಳ್ಳದ್ದಾಗಿ ಅನುಷ್ಟುಪ್ಛಂದಸ್ಸಿನಿಂದ, ಸಾಂಬಶಿವನೆಂಬ ದೇವತಾಯುಕ್ತವಾಗಿ ಅಣಿಮಾದ್ಯಷ್ಟೈಶ್ವರ್ಯಸಿದ್ಧಿಯನ್ನುಂಟುಮಾಡುವುದಾಗಿರುವುದು. ನಾಲ್ಕನೆಯದಕ್ಕೆ ವಾಯುಬೀಜ, ಅನುಷ್ಟುಪ್ಛಂದಸ್ಸು, ಸ್ಕಂದನೇ ಋಷಿ, ತ್ರಿಪುರಾಂತಕನೆಂಬ ದೇವತಾಯುಕ್ತವಾಗಿ ಅಭೀಷ್ಟಸಿದ್ಧಿಯನ್ನುಂಟುಮಾಡುವುದು. ॥೧೬-೧೭॥

ಅಮೃತಾದಿಯಾದ ಐದನೆಯ ಮಂತ್ರವು ಗಾಯತ್ರೀಛಂದಸ್ಸಿನಿಂದ ಯುಕ್ತವಾಗಿ (೪೭) ನಲವತ್ತೇಳು ಮಾತ್ರೆಗಳುಳ್ಳದ್ದಾಗಿ ಇಷ್ಟಸಿದ್ಧಿಗಳನ್ನುಂಟು

ರವಿದೈವತಕೋ ಮಂತ್ರೋ ತ್ರಿಂಶತ್ಸಪ್ತದಶಾಕ್ಷರಃ ।
ಭಾರ್ಗವರ್ಷಿಸಮಾಯುಕ್ತೋ ಗಾಯತ್ರೀಛಂದಸಾವೃತಃ ॥೨೦॥

ಸೃಷ್ಟಿಕರ್ತ್ರಾದಿಮೋ ಮಂತ್ರೋಽಭೀಷ್ಟದಃ ಸಂಪ್ರಕೀರ್ತಿತಃ ।
ಮೂಲಾದಿಮೋ ಮಹಾಮಂತ್ರೋ ಕಣ್ವರ್ಷಿರ್ಭಯನಾಶನಃ ॥೨೧॥

ಪಂಕ್ತಿಛಂದಃ ಸಮಾಯುಕ್ತೋ ನೀಲಕಂಠಃ ಸುರೋಽಷ್ಟಮಃ ।
ಅಗ್ನಿಬೀಜಸಮಾಯುಕ್ತೋ ವಾಯುಬೀಜಾದಿಮೋ ಮನುಃ ॥೨೨॥

ದಧೀಚಿಋಷಿಸಂಯುಕ್ತೋ ಛಂದಸಾನುಷ್ಟುಭಾನ್ವಿತಃ ।
ತ್ರಿಪುರಾಂತಕದೇವೋಽಸೌ ನವಮಃ ಶತ್ರುನಾಶನಃ ॥೨೩॥

ವಿಷ್ಣ್ವಾದಿ ದೇವತಾಯುಕ್ತೋ ದಶಮೋ ಗಾಯತ್ರೀಯುತಃ ।
ಸಹಸ್ರಾಕ್ಷೋ ಸುರಃ ಶತ್ರುಕ್ಷಯಕೃದ್ದಶಮೋ ಮನುಃ ॥೨೪॥

---

ಮಾಡುವುದು. ಚತುರ್ಮುಖನೇ ಆದಿಯಾದ ಚಮಕಮಂತ್ರವು ನಲವತ್ತಕ್ಷರ ಯುಕ್ತವಾಗಿ ತ್ರಿಷ್ಟುಪ್ಛಂದಸ್ಸು, ದೇವತೋತ್ತಮನಾದ ಭಾರ್ಗವನೆಂಬ ಋಷಿಯುಳ್ಳದ್ದಾಗಿ ಆರನೆಯದೆನಿಸಿರುವುದು. ॥೧೮-೧೯॥

ಸೂರ್ಯದೈವತಕವಾದ ಏಳನೆಯ ಮಂತ್ರವು ಮೂವತ್ತು ಮತ್ತು ಹದಿನೇಳು ಅಕ್ಷರಗಳುಳ್ಳದು. ಅದಕ್ಕೆ ಭಾರ್ಗವನೇ ಋಷಿ. ಮತ್ತು ಅದು ಗಾಯತ್ರೀಛಂದಸ್ಸಿನಲ್ಲಿರುವುದು; ಸೃಷ್ಟಿಕರ್ತೃವಾಚಕಶಬ್ದವೇ ಮೊದಲನೆಯದಾದ ಈ ಮಂತ್ರವು ಇಷ್ಟಸಿದ್ಧಿಯನ್ನುಂಟುಮಾಡುವುದು. ಮೂಲಶಬ್ದವೇ ಮೊದಲನೆಯದಾದ ಮಂತ್ರವು ಕಣ್ವರ್ಷಿಸಮೇತವಾಗಿ ಭಯನಾಶಕವೆನಿಸಿರುವುದು. ॥೨೦-೨೧॥

ಪಂಕ್ತಿಛಂದಸ್ಸಿನಿಂದ ಯುಕ್ತವಾಗಿ ನೀಲಕಂಠನೆಂಬ ದೇವತೆಯುಳ್ಳದ್ದೇ ಎಂಟನೆಯ ಮಂತ್ರವು, ಅಗ್ನಿಬೀಜಯುಕ್ತವಾದುದು. ವಾಯುಬೀಜವುಳ್ಳ ದಧೀಚಿ ಋಷಿ, ಅನುಷ್ಟುಪ್ಛಂದಸ್ಸು, ತ್ರಿಪುರಾಂತಕದೇವತೆ ಇವುಗಳಿಂದ ಕೂಡಿದುದೇ ಒಂಬತ್ತನೆಯ ಮಂತ್ರವಾಗಿರುವುದು. ಇದು ಶತ್ರುನಾಶಕವೆನಿಸಿರುವುದು. ॥೨೨-೨೩॥

ಹತ್ತನೆಯದು, ವಿಷ್ಣುವೇ ಮುಖ್ಯ ದೇವತೆ, ಗಾಯತ್ರೀಛಂದಸ್ಸು, ಇಂದ್ರಶಬ್ದ ಇವುಗಳುಳ್ಳದ್ದಾಗಿ ಶತ್ರುಕ್ಷಯರೂಪವಾದ ಫಲವನ್ನು ಕೊಡುವುದು. ಅಮೃತಾ

ಅಮೃತಾದಿ ಮಹಾಮಂತ್ರಃ ಪಂಕ್ತಿಶ್ಛಂದಸ್ಸಮನ್ವಿತಃ ।
ಕಪರ್ದಿದೇವಃ ಕಣ್ವರ್ಷಿಃ ಸದಾ ವಿಜಯಸಿದ್ಧಿದಃ ॥೨೫॥

ಅಗ್ನ್ಯಾದಿತ್ಯ ಮಹಾಮಂತ್ರಋಷಿರ್ನಾರದ ಸಂಯುತಃ ।
ಗಾಯತ್ರೀ ಛಂದಸಾಯುಕ್ತೋ ರವಿರೂಪಸುರಸ್ತಥಾ ॥೨೬॥

ಆಯುರಾರೋಗ್ಯಸಂಸಿದ್ಧಿಪ್ರದೋ ದ್ವಾತ್ರಿಂಶದೀರಿತಃ ।
ಮಕರಾಂತ್ಯಾ ಇಮಾ ವಿದ್ಯಾ ದಧೀಚಿಋಷಿಸಂಯುತಾ ॥೨೭॥

ಧೈವತಂ ಛಂದಸಾಯುಕ್ತಃ ಪಿನಾಕೀಸುರಸಂಯುತಃ ।
ತ್ರಯೋದಶೀತಿ ಕಥಿತಾ ರಣೇ ವಿಜಯದಾಯಿನೀ ॥೨೮॥

ಮರುದಾದಿಮಹಾವಿದ್ಯಾ ಪಂಕ್ತಿಛಂದಃಸಮನ್ವಿತಾ ।
ಪಿನಾಕಿದೇವತಾಯುಕ್ತಾ ಗೌತಮರ್ಷಿಸಮನ್ವಿತಾ ॥೨೯॥

ಚತುರ್ದಶೀತಿ ಕಥಿತಾ ವೈಶ್ಯಾದಿಸ್ವಪ್ರದಾಯಿನೀ ।
ನಮೋ ಹಿರಣ್ಯೇತ್ಯಾರಭ್ಯ ಸತ್ವನಾಂ ಪತಯೇ ನಮಃ ॥೩೦॥

---

ದಿಯಾದ ಮಹಾಮಂತ್ರವು ಪಂಕ್ತಿಛಂದೋಯುಕ್ತವಾಗಿ, ಕಪರ್ದಿದೇವತೆ, ಕಣ್ವರ್ಷಿ ಗಳುಳ್ಳದ್ದಾಗಿ ಯಾವಾಗಲೂ ಸಿದ್ಧಿಯನ್ನುಂಟುಮಾಡುವುದು. ॥೨೪-೨೫॥

ಅಗ್ನಿ, ಆದಿತ್ಯರೂಪವಾದ ಮಹಾಮಂತ್ರವು ಹನ್ನೊಂದನೆಯದು ನಾರದ ಋಷಿಯುಕ್ತವು; ಗಾಯತ್ರೀಛಂದಸ್ಸು, ಸೂರ್ಯನೇ ದೇವತೆ, ಮೂವತ್ತೆರಡುವರ್ಣ ಗಳುಳ್ಳದಾಗಿ ಆಯುರಾರೋಗ್ಯಸಂಸಿದ್ಧಿರೂಪವಾದ ಫಲಪ್ರದಗಳಾಗಿರುವುದು. ಹನ್ನೆ ರಡನೆಯ ಮಂತ್ರವು ಮಕಾರವನ್ನೇ ಕೊನೆಯುಳ್ಳದ್ದಾಗಿ ಪೂರ್ವೋಕ್ತದೇವತೆ ಯಿಂದ ದಧೀಚಿಋಷಿಯುಕ್ತವಾಗಿದೆ. ॥೨೬-೨೭॥

ಧೈವತವೆಂಬ ಛಂದಸ್ಸಿನಿಂದ ಯುಕ್ತವಾಗಿ ಶಿವರೂಪವಾದ ದೇವತಾವಿಶಿಷ್ಟ ವಾದ ಹದಿಮೂರನೆಯ ಮಂತ್ರವು ಯುದ್ಧದಲ್ಲಿ ವಿಜಯಪ್ರದವಾದುದೆಂದು ಹೇಳ ಲ್ಪಟ್ಟಿರುವುದು. ಮರುತ್ಪದವೇ ಮೊದಲಾಗುಳ್ಳ ಮಂತ್ರಮಹಾವಿದ್ಯೆಗೆ ಪಂಕ್ತಿ ಯೆಂಬ ಛಂದಸ್ಸು, ಪಿನಾಕಿಯೆಂಬ ದೇವತೆ, ಗೌತಮನೆಂಬ ಋಷಿಯುಕ್ತವಾಗಿ ಹದಿ ನಾಲ್ಕನೆಯ ಮಂತ್ರವು ವೈಶ್ಯರಿಗೆ ಸ್ವರ್ಗಪ್ರದವಾದುದೆಂದುಹೇಳಲ್ಪಟ್ಟಿದೆ. ॥೨೮-೨೯॥

'ನಮೋ 'ಹಿರಣ್ಯಬಾಹವೇ' ಮೊದಲುಗೊಂಡು 'ಸತ್ವನಾಂ ಪತಯೇ ನಮಃ' ಎನ್ನುವ ಪದದ ಕೊನೆಯವರೆವಿಗೂ ಇರುವ ಮಂತ್ರವಿದ್ಯೆಗೆ ಪಾರ್ವತೀ

ಏತತ್ಪದಾಂತಾ ವಿದ್ಯಾಸ್ಯಾತ್ಸಾರ್ವತೀಶಃ ಸುರಃ ಸ್ಮೃತಃ ।
ಚತುರ್ಮುಖರ್ಷಿಸಂಯುಕ್ತಾ ವಿರಾಟ್ಛಂದಃ ಸಮನ್ವಿತಾ ॥೩೧॥

ಅನುವಾಕಶ್ಚತುರ್ಥಃ ಸ್ಯಾದ್ವಿದ್ಯಾ ಸಪ್ತದಶೀ ಸ್ಮೃತಾ ।
ಕುಮಾರರ್ಷಿಸಮಾಯುಕ್ತಾ ಬಾರ್ಹತಶ್ಛಂದಸಾಯುತಾ ॥೩೨॥

ಮಹಾದೇವಾಃ ಸುರಾಃ ಸರ್ವೇ ಗೃಹದೇವನಿವಾರಿಣೀ ।
ಅಷ್ಟಾದಶೋ ಮಹಾವಿದ್ಯಾ ಅನುವಾಕಸ್ತು ಪಂಚಮಃ ॥೩೩॥

ಗಣೇಶರ್ಷಿಸಮಾಯುಕ್ತೋ ತ್ರಿಷ್ಟುಪ್ಛಂದಸ್ಸಮನ್ವಿತಾ ।
ಮಹಾರುದ್ರಸುರಾಃ ಸರ್ವೇ ಸಿದ್ಧಿದಾಽಜ್ಞಾನನಾಶಿನೀ ॥೩೪॥

ಷಷ್ಠೋಽನುವಾಕ ಏಕೋನವಿಂಶೋ ಮಂತ್ರಃ ಸ ಈರಿತಃ ।
ಸಂವಿಷ್ಟರ್ಷಿಸಮಾಯುಕ್ತ ಸ್ತ್ರಿಷ್ಟುಪ್ಛಂದಸ್ಸಮನ್ವಿತಃ ॥೩೫॥

ಪರಮೇಶ್ವರದೇವೋಽಸೌ ಸರ್ವಸಂಪತ್ಪ್ರದಾಯಕಃ ।
ಏಕವಿಂಶೋ ಮಹಾಮಂತ್ರೋ ಹ್ಯನುವಾಕಸ್ತಥಾಷ್ಟಮಃ ॥೩೬॥

---

ರಮಣನೇ ದೈವವು; ಚತುರ್ಮುಖನು ಋಷಿ; ವಿರಾಟ್ಛಂದಸ್ಸು; ಈ ನಾಲ್ಕನೆಯ ಅನುವಾಕವು ಹದಿನೇಳನೆಯ ಮಂತ್ರವಿದ್ಯೆಯೆಂದು ಹೇಳಲ್ಪಟ್ಟಿದೆ. ಇದಕ್ಕೆ ಕುಮಾರಸ್ವಾಮಿಯೇ ಋಷಿ, ಬಾರ್ಹತವೆಂಬುದೇ ಛಂದಸ್ಸು. ॥೩೦-೩೧-೩೨॥

ಈ ಮಂತ್ರಕ್ಕೆ ಸಕಲ ದೇವತೆಗಳೂ ಮಹಾದೇವನೇ, ಇದು ಗೃಹದೇವತೆಗಳ ನಿವಾರಣರೂಪವಾದ ಫಲವುಳ್ಳದ್ದು. ಐದನೆಯ ಅನುವಾಕವು ಹದಿನೆಂಟನೆಯ ಮಹಾವಿದ್ಯೆಯೆಂದು ಪ್ರಸಿದ್ಧವಾಗಿದೆ. ಇದಕ್ಕೆ ಗಣೇಶನು ಋಷಿ, ತ್ರಿಷ್ಟುಪ್ ಛಂದಸ್ಸು, ಮಹಾರುದ್ರರೆ, ಸಕಲ ದೇವತೆಗಳು. ಇದು ಸಿದ್ಧಿಪ್ರದವೂ, ಅಜ್ಞಾನ ನಾಶಕವೂ ಆಗಿರುವುದು; ಆರನೆಯ ಅನುವಾಕವು ಹತ್ತೊಂಬತ್ತನೆಯ ಮಹಾ ಮಂತ್ರವೆಂದು ಹೇಳಲ್ಪಟ್ಟಿದೆ; ಇದಕ್ಕೆ ವಿಷ್ಟರ್ಷಿ(?) ಮತ್ತು ತ್ರಿಷ್ಟುಪ್ಛಂದಸ್ಸುಗಳು. ॥೩೩-೩೪-೩೫॥

ಪರಮೇಶ್ವರನೇ ದೇವತೆ; ಈ ಮಂತ್ರವು ಸಕಲ ಸಂಪತ್ತುಗಳನ್ನೂ ಉಂಟುಮಾಡುವುದು; ಎಂಟನೆಯ ಅನುವಾಕವು ಇಪ್ಪತ್ತೊಂದನೆಯ ಮಹಾ ಮಂತ್ರವೆಂದು ಹೇಳಲ್ಪಟ್ಟಿದೆ. ವಾಮದೇವನೆಂಬ ಋಷಿ, ಜಗತೀಛಂದಸ್ಸು,

ವಾಮದೇವರ್ಷಿಸಹಿತೋ ಜಗತೀ ಛಂದಸಾನ್ವಿತಃ ।
ಉಮಾಮಹೇಶ್ವರಸುರಶ್ಚಿಂತಿತಾರ್ಥಫಲಪ್ರದಃ ॥೩೭॥

ಏತನ್ಮಧ್ಯಗತಾ ವಿದ್ಯಾ ಶೈವಪಂಚಾಕ್ಷರೀ ಶುಭಾ ।
ಬ್ರಹ್ಮವಿದ್ಯಾ ಭುಕ್ತಿಮುಕ್ತಿದಾಯಿನೀಸರ್ವಸಿದ್ಧಿದಾ ॥೩೮॥

ವಾಮದೇವರ್ಷಿಸಹಿತಾ ಪಂಕ್ತಿಶ್ಛಂದಃಸಮನ್ವಿತಾ ।
ಸತ್ಯಾನಂದಚಿದಾಕಾರಸಾಂಬಶಂಕರ ದೇವತಾ ॥೩೯॥

ಏತನ್ಮಧ್ಯಗತಾ ತತ್ರ ವಿಂಶತ್ಸಂಖ್ಯಾ ಮುನೀಶ್ವರಾಃ ।
ವಾಮದೇವರ್ಷಿಸಂಯುಕ್ತಾ ತ್ರಿಷ್ಟುಪ್ಛಂದಃಸಮನ್ವಿತಾ ॥೪೦॥

ಅಥ ಗ್ರಹಾನುವಾಕಾಖ್ಯಾ ಮಾಲಾಮಂತ್ರಸ್ವರೂಪಿಣೀ ।
ವೀರಭದ್ರರ್ಷಿಸಂಯುಕ್ತಾ ತ್ರಿಷ್ಟುಪ್ಛಂದಸ್ಸಮನ್ವಿತಾ ॥೪೧॥

---

ಉಮಾಮಹೇಶ್ವರನೇ ದೇವತೆಯಾಗಿ ಉಳ್ಳ ಈ ಮಂತ್ರವು ಸಂಕಲ್ಪಿತವಾದ ಇಷ್ಟಾರ್ಥಗಳನ್ನುಂಟುಮಾಡುವುದು. ॥೩೬-೩೭॥

ಈ ಎಂಟನೆಯ ಅನುವಾಕದ ಮಧ್ಯದಲ್ಲಿ ಶುಭಕರವಾದ ಶಿವಪಂಚಾಕ್ಷರೀ ಮಹಾವಿದ್ಯೆಯು ಹೇಳಲ್ಪಟ್ಟಿರುವುದು ; ಇದು ಭೋಗಮೋಕ್ಷಪ್ರದವಾದುದೂ ಅಲ್ಲದೆ, ಸಕಲ ಇಷ್ಟಾರ್ಥಪ್ರದವೂ ಆದ ಬ್ರಹ್ಮವಿದ್ಯೆಯೆಂದು ಪ್ರಖ್ಯಾತವಾಗಿರುವುದು ; ಇದು ವಾಮದೇವನೆಂಬ ಋಷಿಯುಕ್ತವೂ ಪಂಕ್ತಿಚ್ಛಂದಸ್ಸಿನಿಂದಲೂ, ಸತ್ಯ, ಆನಂದ ಮತ್ತು ಚಿದ್ರೂಪನಾದ ಶಂಕರನೆಂಬ ದೇವತೆಯುಳ್ಳದೂ ಆಗಿರುವುದು. ॥೩೮-೩೯॥

ಓ ಮುನಿವರ್ಯರೆ, ಈ ಅನುವಾಕ ಮಧ್ಯದಲ್ಲಿರುವ ಇಪ್ಪತ್ತು ಮಂತ್ರಗಳು, ವಾಮದೇವನೆಂಬ ಋಷಿಯಿಂದಲೂ, ತ್ರಿಷ್ಟುಪ್ಛಂದಸ್ಸುಗಳಿಂದಲೂ ಕೂಡಿರುವುವು. ಗ್ರಹಾನುವಾಕ ಸಂಜ್ಞಕವಾದ ಮಾಲಾಮಂತ್ರಸ್ವರೂಪವು, ವೀರಭದ್ರಋಷಿ, ತ್ರಿಷ್ಟುಪ್ಛಂದಸ್ಸು, ಮಹೇಶ್ವರನೆಂಬ ದೈವತೆಯುಳ್ಳದು. ಇದು ಅಭೀಷ್ಟಫಲಪ್ರದವೂ, ವಿಶೇಷವಾಗಿ ಸುವರ್ಣಸಿದ್ಧಿಕರವೂ ಆಗಿರುವುದು. ಈ ಅನುವಾಕದಲ್ಲಿ ಇಪ್ಪತ್ತು ಮಂತ್ರಗಳು ಉಕ್ತವಾಗಿರುವುದರಿಂದಲೇ ಇದು ಮಾಲಾಮಂತ್ರವೆನಿಸಿದೆ. ॥೪೦-೪೧॥

ಮಹೇಶ್ವರಸುರಾಭೀಷ್ಟಸಿದ್ಧಿದಾ ಹೇಮಸಿದ್ಧಿದಾ
ಏತನ್ಮಧ್ಯಗತಾ ಮಂತ್ರಾಸ್ತ್ರಯಸ್ತ್ರಿಂಶತ್ಫಲಪ್ರದಾಃ ।
ವೇದವ್ಯಾಸರ್ಷಿಸಹಿತಾಃ ಪಂಕ್ತಿಶ್ಛಂದಃಸಮನ್ವಿತಾಃ ॥೪೨॥

ನಮೋ ವರ್ಣ್ಯಪ್ರಥಮಾಮೀವತ್ಕೇಭ್ಯೋತ್ಯಂತಸಂಯುತಾಃ ।
ಶ್ರೀರುದ್ರರ್ಷಿಸಮಾಯುಕ್ತಾಃ ಗಾಯತ್ರೀಚ್ಛಂದಸ್ಸಮನ್ವಿತಾಃ ॥೪೩॥

ಸರ್ವಪ್ರಥಮಸಂಸ್ತುತ್ಯಾ ಸಾಂಬಶಂಕರ ದೈವತಾ ।
ಮಹಾಸಿದ್ಧಿಪ್ರದಾ ಸಾಕ್ಷಾಚ್ಛಂಕರತ್ವಪ್ರದಾಯಿನೀ ॥೪೪॥

ದ್ರಾಪೇ ಅಂಧಸ ಇತ್ಯೇಷಾ ಮುನಿರ್ಬ್ರಹ್ಮಸಮನ್ವಿತಾ ।
ಗಾಯತ್ರೀಛಂದಸಾ ಯುಕ್ತಾ ಸ್ಕಂದದೈವತಸಂಯುತಾ ॥೪೫॥

ದಾರಿದ್ರ್ಯನಾಶನಕರೀ ಪರಮೈಶ್ವರ್ಯದಾಯಿನೀ ।
ಯಾತೇ ರುದ್ರೇತಿ ವಿದ್ಯಾಸ್ಯಾತ್ಸೂರ್ಯನಾರಾಯಣಾತ್ಮಿಕಾ ॥೪೬॥

ಗಾಯತ್ರೀಛಂದಸಾಯುಕ್ತಾ ಭಾರ್ಗವರ್ಷಿಸಮನ್ವಿತಾ ।
ಸರ್ವರೋಗಕ್ಷಯಕರೀ ಮನಶ್ಚಿಂತಿತಸಿದ್ಧಿದಾ ॥೪೭॥

---

ಈ ಅನುವಾಕದ ಮಧ್ಯಭಾಗದಲ್ಲಿರುವ ಮೂವತ್ತುಮೂರುಮಂತ್ರಗಳು ವಿಶೇಷ ಫಲಪ್ರದಗಳಾಗಿರುವುವು. ಇವುಗಳಿಗೆ ವೇದವ್ಯಾಸಋಷಿ, ಪಂಕ್ತಿಚ್ಛಂದಸ್ಸು 'ನಮೋವರ್ಣ್ಯಾಯ ಚ' ಎಂಬುದು ಮೊದಲು 'ಆಮೀವತ್ಕೇಭ್ಯಃ' ಅನ್ನುವವರೆಗೆ ಇರುವ ಮಂತ್ರಗಳಿಗೆ ಶ್ರೀರುದ್ರದೇವರು; ಗಾಯತ್ರೀಛಂದಸ್ಸು, ಸಕಲರಿಗೂ ಅಗ್ರಗಣ್ಯನೂ, ಸ್ತೋತ್ರಾರ್ಹನೂ ಆದ ಅಂಬಿಕಾರಮಣನಾದ ಶಂಕರನೇ ದೇವತೆ. ಇದು ಮಹಾಸಿದ್ಧಿಪ್ರದವೂ, ಸಾಕ್ಷಾಚ್ಛಂಕರಸ್ವರೂಪದಾಯಿನಿಯೂ ಆಗಿರುವುದು. ॥೪೨-೪೩-೪೪॥

'ದ್ರಾಪೇ ಅಂಧಸಸ್ಪತೇ' ಎಂಬ ಮಂತ್ರಕ್ಕೆ ಬ್ರಹ್ಮನು ಋಷಿ, ಗಾಯತ್ರೀ ಛಂದಸ್ಸು; ಸ್ಕಂದನೇ ದೇವತೆ ಈ ಮಂತ್ರವು ದಾರಿದ್ರ್ಯನಾಶಕವೂ, ಪರಮೈಶ್ವರ್ಯ ಪ್ರದವೂ ಆಗಿರುವುದು. ॥೪೫॥

'ಯಾತೇ ರುದ್ರ ಶಿವಾತನೂಃ' ಎಂಬ ಮಂತ್ರವು ಸೂರ್ಯನಾರಾಯಣಸ್ವರೂಪ ವಾಗಿರುವುದು. ಇದು ಗಾಯತ್ರೀಛಂದಸ್ಸು, ಭಾರ್ಗವಋಷಿಯುಕ್ತವಾಗಿ ಸಕಲ ರೋಗನಾಶಕರವೂ ಮನೋರಥಸಿದ್ಧಿಪ್ರದವೂ ಆಗಿರುವುದು. ॥೪೬-೪೭॥

ಇಮಾಮಿತಿ ಮಹಾವಿದ್ಯಾ ಶಂಕರರ್ಷಿಸಮನ್ವಿತಾ ।
ವಿರಾಟ್ಛಂದೋಯುತಾ ಸೌಖ್ಯಸಿದ್ಧಿದಾ ರುದ್ರದೇವತಾ ॥೪೮॥

ಮೃಡಾನೋ ರುದ್ರವಿದ್ಯಾ ಸ್ಯಾತ್ಸಂಕರ್ಷಣಮುನಿಸ್ತುತಾ ।
ಕಾಲಾಗ್ನಿರುದ್ರದೇವೀ ಸ್ಯಾಜ್ಜಗತೀಛಂದಸಾನ್ವಿತಾ ॥೪೯॥

ಆಧಿವ್ಯಾಧಿಹರಂ ನೃಣಾಂ ದೀರ್ಘಾಯುಷ್ಯಪ್ರದಾಯಿನೀ ।
ಮಾನೋ ಮಹಾಂತಮಿತ್ಯೇಷಾ ವಿದ್ಯಾ ಸೂರ್ಯರ್ಷಿಸಂಯುತಾ ॥೫೦॥

ಸಾಂಬಶಂಕರದೇವೇಶ ಕಕುಪ್ಛಂದಃಸಮನ್ವಿತಾ ।
ಮಾತಾಪಿತೃಸುತಭ್ರಾತೃವಿಯೋಗಕ್ಷಯಕಾರಿಣೀ ॥೫೧॥

ಮಾನಸ್ತೋಕೇ ಮಹಾವಿದ್ಯಾ ವರುಣರ್ಷಿಸಮನ್ವಿತಾ ।
ರುದ್ರದೈವತಸಂಯುಕ್ತಾ ದೈವತಚ್ಛಂದಸಾಯುತಾ ॥೫೨॥

ಗರ್ಭಪಾತಕ್ಷಯಕರೀ ಸುತಾಯುಷ್ಯವಿವರ್ಧಿನೀ ।
ಆರಾತ್ತೇ ಗೋಘ್ನ ಇತ್ಯೇಷಾ ವಿದ್ಯಾ ಬ್ರಹ್ಮರ್ಷಿಸಂಯುತಾ ॥೫೩॥

---

'ಇಮಾಗ್ಂ ರುದ್ರಾಯ ತವಸೇ ಕಪರ್ದಿನೆ' ಎಂಬ ಮಹಾಮಂತ್ರಕ್ಕೆ ಶಂಕರನೇ ಋಷಿಯು, ವಿರಾಟ್ಛಂದಸ್ಸುಗಳಿಂದಲೂ, ರುದ್ರದೇವತೆಯಿಂದಲೂ ಯುಕ್ತವಾಗಿ ಸೌಖ್ಯರೂಪವಾದ ಸಿದ್ಧಿಯನ್ನುಂಟುಮಾಡುವುದು. 'ಮೃಡಾನೋ ರುದ್ರೋತನೋ ಮಯಸ್ಕೃಧಿ' ಎಂಬ ಮಂತ್ರಮಹಾವಿದ್ಯೆಯು ಸಂಕರ್ಷಣಋಷಿ, ಕಾಲಾಗ್ನಿರುದ್ರದೇವತೆ, ಜಗತೀ ಎಂಬ ಛಂದಸ್ಸಿನಿಂದ ಯುಕ್ತವಾಗಿ ಮಾನವರ ಮನೋವ್ಯಥೆ ಮತ್ತು ರೋಗಗಳನ್ನು ನಿವಾರಿಸಿ, ದೀರ್ಘಾಯುಷ್ಯವನ್ನುಂಟುಮಾಡುವುದು. ॥೪೮-೪೯॥

'ಮಾನೋ ಮಹಾಂತಮುತಮಾನೋ ಅರ್ಭಕಂ' ಎಂಬ ವಿದ್ಯೆಯು ಸೂರ್ಯಋಷಿ, ಅಂಬಿಕಾರಮಣನಾದ ಶಂಕರನೆಂಬ ದೇವತೆ, ಕಕುಪ್‌ಛಂದಸ್ಸುಗಳುಳ್ಳದ್ದಾಗಿ, ತಾಯಿ, ತಂದೆ, ಮಕ್ಕಳು, ಸೋದರರ ವಿಯೋಗವುಂಟಾಗದಂತೆ ಜಪಮಾಡುವವನನ್ನು ಕಾಪಾಡುವುದು. ॥೫೧॥

'ಮಾನಸ್ತೋಕೇ ತನಯೆ' ಎಂಬ ಮಹಾವಿದ್ಯೆಯು, ವರುಣಋಷಿ, ರುದ್ರದೇವತೆ, ದೈವತವೆಂಬ ಛಂದಸ್ಸಿನಿಂದ ಯುಕ್ತವಾಗಿ ಗರ್ಭಪಾತಗಳನ್ನು

ಗಾಯತ್ರೀಛಂದಸಾ ಯುಕ್ತಾ ಶಿವದೈವತಸಂಯುತಾ ।
ಅಜಗೋಮಹಿಷೀಮತ್ತಗಜಾಶ್ವತ್ರಾಣಕಾರಿಣೀ ॥೫೪॥

ಸ್ತುಹಿ ಶ್ರುತಿಮಿತಿ ಹ್ಯೇಷಾ ದಕ್ಷಿಣಾಮೂರ್ತಿ ದೈವತಾ ।
ಋಷಿಃ ಪ್ರಜಾಪತಿಸ್ತುತ್ಯಾ ಗಾಯತ್ರೀಛಂದಸಾನ್ವಿತಾ ॥೫೫॥

ಅಜ್ಞಾನನಾಶಿನೀ ಸರ್ವವಿದ್ಯಾಸಿದ್ಧಿಪ್ರದಾಯಿನೀ ।
ಪರಿಣಃ ಪ್ರಥಮಾ ವಿದ್ಯಾ ಕಣ್ವಾಖ್ಯಋಷಿಪೂಜಿತಾ ॥೫೬॥

ರುದ್ರದೈವತಸಂಯುಕ್ತಾ ನಿದದ್ಗಾಯತ್ರಸಂಯುತಾ ।
ಮೀಢುಷ್ಟಮೇತಿ ವಿದ್ಯಾಸ್ಯಾದ್ವಿವಸ್ವದೃಷಿಸಂಯುತಾ ॥೫೭॥

ಸಾಕ್ಷಾತ್ಕಾರಕರೀ ಶಂಭೋರ್ಗಾಯತ್ರೀಛಂದಸಾನ್ವಿತಾ ।
ವಿಕಿರಿದಮಹಾವಿದ್ಯಾ ಮುನಿರ್ಬ್ರಹ್ಮಪ್ರಪೂಜಿತಾ ॥೫೮॥

---

ನಿವಾರಿಸುವುದೂ, ಮಕ್ಕಳಿಗೆ ಆಯುಷ್ಯವನ್ನು ಹೆಚ್ಚಿಸುವುದೂ ಆಗಿರುವುದು. 'ಆರಾತ್ತೇ ಗೋಘ್ನ ಎಂಬ ಮಂತ್ರವು ಬ್ರಹ್ಮನೆಂಬ ಋಷಿ, ಗಾಯತ್ರೀಛಂದಸ್ಸು, ಶಿವದೇವತೆಯುಳ್ಳದ್ದಾಗಿ ಆಡು, ಹಸು, ಎಮ್ಮೆ, ಮದಗಜಗಳು ಮುಂತಾದವುಗಳ ರಕ್ಷಣೆಯನ್ನು ಮಾಡುತ್ತದೆ. ॥೫೨-೫೩-೫೪॥

'ಸ್ತುಹಿ ಶ್ರುತಂ' ಎಂಬ ಮಂತ್ರವಿದ್ಯೆಗೆ ದಕ್ಷಿಣಾಮೂರ್ತಿಯೇ ದೇವತೆ, ಪ್ರಜಾಪತಿಋಷಿ, ಸ್ತೋತ್ರಾರ್ಹವಾದ ಗಾಯತ್ರೀಛಂದಸ್ಸು, ಈ ವಿದ್ಯೆಯು ಅಜ್ಞಾನ ನಾಶಕವೂ ಸಕಲ ವಿದ್ಯೆಗಳ ಸಿದ್ಧಿಯನ್ನು ಉಂಟುಮಾಡುವುದೂ ಆಗಿರುವುದು. ॥೫೫॥

'ಪರಿಣೋ ರುದ್ರಸ್ಯ ಹೇತಿರ್ವೃಣಕ್ತು' ಎಂಬ ವಿದ್ಯೆಯು ಕಣ್ವಋಷಿಯಿಂದ ಪೂಜಿಸಲ್ಪಟ್ಟು, ರುದ್ರದೇವತೆ, ಗಾಯತ್ರೀಛಂದಸ್ಸುಗಳಿಂದ ಕೂಡಿದೆ. ಮೀಢು ಷ್ಟಮ ಶಿವತಮ ಶಿವೋನಸ್ಸುಮನಾಭವ' ಎಂಬ ವಿದ್ಯೆಯು ವಿವಸ್ವಂತನೆಂಬ ಋಷಿ, ಗಾಯತ್ರೀಛಂದಸ್ಸುಗಳಿಂದ ಯುಕ್ತವಾಗಿ ಆ ಶಂಭುವಿನ ಸಾಕ್ಷಾತ್ಕಾರವ ನ್ನುಂಟುಮಾಡುವುದು. ॥೫೬-೫೭॥

'ವಿಕಿರಿದ ವಿಲೋಹಿತ ನಮಸ್ತೇ ಅಸ್ತುಭಗವಃ' ಎಂಬ ಮಹಾವಿದ್ಯೆಯು ಬ್ರಹ್ಮಮುನಿಯಿಂದ ಪೂಜಿಸಲ್ಪಟ್ಟು, ಗಾಯತ್ರೀಛಂದಸ್ಸಿನಿಂದಲೂ, ವೀರಭದ್ರನೆಂಬ

ಗಾಯತ್ರೀ ಛಂದಸಾಯುಕ್ತಾ ವೀರಭದ್ರಾಧಿದೈವತಾ ।
ಸಹಸ್ರಾಣಿ ಸಹಸ್ರೇತಿ ವಿದ್ಯಾ ಭದ್ರರ್ಷಿಸಂಯುತಾ ॥೫೯॥

ವಿರಾಟ್ಛಂದಸ್ಸಮಾಯುಕ್ತಾ, ಪರಶಂಕರದೇವತಾ ।
ಸಹಸ್ರಾಣೀತಿ ವಿದ್ಯಾ ಸ್ಯಾಚ್ಚತುರ್ವರ್ಗಫಲಪ್ರದಾ ॥೬೦॥

ವೀರಭದ್ರರ್ಷಿಸಂಯುಕ್ತಾ ಮಹಾರುದ್ರಾಖ್ಯದೇವತಾ ।
ವಿರಾಜಚ್ಛಂದಸಾಯುಕ್ತಾ ಸದಾ ಸರ್ವತ್ರಪೂಜಿತಾ ॥೬೧॥

ಅಸ್ಮಿನ್ಮಹತ್ಯಾದಿವಿದ್ಯಾ ನೀಲಗ್ರೀವಾಧಿದೇವತಾ ।
ಪರಾಶರರ್ಷಿಸಹಿತಾ ಗಾಯತ್ರೀಛಂದಸಾನ್ವಿತಾ ॥೬೨॥

ನೀಲಗ್ರೀವಾ ಇತಿ ಪ್ರೋಕ್ತಾ ಮಹಾವಿದ್ಯಾ ಫಲಪ್ರದಾ ।
ಕಪಿಲರ್ಷಿಸ್ತುತಾ ವಾಮದೇವದೇವೋ ನಿವೃದ್ಯುತಾ ॥೬೩॥

---

ದೇವತೆಯಿಂದಲೂ ಸ್ತುತ್ಯವಾಗಿದೆ. 'ಸಹಸ್ರಾಣಿ ಸಹಸ್ರಶೋಯೇರುದ್ರಾ ಅಧಿ ಭೂಮ್ಯಾಂ' ಎಂಬ ಮಂತ್ರವು ಭದ್ರರ್ಷಿ ವಿರಾಟ್ಛಂದಸ್ಸು, ಪರಶಂಕರನೇ ದೇವತೆಯಾಗುಳ್ಳದು. ॥೫೮-೫೯॥

'ಸಹಸ್ರಾಣಿ ಸಹಸ್ರಧಾ ಬಾಹವೋಸ್ತವ ಹೇತಯಃ' ಎಂಬ ಮಂತ್ರವಿದ್ಯೆಯು ಧರ್ಮ, ಅರ್ಥ, ಕಾಮ ಮತ್ತು ಮೋಕ್ಷರೂಪವಾದ ಫಲವನ್ನುಂಟುಮಾಡುವುದು; ಈ ಮಂತ್ರಕ್ಕೆ ವೀರಭದ್ರಋಷಿ, ಮಹಾರುದ್ರನೇ ದೇವತೆ, ವಿರಾಟ್ಛಂದಸ್ಸುಗಳಿಂದ ಯುಕ್ತವಾಗಿ ಯಾವಾಗಲೂ ಎಲ್ಲೆಡೆಗಳಲ್ಲಿಯೂ ಪೂಜಿಸಲ್ಪಡುವುದು. ॥೬೦-೬೧॥

'ಅಸ್ಮಿನ್ಮಹತ್ಯರ್ಣವೇಽಂತರಿಕ್ಷೇ ಭವಾ ಅಧಿ' ಎಂಬ ಮಂತ್ರಾದಿವಿದ್ಯೆಯು ನೀಲಕಂಠನೆಂಬ ದೈವತೆ, ಪರಾಶರಋಷಿ, ಗಾಯತ್ರೀಛಂದಸ್ಸುಗಳುಳ್ಳದು. 'ನೀಲಗ್ರೀವಾಃ ಶಿತಿಕಂಠಾಃ' ಎಂಬ ವಾಕ್ಯಾದಿಯಾದ ಮಹಾವಿದ್ಯೆಯು ಸಕಲ ಫಲಗಳನ್ನೂ ಕೊಡುವುದು; ಕಪಿಲಋಷಿಯಿಂದ ಸ್ತುತವಾಗಿ ವಾಮದೇವನೆಂಬ ದೇವತೆಯುಳ್ಳದ್ದಾಗಿ, ನಿವೃತ್ತಿರೂಪವಾದ ಫಲಕಾರಿಯೂ ಗಾಯತ್ರೀಛಂದಸ್ಸೂ ಆಗಿರುವುದು. ॥೬೨-೬೩॥

ಯೇ ಭೂತಾನಾಮಧೀತ್ಯೇಷಾಂ ಮಾರ್ಕಂಡೇಯಮುನಿಸ್ತುತಾ ।
ಮೃತ್ಯುಂಜಯಾಖ್ಯ ದೇವೀ ಸ್ಯಾದ್ಗಾಯತ್ರೀ ಛಂದಸಾನ್ವಿತಾ ॥೬೪॥

ಯ ಏತಾವಂತ ಇತ್ಯಾದ್ಯಾ ವಿದ್ಯಾ ಶ್ರೀರುದ್ರದೇವತಾ ।
ಋಷಿಕಣ್ವಸಮಭ್ಯರ್ಚ್ಯಾ ಜಗತೀ ಛಂದಸಾನ್ವಿತಾ ॥೬೫॥

ನಮೋ ರುದ್ರೇಭ್ಯ ಇತ್ಯೇಷಾ ವಿದ್ಯಾ ಶ್ರೀರುದ್ರದೇವತಾ ।
ಸಂಕರ್ಷಣಮುನಿಸ್ತುತ್ಯಾ ಗಾಯತ್ರೀ ಛಂದಸಾನ್ವಿತಾ ॥೬೬॥

ಸರ್ವಾಧಿವ್ಯಾಧಿಶಮನೀ ಚತುರ್ವರ್ಗಫಲಪ್ರದಾ ।
ಏತಾ ವಿದ್ಯಾ ಮಯಾಖ್ಯಾತಾ ಶತರುದ್ರೀಯಮಧ್ಯಗಾ ॥೬೭॥

ಏಕಾದಶಾನುವಾಕೇಭ್ಯೋ ವಿದ್ಯಾ ಶತಮಜಾಯತ ।
ಸಮಗ್ರಂ ನಮಕಂ ಮಾಲಾಮಂತ್ರರೂಪಂ ದ್ವಿಜೋತ್ತಮಾಃ ॥೬೮॥

---

'ಯೇ ಭೂತಾನಾಮಧಿಪತಯೋ ವಿಶಿಖಾಸಃ ಕಪರ್ದಿನಃ' ಎಂಬ ಮಂತ್ರ ವಿದ್ಯೆಯು ಮಾರ್ಕಂಡೇಯಋಷಿಸ್ತುತವಾಗಿ ಮೃತ್ಯುಂಜಯನೆಂಬ ದೇವತೆ, ಗಾಯತ್ರೀಛಂದಸ್ಸುಗಳಿಂದ ಯುಕ್ತವಾಗಿದೆ. 'ಯ ಏತಾವಂತಶ್ಚ ಭೂಯಾಗ್ಂಸಶ್ಚ' ಎಂಬ ಮಂತ್ರಾದಿಯಾಗಿ ಮಹಾವಿದ್ಯೆಗೆ ಶ್ರೀರುದ್ರದೇವತೆ, ಕಣ್ವಋಷಿ, ಜಗತೀಛಂದಸ್ಸುಗಳಿಂದ ಸಮೇತವಾಗಿವೆ. ॥೬೪-೬೫॥

'ನಮೋ ರುದ್ರೇಭ್ಯೋ ಯೇ ಪೃಥಿವ್ಯಾಂ ಯೇಽಂತರಿಕ್ಷೇ' ಮುಂತಾದ ವಾಕ್ಯಾದಿಯಾದ ವಿದ್ಯೆಯು ಶ್ರೀರುದ್ರದೇವತೆ, ಸಂಕರ್ಷಣಮುನಿ ಮತ್ತು ಗಾಯತ್ರೀ ಛಂದಸ್ಸುಗಳುಳ್ಳದು. ಇದು ಸಕಲ ಮನೋವ್ಯಥೆ ಮತ್ತು ರೋಗ ಇವುಗಳನ್ನು ಶಮನಮಾಡಿ, ಧರ್ಮ, ಅರ್ಥ, ಕಾಮ ಮತ್ತು ಮೋಕ್ಷಗಳೆಂಬ ಫಲಗಳನ್ನು ಕೊಡುವುದು. ಅಯ್ಯ ಜೈಗೀಷವ್ಯನೇ, ಶತರುದ್ರೀಯ ಮಂತ್ರದ ಮಧ್ಯಭಾಗದ ಈ ವಿದ್ಯೆಯನ್ನು ನಾನು ನಿನಗೆ ಈಗ ಹೇಳಿರುವೆನು. ॥೬೬-೬೭॥

ಹೀಗೆ ಹನ್ನೊಂದು ಅನುವಾಕಗಳಿಂದ ಒಟ್ಟು ನೂರು ಮಂತ್ರವಿದ್ಯೆಗಳಾಗುವುವು ; ಓ ಬ್ರಾಹ್ಮಣೋತ್ತಮರೆ, ಸಂಪೂರ್ಣವಾದ ನಮಕರೂಪವಾದ ಈ ಮಾಲಾಮಂತ್ರವು ವೇದಸಾರವೂ ಪೂರ್ಣಾವಿರ್ಭಾವವುಳ್ಳದೂ ಆದ ಶತರುದ್ರೀಯವೆಂದು ಹೇಳಲ್ಪಟ್ಟಿದೆ. ಓ ವಿಪ್ರವರ್ಯರೆ, ಶಾಂತಿಗಾಗಿ 'ಶಂಚಮೆ ಮಯಶ್ಚಮೆ' ಮೊದಲಾದ ಸೂಕ್ತವನ್ನು

ಶತರುದ್ರೀಯಮಿತ್ಯುಕ್ತಂ ವೇದಸಾರಂ ಮಹೋದಯಂ ।
ಶಾಂತ್ಯರ್ಥಂ ಶಂಚನೋ ಸೂಕ್ತಂ ಪಠಿತ್ವಾದೌ ದ್ವಿಜೋತ್ತಮಾಃ॥೧೯॥

ಪ್ರಜಪೇಚ್ಛತರುದ್ರೀಯಂ ತ್ರಯೀಸಾರಮನುತ್ತಮಂ ।
ಮಯ್ಯೈಷಾಂ ಸರ್ವಮಂತ್ರಾಣಾಂ ಛಂದಷ್ಯಾರ್ಷಾದಿಸಮೀರಿತಂ ॥೨೦॥

ಉಕ್ತಾನಿ ನಾಮಧೇಯಾನಿ ಮಾಹಾತ್ಮ್ಯಂ ವಕ್ಷ್ಯತೇ ಪುನಃ ॥೨೧॥

ಇತಿ ಶ್ರೀಶಿವರಹಸ್ಯೇ ದಶಮಾಂಶೇ ಶ್ರೀರುದ್ರಮಧ್ಯಗತಸರ್ವಮಂತ್ರ
ಛಂದರ್ಷಿದೇವತಾವಿಭಾಗವರ್ಣನೇ ಸಪ್ತವಿಂಶೋಽಧ್ಯಾಯಃ

---

ಮೊದಲು ಹೇಳಿ ಅನಂತರ ಮೂರು ವೇದಗಳ ಸಾರವೂ ಅತ್ಯುತ್ತಮವೂ ಆದ ಈ ಶತರುದ್ರೀಯಮಂತ್ರವನ್ನು ಜಪಿಸಬೇಕು ; ಓ ಮುನಿಗಳಿರಾ, ಸಕಲ ಮಂತ್ರಗಳಿಗೂ ಛಂದಸ್ಸು, ಋಷಿ, ದೇವತೆ ಮುಂತಾದವುಗಳನ್ನೂ, ಹೆಸರುಗಳನ್ನೂ ಈಗ ನಾನು ಹೇಳಿದೆನು. ಎಲೈ ಜೈಗೀಷವ್ಯನೇ, ಮುಂದೆ ತಿರುಗಿ ಆದರ ಮಹಿಮೆಯನ್ನು ನಿನಗೆ ನಾನು ಹೇಳುತ್ತೇನೆಂದು ಕುಮಾರಸ್ವಾಮಿಯು ಜೈಗೀಷವ್ಯಾದಿಗಳಿಗೆ ನಿರೂಪಿಸಿದನು. ||೧೮-೧೯-೨೦-೨೧||

ದೇವಿ, ನನ್ನ ಶಿವಲಿಂಗವನ್ನು ನೋಡಿ, ರುದ್ರದ ನಮೋವಾಕ್ಯಗಳನ್ನುಚ್ಚರಿಸುತ್ತಾ ಭಕ್ತಿಪೂರ್ವಕವಾಗಿ ಸ್ತೋತ್ರಮಾಡಿಕೊಂಡು, ರುದ್ರಮಂತ್ರವನ್ನು ಜಪಿಸುವ ಶೈವವರ್ಯನು ಅತ್ಯುತ್ತಮವಾದ ಶಿವಧಾಮವನ್ನೈದುವನು. ರುದ್ರಮಂತ್ರಗಳನ್ನುಚ್ಚರಿಸುತ್ತಾ ವಿಧಿಪ್ರಕಾರ ಪ್ರದಕ್ಷಿಣೆ ನಮಸ್ಕಾರಗಳನ್ನೆಸಗುತ್ತಾ ಶತರುದ್ರಮಂತ್ರ ಜಪಮಾಡುವವನು, ಗಣಸ್ವರೂಪವನ್ನು ಹೊಂದಿ ಕೊನೆಯಲ್ಲಿ ಮುಕ್ತಿಪಡೆಯುವನು ಎಂದು ಶಿವನು ಪಾರ್ವತಿಗೆ ಹೇಳಿದುದನ್ನು ಸ್ಕಂದನು ಜೈಗೀಷವ್ಯಾದಿಗಳಿಗೆ ತಿಳಿಸಿದನು. ||೭೨||

ಇಲ್ಲಿಗೆ ಶ್ರೀಶಿವರಹಸ್ಯದಲ್ಲಿ ಹತ್ತನೆಯ ಅಂಶದಲ್ಲಿ ಶ್ರೀರುದ್ರಮಂತ್ರದ ಮಧ್ಯದಲ್ಲಿರುವ ಸಕಲ ಮಂತ್ರಗಳ ಛಂದಸ್ಸು, ಋಷಿ ಮತ್ತು ದೇವತಾವಿಭಾಗಗಳ ವರ್ಣನೆಯಲ್ಲಿ ಇಪ್ಪತ್ತೇಳನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

॥ ಶ್ರೀ ಶಿವಾಯನಮಃ ॥

# ಅಥ ಶ್ರೀಶಿವರಹಸ್ಯೇ

## ಈಶಾನಾಖ್ಯೇ

### ದಶಮಾಂಶಪೂರ್ವಾರ್ಧೇ

## ಅಷ್ಟಾವಿಂಶೋಽಧ್ಯಾಯಃ

॥ ಸ್ಕಂದ ಉವಾಚ ॥

ಶತರುದ್ರೀಯಮಾಹಾತ್ಮ್ಯಂ ಪುನರ್ವಕ್ಷ್ಯೇ ಮುನೀಶ್ವರ ।
ಶೃಣುಷ್ವ ಶ್ರದ್ಧಯಾ ಯುಕ್ತೋ ಯದೀಚ್ಛಸಿ ಭವಕ್ಷಯಂ ॥೧॥

ಶಾಂತ್ಯರ್ಥಂ ಶಂಚಮೇ ಸೂಕ್ತಂ ಜಪ್ತ್ವಾದೌ ಮುನಿಪುಂಗವ ।
ಪ್ರಜಪೇಚ್ಛತರುದ್ರೀಯಂ ಸಮಗ್ರಂ ನಮಕಂ ತಥಾ ॥೨॥

ಶಂಭೋರುಪಾಸನಾಃ ಪಂಚವಿಧಾಃ ಪ್ರೋಕ್ತಾಃ ಮಹರ್ಷಿಭಿಃ ।
ಅಸ್ಮಿನ್ಸಮಗ್ರೇ ನಮಕೇ ನಾಮಾನಿ ತ್ರಿಶತಂ ದ್ವಿಜ ॥೩॥

---

## ಇಪ್ಪತ್ತೆಂಟನೆಯ ಅಧ್ಯಾಯ

ಓ ಮುನಿರಾಜನೆ, ಈಗ ಮತ್ತೆ ಶತರುದ್ರೀಯಮಂತ್ರಮಹಿಮೆಯನ್ನು ನಿನಗೆ ಹೇಳುತ್ತೇನೆ, ಎಲೈ ಜೈಗೀಷವ್ಯನೇ, ಈ ಸಂಸಾರಬಂಧನನಾಶವನ್ನಪೇಕ್ಷಿಸುವುದಾದರೆ ನೀನು ಶ್ರದ್ಧೆಯುಳ್ಳವನಾಗಿ ಇದನ್ನು ಕೇಳು ; ಮುನಿವರ್ಯನೇ, ಮೊದಲು ಶಾಂತಿಗಾಗಿ 'ಶಂಚಮೇ' ಸೂಕ್ತವನ್ನು ಜಪಿಸಿ, ಅನಂತರ ಶತರುದ್ರೀಯವನ್ನೂ ಸಂಪೂರ್ಣವಾದ ನಮಕಮಂತ್ರವನ್ನೂ ಜಪಮಾಡಬೇಕು. ॥೧-೨॥

ಶಂಭುವಿನ ಪೂಜೆಯು ಮಹರ್ಷಿಗಳಿಂದ ಐದುವಿಧವಾಗಿ ಹೇಳಲ್ಪಟ್ಟಿದೆ. ಅಯ್ಯ ಬ್ರಾಹ್ಮಣನೇ, ಸಂಪೂರ್ಣವಾದ ಈ ನಮಕಮಂತ್ರದಲ್ಲಿ ಮುನ್ನೂರು ನಾಮಗಳಿರುವುವು ; ಇವು ವೇದಸಾರವೂ, ಭೋಗಮೋಕ್ಷಗಳನ್ನು ಕೊಡುವುವೂ

ತಿಷ್ಠಂತಿ ಶ್ರುತಿಸಾರಾಣಿ ಭುಕ್ತಿಮುಕ್ತಿಕರಾಣಿ ಹಿ ।
ಏತೈರ್ಯೋ ನಾಮಭಿರ್ಲಿಂಗೇ ಸ್ಥಾವರೇ ಜಂಗಮೇಽಪಿ ವಾ ॥೪॥

ಪೂಜಯೇತ್ಸಾ ಮಹಾಪೂಜಾ ತಯಾ ಪ್ರೀಣಾತಿ ಶಂಕರಃ ।
ಮಯೋಕ್ತೈಃ ಶತಸಂಖ್ಯಾಕೈರ್ಮಂತ್ರೈಃ ಶಂಕರದೇವತೈಃ ॥೫॥

ಛಂದಶ್ಚಾರ್ಷಾದಿಕಮುಕ್ತ್ವಾದೌ ಜ್ವಲಿತೇ ಜಾತವೇದಸಿ ।
ಸ್ವಾಹಾಂತೈರ್ಜುಹುಯಾದ್ರುದ್ರಾಯೇದನ್ನಮಮ ಕಥ್ಯತೇ ॥೬॥

ಏವಂ ಹೋಮೇನ ಗೌರೀಶಃ ಪ್ರೀಣಾತಿ ಫಲದಾಯಕಃ ।
ತರ್ಪಯೇಚ್ಛತರುದ್ರೀಯಮಧ್ಯಗೈಃ ಶತಮಂತ್ರಕೈಃ ॥೭॥

ಶ್ರೀರುದ್ರಂ ತರ್ಪಯಾಮೀತಿ ಪ್ರೋಚ್ಚರನ್ಸುಸಮಾಹಿತಃ ।
ಉಪಾಸನಾ ತೃತೀಯಾ ಸ್ಯಾದಿತಿ ಸರ್ವಫಲಪ್ರದಾ ॥೮॥

ನ್ಯಾಸಃ ಸ್ಯಾನ್ಮಂತ್ರಸನ್ನಾಹೋ ನ್ಯಾಸಹೀನೋ ನ ಸಿದ್ಧಿದಃ ।
ಬೋಧಾಯನಕೃತಂ ಸ್ತೋತ್ರಂ ಶತರುದ್ರೀಯದೀಪನಂ ॥೯॥

---

ಆಗಿರುವುವು ; ಯಾವ ಮಾನವನು ಈ ರುದ್ರತ್ರಿಶತಿಯಿಂದ ಸ್ಥಾವರ ಅಥವಾ ಜಂಗಮ ರೂಪವಾದ ಶಿವಲಿಂಗವನ್ನು ಪೂಜೆಮಾಡುವನೋ ಆ ಪೂಜೆಯು ಮಹಾಪೂಜೆ ಯೆನಿಸುವುದು ; ಅದರಿಂದ ಶಂಕರನು ಸುಪ್ರೀತನಾಗುವನು. ಇದು ಮೊದಲನೆಯ ವಿಧದ ಪೂಜೆ. ॥೩-೪॥

ಅಯ್ಯ ಜೈಗೀಷವ್ಯನೇ, ನಾನು ಹೇಳಿದ ಶಂಕರದೇವತಾಕವಾದ ನೂರು ಮಂತ್ರಗಳನ್ನು ಮೊದಲು ಛಂದಸ್ಸು, ದೇವತೆ ಮುಂತಾದವುಗಳ ನಿರ್ವಚನ ಪೂರ್ವಕವಾಗಿ ಹೇಳುತ್ತಾ ಪ್ರಜ್ವಲಿಸುತ್ತಿರುವ ಅಗ್ನಿಯಲ್ಲಿ ಸ್ವಾಹಾಂತವಾಗಿ ಉಚ್ಚರಿಸಿ 'ರುದ್ರಾಯೇದಂ ನ ಮಮ' ಎಂದು ವಿನಿಯೋಗ ಹೇಳಿಕೊಂಡು ಹೋಮಮಾಡ ಬೇಕು. ಹೀಗೆ ಹೋಮಮಾಡುವುದರಿಂದ ಫಲಪ್ರದನಾದ ಗೌರೀರಮಣನು ಸಂತುಷ್ಟನಾಗುತ್ತಾನೆ. ಇದು ಎರಡನೆಯದು. ಅನಂತರ ಶತರುದ್ರೀಯಮಧ್ಯಗತ ವಾದ ಇದೇ ನೂರು ಮಂತ್ರಗಳಿಂದ ತರ್ಪಣಮಾಡಬೇಕು. ॥೫-೬-೭॥

ಹಾಗೆ ತರ್ಪಣಮಾಡುವಾಗ 'ಶ್ರೀ ರುದ್ರಂ ತರ್ಪಯಾಮಿ' (ರುದ್ರದೇವನಿಗೆ ತರ್ಪಣಮಾಡುವೆನೆಂದು) ಉಚ್ಚಾರಮಾಡಬೇಕು. ಅನಂತರ ಸಕಲ ಫಲಗಳನ್ನೂ ಉಂಟುಮಾಡುವ ಶಿವೋಪಾಸನೆಯನ್ನು ಮಾಡಬೇಕು. ಇದು ಮೂರನೆಯದು.

ಬೋಧಾಯನೋಕ್ತಮಾರ್ಗೇಣ ನ್ಯಾಸಂ ಕೃತ್ವಾ ವಿಚಕ್ಷಣಃ ।
ಪ್ರಜಪ್ತ್ವಾ ಶಂಚನೋ ಸೂಕ್ತಮಾದೌ ವಿಘ್ನನಿವೃತ್ತಯೇ ॥೧೦॥

ಸಮಗ್ರನಮಕಸ್ಯಾಸ್ಯ ವೇದಸಾರಸ್ಯ ಬ್ರಾಹ್ಮಣಾಃ ।
ಸನಾಮದೇವಯೋಘೋರಋಷಿರಿತ್ಯುಚ್ಯತೇ ಬುಧೈಃ ॥೧೧॥

ಛಂದಾಂಸಿ ಚಾಸ್ಯ ಗಾಯತ್ರೀ ಪಂಕ್ತ್ಯನುಷ್ಟುಭ ಏವ ಚ ।
ಜಗತೀ ಬೃಹತೀ ಚೇತಿ ದೇವತಾ ಕಥ್ಯತೇ ತತಃ ॥೧೨॥

ಜಪಾಕುಸುಮಸಾಹಸ್ರಸಂನಿಭೇ ಸೂರ್ಯಮಂಡಲೇ ।
ಮಧ್ಯರೂಪೀ ವಿರಾಡ್ರೂಪೀ ವಿಧಿವಿಷ್ಣುಶಿವಾತ್ಮಕಃ ॥೧೩॥

ಯೋಽಸಾವಾದಿತ್ಯಪುರುಷಃ ಶ್ರೀರುದ್ರಾಖ್ಯಃ ಪರಃ ಶಿವಃ ।
ಪರಮೇಶಃ ಸ ವಿಜ್ಞೇಯಃ ಶಿವಃ ಸತ್ಯಂ ಚಿದಾತ್ಮಕಂ ॥೧೪॥

---

ಮಂತ್ರೋಚ್ಚಾರಣೆಯ ಸಿದ್ಧತೆಯೇ ನ್ಯಾಸವೆನಿಸುವುದು. ನ್ಯಾಸರಹಿತವಾದ ಮಂತ್ರವು ಸಿದ್ಧಿಯನ್ನುಂಟುಮಾಡಲಾರದು. ಬೋಧಾಯನರು ಮಾಡಿರುವ ಸ್ತೋತ್ರವು ಈ ಶತರುದ್ರೀಯಮಂತ್ರಕ್ಕೆ ಉದ್ದೀಪಕವಾಗಿರುವುದು. ಬುದ್ಧಿವಂತನಾದವನು ಈ ಬೋಧಾಯನ ಮಹರ್ಷಿಗಳು ಹೇಳಿರುವ ಮಾರ್ಗದಲ್ಲಿ ನ್ಯಾಸಮಾಡಿ ಮಂತ್ರಜಪ ವನ್ನಾರಂಭಿಸಬೇಕು. ॥೮-೯॥

ಮೊದಲು ವಿಘ್ನನಿವಾರಣೆಗೋಸ್ಕರ 'ಶಂಚನೋ' ಸೂಕ್ತವನ್ನು ಜಪಮಾಡ ಬೇಕು. ಓ ಬ್ರಾಹ್ಮಣರೆ! ವೇದದಸಾರವಾದ ಈ ಸಂಪೂರ್ಣ ನಾಮಕಮಂತ್ರಕ್ಕೆ ಅಘೋರಋಷಿಯೆಂದು ಪಂಡಿತರು ಹೇಳುತ್ತಾರೆ. ಗಾಯತ್ರೀ, ಪಂಕ್ತಿ, ಅನುಷ್ಟುಪ್, ಜಗತೀ, ಬೃಹತೀ ಎಂಬ ಛಂದಸ್ಸುಗಳಿರುವುವು. ಅನಂತರ ದೇವತೆಗಳು ಸ್ಮರಿಸಲ್ಪಡ ಬೇಕು. ॥೧೦-೧೧-೧೨॥

ಸಾವಿರಾರು ಜಪಾಕುಸುಮಗಳ ವರ್ಣಕ್ಕೆ ಸಮಾನವಾದ ಸೂರ್ಯಮಂಡಲದ ಮಧ್ಯಭಾಗದಲ್ಲಿ ವಿರಾಟ್ಸ್ವರೂಪನೂ, ಬ್ರಹ್ಮ, ವಿಷ್ಣು, ಶಿವರೂಪನೂ, ಆಗಿರುವ ಯಾವ ಈ ಆದಿತ್ಯಪುರುಷನಿರುವನೋ ಅವನೇ ಶ್ರೀರುದ್ರಸಂಜ್ಞಕವಾದ ಪರಶಿವ ರೂಪಿಯಾದ ಪರಮೇಶ್ವರನು. ಆ ಶಿವನೇ, ಸತ್ಯ ಮತ್ತು ಜ್ಞಾನಸ್ವರೂಪನೆಂದು ಹೇಳಲ್ಪಡುವನೆಂದು ತಿಳಿಯಬೇಕು. ॥೧೩-೧೪॥

ಸಮಗ್ರನಮಕಸ್ಯಾಸ್ಯ ಕಥಿತಂ ದೈವತಂ ದ್ವಿಜಾಃ ।
ಪ್ರೀತ್ಯರ್ಥಂ ಪರಮೇಶಸ್ಯ ವಿನಿಯೋಗ ಉದಾಹೃತಃ ॥೧೫॥

ಋಷಿಶ್ಛಂದೋದೇವತಾನಿ ವಿಹಿತಾನಿ ಸಮಾಹಿತಃ ।
ಧ್ಯಾಯೇನ್ನಿರಾಮಯಂ ವಸ್ತು ಸರ್ಗಸ್ಥಿತಿಲಯಾಧಿಕಂ ॥೧೬॥

ಯದೇಷ ವ್ಯವಹಾರಾಣಾಮಾಧಾರಂ ಪ್ರಕೃತೇಃ ಪರಂ ।
ನಿರ್ಗುಣಂ ನಿಷ್ಕಲಂ ನಿತ್ಯಂ ಮನೋವಾಚಾಮಗೋಚರಂ ॥೧೭॥

ಪರಂ ತೇಜೋಽಹಮಸ್ಮೀತಿ ಧ್ಯಾತ್ವೈವಂ ದ್ವಿಜಪುಂಗವಾಃ ।
ಸಗುಣಂ ಹೃದಯೇ ಧ್ಯಾಯೇದ್ಬ್ರಹ್ಮರಂಧ್ರೇಥ ವಾ ಪ್ರಭುಂ ॥೧೮॥

ಶುದ್ಧಸ್ಫಟಿಕಸಂಕಾಶಂ ಮಧ್ಯಾಹ್ನಾದಿತ್ಯಸಂನಿಭಂ ।
ಸ್ವಸಂವೇದ್ಯಮನಾದ್ಯಂತಂ ಶ್ವೇತಪದ್ಮಾಯುತಪ್ರಭಂ ॥೧೯॥

ಗಂಗಾಧರಂ ಶಶಿಕರಂ ಜಟಾಮುಕುಟಭೂಷಿತಂ ।
ಶ್ವೇತಭೂತಿತ್ರಿಪುಂಡ್ರೇಣ ವಿರಾಜಿತಲಲಾಟಕಂ ॥೨೦॥

---

ಆ ಪರಶಿವನ ಪ್ರೀತಿಗಾಗಿ ಹೇಳಬೇಕಾದ ವಿನಿಯೋಗವೂ ಹೇಳಲ್ಪಟ್ಟಿದೆ ; ಓ ವಿಪ್ರರೇ! ನಿಯಮಬದ್ಧನಾಗಿ ತೋರುತ್ತಾ, ಸೃಷ್ಟಿ, ಸ್ಥಿತಿ ಲಯಗಳಿಗೆ ಸಿಲುಕದೇ ಉತ್ತಮನೆನಿಸಿ, ಸುಖಸ್ವರೂಪವಾಗಿರುವ ಈ ಶಿವರೂಪವನ್ನು ಧ್ಯಾನಮಾಡಬೇಕು. ॥೧೫-೧೬॥

ಈ ಶಿವನು ಸಕಲಪ್ರಾಪಂಚಿಕವ್ಯವಹಾರಗಳಿಗೂ (ಕಾರ್ಯಗಳಿಗೂ) ಆಧಾರ ಭೂತನು ಪ್ರಕೃತಿಗಿಂತ ಬೇರೆಯಾದವನು ; ಗುಣರಹಿತ, ಕಲಂಕಶೂನ್ಯ, ಮತ್ತು ನಿತ್ಯನೆನಿಸಿ ಮನಸ್ಸು, ವಾಕ್ಕುಗಳಿಗೆ ಗೋಚರಿಸದವನಾಗಿರುವನು. ಇಂತಹ ವಸ್ತು ವನ್ನು ತೇಜಸ್ಸ್ವರೂಪವೇ ನಾನಾಗಿರುವೆನೆಂದು ಧ್ಯಾನಿಸಿ, ವಿಪ್ರವರ್ಯರು ತಮ್ಮ ಮನದ ಲ್ಲಾಗಲೀ ಬ್ರಹ್ಮರಂಧ್ರದಲ್ಲಿಯಾಗಲೀ ಈ ಪ್ರಭುವನ್ನು ಸಗುಣಭಾವನೆಯಿಂದ ಧ್ಯಾನಮಾಡಬೇಕು. ॥೧೭-೧೮॥

ಮಹಾದೇವನು ಸ್ಫಟಿಕಸದೃಶನೂ, ಮಧ್ಯಾಹ್ನಕಾಲದ ಸೂರ್ಯಸಮಾನನೂ, ಆತ್ಮಗೋಚರನೂ, ಆದ್ಯಂತಶೂನ್ಯನೂ, ಹತ್ತುಸಾವಿರ ಬಿಳಿದಾವರೆಗಳಂತೆ ಕಾಂತಿ ಯುಳ್ಳವನೂ, ಗಂಗೆಯನ್ನು ಧರಿಸಿರುವವನೂ, ಚಂದ್ರಪಾಣಿಯೂ, ಜಡೆಗಳಕಿರೀಟ

ಲೋಚನತ್ರಯಸಂಪನ್ನಂ ಸ್ವರ್ಣಕುಂಡಲಶೋಭಿತಂ ।
ಬಿಂಬಾಧರಂ ಚತುರ್ಬಾಹುಂ ಮುಕ್ತಾಹಾರೋಪಶೋಭಿತಂ ॥೨೧॥

ಅಕ್ಷಮಾಲಾಸುಧಾಕುಂಭಂ ಚಿನ್ಮಯಾಂ ಮುದ್ರಿಕಾಮಪಿ ।
ಪುಸ್ತಕಂ ಚ ಭುಜೈರ್ದಿವ್ಯೈರ್ದಧಾನಂ ಪಾರ್ವತೀಪತಿಂ ॥೨೨॥

ಶುಕ್ಲಯಜ್ಞೋಪವೀತೇನ ಶ್ವೇತವಸ್ತ್ರೇಣ ಶೋಭಿತಂ ।
ಶ್ವೇತಾಂಬರಧರಂ ಶ್ವೇತಂ ರತ್ನಸಿಂಹಾಸನೇ ಸ್ಥಿತಂ ॥೨೩॥

ವೀರಾಸನೇ ಸಮಾಸೀನಂ ವಿರಾಡ್ರೂಪಿಣಮೀಶ್ವರಂ ।
ಸಂತಪ್ತಹೇಮರುಚಿರಂ ಸ್ವಾಂಗುಲೀಯಕಭೂಷಿತಂ ॥೨೪॥

ಮುಕ್ತಾಮಾಣಿಕ್ಯಸೌವರ್ಣಂ ಕಾಂಚೀದಾಮವಿರಾಜಿತಂ ।
ಯೋಗಿಭಿಃ ಸನಕಾದ್ಯೈಶ್ಚ ಸ್ತೂಯಮಾನಮಹರ್ನಿಶಂ ॥೨೫॥

---

ದಿಂದಲಂಕೃತನೂ, ಬಿಳಿಯ ಭಸ್ಮತ್ರಿಪುಂಡ್ರಗಳಿಂದ ವಿರಾಜಮಾನವಾದ ಹಣೆಯುಳ್ಳವನೂ ಆಗಿರುವನು. ॥೧೯-೨೦॥

ಪರಶಿವನು ಮೂರು ಕಣ್ಣುಗಳುಳ್ಳವನೂ, ಚಿನ್ನದ ಕುಂಡಲದಿಂದ ಶೋಭಿಸುತ್ತಿರುವನೂ, ತೊಂಡೆಯ ಹಣ್ಣಿನಂತಿರುವ ಕೆಳದುಟಿಯುಳ್ಳವನೂ, ನಾಲ್ಕು ತೋಳುಗಳುಳ್ಳವನೂ, ಮುತ್ತಿನ ಸರಗಳಿಂದ ಶೋಭಿಸುತ್ತಿರುವವನೂ, ಜಪಸರ, ಅಮೃತನಿಧಿಯಾದ ಚಂದ್ರ ಚಿತ್ಸ್ವರೂಪವಾದ (ಜ್ಞಾನ) ಮುದ್ರೆ ಮತ್ತು ಪುಸ್ತಕಗಳನ್ನೂ ದಿವ್ಯವಾದ ನಾಲ್ಕು ಕೈಗಳಲ್ಲಿಯೂ ಧರಿಸಿರುವವನೂ, ಪಾರ್ವತೀರಮಣನೂ ಆಗಿರುವನೆಂದು ಧ್ಯಾನಿಸಬೇಕು. ॥೨೧-೨೨॥

ಬೆಳ್ಳಗಿರುವ ಯಜ್ಞೋಪವೀತ ಮತ್ತು ವಸ್ತ್ರಗಳಿಂದ ಶೋಭಿಸುತ್ತಿರುವವನೂ, ಶುಭ್ರವಸ್ತ್ರಧಾರಿಯೂ, ಶುಕ್ಲವರ್ಣನೂ, ರತ್ನಮಯವಾದ ಸಿಂಹಾಸನದಲ್ಲಿ ಮಂಡಿಸಿರುವವನೂ, ವೀರಾಸನವನ್ನಾಶ್ರಯಿಸಿರುವವನೂ, ವಿರಾಟ್ಸ್ವರೂಪಿಯೂ ಐಶ್ವರ್ಯಸಂಪನ್ನನೂ, ಕಾದ ಚಿನ್ನದಂತೆ ಮನೋಹರವಾದ ದೇಹಕಾಂತಿಯುಳ್ಳವನೂ, ಉಂಗುರಗಳಿಂದಲಂಕೃತನೂ ಆಗಿ ಮಹಾದೇವನು ರಂಜಿಸುವನು. ॥೨೩-೨೪॥

ಮುತ್ತು, ಮಾಣಿಕ್ಯ, ಚಿನ್ನಗಳಿಂದ ರಚಿತವಾದ ಸೊಂಟಪಟ್ಟಿಯಿಂದ ವಿರಾಜಿಸುತ್ತಿರುವವನೂ, ಸನಕಸನಂದನಾದಿ ಯೋಗಿವರ್ಯರಿಂದ ಹಗಲಿರುಳೂ ಸ್ತೋತ್ರ

ದಾತಾರಂ ಸರ್ವವಿದ್ಯಾನಾಂ ಸಕಲೈಶ್ವರ್ಯದಾಯಕಂ ।
ಸರ್ವಾಭೀಷ್ಟಪ್ರದಾತಾರಂ ವಟಮೂಲನಿವಾಸಿನಂ ॥೨೬॥

ಸತ್ಯಾನಂದಚಿದಾತ್ಮಾನಂ ಶಂಕರಂ ಪರಮೇಶ್ವರಂ ।
ವಾಮಾಂಕೇ ಸಂಸ್ಥಿತಾಂ ಗೌರೀಂ ಬಾಲಾರ್ಕಾಯುತಸಂನಿಭಾಂ॥೨೭॥

ಜಪಾಕುಸುಮಸಾಹಸ್ರಸಮಾನಶ್ರಿಯಮೀಶ್ವರೀಂ ।
ಸುವರ್ಣರತ್ನಖಚಿತಮುಕುಟೇನ ವಿರಾಜಿತಾಂ ॥೨೮॥

ಲಲಾಟಪುಟಸಂರಾಜತ್ಸಂಲಗ್ನತಿಲಕಾಂಕಿತಾಂ ।
ಭ್ರಮದ್ಭ್ರಮರನೀಲಾಭಧಂಮಿಲ್ಲಾಲಕಶೋಭಿತಾಂ ॥೨೯॥

ಸೌಂದರ್ಯಜಿತಕಾಮೇಶಕೋದಂಡಭ್ರೂಯುಗಾನ್ವಿತಾಂ।
ರಾಜೀವಾಯತನೇತ್ರಾಂತಾಂ ನೀಲೋತ್ಪಲದಲೇಕ್ಷಣಾಂ ॥೩೦॥

---

ಮಾಡಲ್ಪಡುತ್ತಿರುವವನೂ, ಸಕಲ ವಿದ್ಯೆಗಳನ್ನೂ ಭಕ್ತವೃಂದಕ್ಕೆ ದಾನಮಾಡುವವನೂ, ಸಕಲ ಸಂಪತ್ತುಗಳನ್ನೀಯುವವನೂ, ಸಮಸ್ತ ಇಷ್ಟಾರ್ಥಗಳನ್ನೂ ಕೊಡುವವನೂ, ಆಲದ ಮರದ ಬುಡದಲ್ಲಿ ವಾಸಮಾಡುವವನೂ ಆಗಿ ಶಂಕರನು ವಿರಾಜಿಸುವನು. ॥೨೫-೨೬॥

ಸಚ್ಚಿದಾನಂದಸ್ವರೂಪನೂ, ಜಗನ್ಮಂಗಳಕರನೂ, ಆದ ಪರಮೇಶ್ವರನ ಎಡತೊಡೆಯಮೇಲೆ ಶುಭ್ರವರ್ಣವಿಶಿಷ್ಟಳೂ, ಹತ್ತುಸಾವಿರ ಎಳೆಸೂರ್ಯರ ಸಮಾನ ಕಾಂತಿಯುಳ್ಳವಳೂ, ಸಾವಿರಾರು ಜಪಾಪುಷ್ಪಗಳಿಗೆ ಸಮವಾದ ತೇಜಸ್ಸುಳ್ಳವಳೂ, ಈಶ್ವರನ ಅರ್ಧಾಂಗಿಯೂ, ಚಿನ್ನ ಮತ್ತು ರತ್ನಖಚಿತವಾದ ಕಿರೀಟದಿಂದ ವಿರಾಜಿಸುತ್ತಿರುವವಳೂ ಆದ ಜಗನ್ಮಾತೆಯು ಕಂಗೊಳಿಸುತ್ತಿರುವಳು. ॥೨೭-೨೮॥

ದೇವಿಯು ಹಣೆಯ ಮಧ್ಯದಲ್ಲಿ ಧರಿಸಿರುವ ತಿಲಕದಿಂದ ವಿರಾಜಿಸುತ್ತಿರುವವಳೂ, ಹಾರಾಡುತ್ತಿರುವ ದುಂಬಿಗಳಂತೆ ಕಪ್ಪಾದ ತಲೆಯ ಗಂಟು ಮತ್ತು ಮುಂಗುರುಳುಗಳಿಂದ ಶೋಭಿಸುತ್ತಿರುವವಳೂ, ಸೌಂದರ್ಯದಿಂದ ಗೆದ್ದ ಮನ್ಮಥನ ಬಿಲ್ಲಿನಂತಿರುವ ಎರಡು ಹುಬ್ಬುಗಳುಳ್ಳವಳೂ, ತಾವರೆಯ ದಳದಂತೆ ಉದ್ದವಾದ ಕಣ್ಣುಗಳ ಕೊನೆಯುಳ್ಳವಳೂ, ಕನ್ನೈದಿಲೆಯ ದಳದಂತಿರುವ ಕಣ್ಗಳುಳ್ಳವಳೂ ಆಗಿರುವಳು. ॥೨೯-೩೦॥

ಮುಕ್ತಾಮಾಣಿಕ್ಯಖಚಿತನಾಸಿಕಾಭರಣಾನ್ವಿತಾಂ ।
ಕುಂಡಲದ್ವಯಸಂಶೋಭಿಕರ್ಣಯುಗ್ಮವಿರಾಜಿತಾಂ ॥೩೧॥

ತಾಂಬೂಲಚರ್ವಣರತಾಂ ನವರತ್ನವಿರಾಜಿತಾಂ ।
ಆಢ್ಯಭೂಷಣಸೌವರ್ಣಚಿತ್ರಕಾಭರಣಾನ್ವಿತಾಂ ॥೩೨॥

ಪತಾಕಾಭರಣೋಪೇತಾಂ ಮುಕ್ತಾಹಾರೋಪಶೋಭಿತಾಂ ।
ಇಕ್ಷುಕಾರ್ಮುಕಪುಷ್ಪೇಷು ಚಾಪಬಾಣಶರಾಕರೈಃ ॥೩೩॥

ದಿವ್ಯಾಂಗುಲೀಯಕಯುತೈಃ ಕೇಯೂರಯುಗಲಾನ್ವಿತೈಃ ।
ಸ್ವರ್ಣಕಂಕಣಸಂಯುಕ್ತೈಶ್ಚತುರ್ಭಿರ್ಬಾಹುಭಿರ್ಯುತಾಂ ॥೩೪॥

ಸುವರ್ಣರತ್ನಖಚಿತಕಾಂಚೀಘಂಟಾವಿರಾಜಿತಾಂ ।
ಸೌಭಾಗ್ಯಭೂಷಣಯುತಾಂ ಸೂಕ್ಷ್ಮಮಧ್ಯವಿರಾಜಿತಾಂ ॥೩೫॥

ರಕ್ತಚಂದನಸಂಲಿಪ್ತಹೇಮಕುಂಭೋಪಮಸ್ತನೀಂ ।
ರತ್ನವಸ್ತ್ರಪರೀಧಾನಾಂ ರತ್ನಮಾಲ್ಯವಿಭೂಷಿತಾಂ ॥೩೬॥

---

ಗಿರಿಜೆಯು ಮುತ್ತುಮಾಣಿಕ್ಯಗಳಿಂದ ಖಚಿತವಾದ ಮೂಗುಬಟ್ಟುಳ್ಳವಳು, ಎರಡು ಕಿವಿಗಳಿಂದಲೂ ಕುಂಡಲಗಳನ್ನು ಧರಿಸಿ ಶೋಭಿಸುತ್ತಿರುವಳು, ತಾಂಬೂಲವನ್ನು ಸೇವಿಸುವುದರಲ್ಲಿ ನಿರತಳಾಗಿ ನವರತ್ನಗಳಿಂದ ಶೋಭಿಸುತ್ತಿರುವಳು, ಬೆಲೆಬಾಳುವ ಆಭರಣ ಮತ್ತು ವಿಚಿತ್ರವಿಚಿತ್ರವಾದ ಸುವರ್ಣಾಭರಣಗಳಿಂದಲಂಕೃತಳಾಗಿರುವಳು, ॥೩೧-೩೨॥

ಮತ್ತು ಧ್ವಜಾಭರಣವಿಶಿಷ್ಟಳೂ, ಮುತ್ತಿನಸರದಿಂದ ಶೋಭಿಸುತ್ತಿರುವವಳೂ, ಕೈಗಳಲ್ಲಿ ಕಬ್ಬಿನ ಬಿಲ್ಲು: ಹೂಬಾಣಗಳನ್ನು ಹಿಡಿದಿರುವವಳೂ, ದಿವ್ಯವಾದ ಉಂಗುರಗಳನ್ನು ಧರಿಸಿ, ಎರಡು ತೋಳ್ಬಂದಿಗಳನ್ನು ಅಲಂಕರಿಸಿಕೊಂಡಿರುವವಳೂ, ನಾಲ್ಕು ಕೈಗಳಲ್ಲೂ ಚಿನ್ನದ ಕಂಕಣಗಳನ್ನು ಧರಿಸಿರುವವಳೂ ಆಗಿದ್ದಾಳೆ. ॥೩೩-೩೪॥

ನಾನಾ ರತ್ನಮಯವಾದ ಸುವರ್ಣರಚಿತವಾದ ಗೆಜ್ಜೆಪಟ್ಟಿಯುಳ್ಳವಳೂ, ಸೌಭಾಗ್ಯಪ್ರದವಾದ ಆಭರಣವುಳ್ಳವಳೂ, ಸೂಕ್ಷ್ಮವಾದ ಸೊಂಟವುಳ್ಳವಳೂ, ಕೆಂಪುಚಂದನದಿಂದ ಲೇಪಿತವಾದ ಸುವರ್ಣಕುಂಭಗಳಂತಿರುವ ಸ್ತನಗಳುಳ್ಳವಳೂ,

ತನುಮಧ್ಯಾಂ ಪೃಥುಶ್ರೋಣೀಂ ಶಿವವಾಮಾಂಕಸಂಶ್ರಯಾಂ।
ಕದಲೀಲಲಿತಸ್ತಂಭಸಂನಿಭೋರುಯುಗಾನ್ವಿತಾಂ ॥೩೭॥

ಸುವರ್ಣಪಾದಕಟಕಯುಗಲೇನ ಸುಶೋಭಿತಾಂ।
ಸಂತಪ್ತಹೇಮಪಾದಾಂಗುಲೀಯಕೈಃ ಸುವಿರಾಜಿತಾಂ ॥೩೮॥

ಪೂರ್ಣಚಂದ್ರಮುಖೀಮಂಬಾಂ ಸುಸ್ಮಿತಾಸ್ಯವಿರಾಜಿತಾಂ।
ಬ್ರಹ್ಮವಿಷ್ಣುಮಹೇಂದ್ರಾದಿಶಿರೋಮುಕುಟಜಾತಯಾ ॥೩೯॥

ಶ್ರಿಯಾ ವಿರಾಜಿತಪದಾಂ ಭಕ್ತತ್ರಾಣಪರಾಯಣಾಂ।
ಸ್ವಕಾಂತ್ಯಾ ಶಂಕರಂ ದೇವಂ ಪುನರಪ್ಯರುಣೀಕೃತಾಂ ॥೪೦॥

ಸರ್ವಾಲಂಕಾರಸುಭಗಂ ಯುವಾನಮತಿಸುಂದರಂ।
ಛತ್ರೇಣ ಶೋಭಿತಂ ಮೂರ್ಧ್ನಿ ಚಾಮರಾಭ್ಯಾಂ ವಿರಾಜಿತಂ ॥೪೧॥

---

ರತ್ನಖಚಿತವಾದ ಬಟ್ಟೆಗಳನ್ನು ಹೊದಿದಿರುವವಳೂ, ರತ್ನಹಾರವನ್ನು ಅಲಂಕರಿಸಿಕೊಂಡಿರುವವಳೂ ಆಗಿ ಪರಶಿವನ ತೊಡೆಯಮೇಲೆ ಮಂಡಿಸಿರುವಳು. ॥೩೫-೩೬॥

ಸಣ್ಣಸೊಂಟದಿಂದ ಕೂಡಿ, ಗಂಭೀರವಾದ ಜಘನಭಾಗಗಳುಳ್ಳವಳಾಗಿ, ಶಿವನ ಎಡದೊಡೆಯಲ್ಲಿ ಮಂಡಿಸಿ, ಮನೋಹರವಾದ ಬಾಳೆಯ ಕಂಬಗಳಂತಿರುವ ತೊಡೆಗಳೆರಡರಿಂದ ಚೆನ್ನಾಗಿ ಶೋಭಿಸುತ್ತಿರುವ ಶಿವವಲ್ಲಭೆಯು, ಪುಟವಿಟ್ಟ ಚಿನ್ನದಂತೆ ಇರುವ ಕಾಲುಗುರುಗಳಿಂದ ವಿರಾಜಿಸುತ್ತಿರುವಳು. ॥೩೭-೩೮॥

ಪೂರ್ಣಚಂದ್ರನಂತೆ ಮನೋಹರವಾದ ಮುಖವುಳ್ಳವಳೂ, ಅಂಬಿಕೆಯೂ, ಒಳ್ಳೆಯ ಮಂದಹಾಸಯುಕ್ತವಾದ ಮುಖದಿಂದ ವಿರಾಜಿಸುತ್ತಿರುವವಳೂ, ಬ್ರಹ್ಮ, ವಿಷ್ಣು, ಮಹೇಶನೇ ಮುಂತಾದ ದೇವೋತ್ತಮರ ತಲೆಯ ಮೇಲಿನ ಕಿರೀಟಗಳಿಂದುಂಟಾದ ಕಾಂತಿಯಿಂದ ವಿರಾಜಿತವಾದ ಪಾದಗಳುಳ್ಳವಳೂ, ಭಕ್ತರನ್ನು ಸಲಹುವುದರಲ್ಲಿ ನಿರತಳೂ, ತನ್ನ ಕಾಂತಿಯಿಂದ ಜಗನ್ಮಂಗಳಕರನಾದ ಮಹಾದೇವನನ್ನು ತಿರುಗಿಯೂ ಕೆಂಪುಬಣ್ಣವನ್ನಾಗಿ ಮಾಡಿರುವವಳೂ ಆದ ಪಾರ್ವತಿಯಿಂದ ಯುಕ್ತನಾದ ಮಹಾದೇವನು ಭಕ್ತರಿಗೆ ಉಪಾಸ್ಯಮೂರ್ತಿಯಾಗಿರುವನು. ॥೩೯-೪೦॥

ಸಕಲ ಅಲಂಕಾರಗಳಿಂದ ಪರಿಪೂರ್ಣನೂ, ಯುವಕನೂ, ಪೂರ್ಣಸೌಂದರ್ಯ ರಾಶಿಯಾದ ಛತ್ರಿಯನ್ನು ತಲೆಯಮೇಲೆ ಧರಿಸಿ, ಚಾಮರಗಳಿಂದ ಶೋಭಿಸುತ್ತಿರು

ಬ್ರಹ್ಮವಿಷ್ಣುಮಹೇಂದ್ರಾದಿವಂದ್ಯಮಾನಪದಾಂಬುಜಂ ।
ಸೃಷ್ಟಿಸ್ಥಿತ್ಯುಪಸಂಹಾರಹೇತುಭೂತಂ ಸನಾತನಂ ॥೪೨॥

ಅನ್ಯೋನ್ಯಾಶ್ಲಿಷ್ಟಹೃದ್ಬಾಹುಂ ಗೌರೀಶಂಕರಸಂಜ್ಞಿತಂ ।
ಸನಾತನಂ ಪರಂ ಬ್ರಹ್ಮಪರಮಾತ್ಮಾನಮವ್ಯಯಂ ॥೪೩॥

ನಮಾಮಿ ಜಗತಾಮೀಶಂ ಶಂಕರಂ ಪರಮೇಶ್ವರಂ ।
ಏವಂ ಧ್ಯಾತ್ವಾ ಜಪೇನ್ನಿತ್ಯಂ ಶತರುದ್ರೀಯಮಾದರಾತ್ ॥೪೪॥

ಚಮಕೇ ರುದ್ರಸಂಖ್ಯಾಕಾನನುವಾಕಾನ್ನಪೇತ್ತತಃ ।
ಏಕವಾರಂ ದ್ವಿವಾರಂ ವಾ ತ್ರಿವಾರಂ ಚಮಕಾನ್ವಿತಂ ॥೪೫॥

ನಮಕಂ ಪ್ರಜಪೇದೇಷಾ ಜಪೋಪಾಸ್ತಿರುದೀರಿತಾ ।
ಶಿವಪ್ರೀತಿಕರಾ ಶ್ರೇಷ್ಠಾ ಶ್ರೀರುದ್ರೈಕ್ಯಪ್ರದಾಯಿನೀ ॥೪೬॥

---

ವವನೂ, ಬ್ರಹ್ಮ, ವಿಷ್ಣು, ಮಹೇಂದ್ರ ಮುಂತಾದ ದೇವತೆಗಳಿಂದ ನಮಸ್ಕರಿಸಲ್ಪಡುವ ಪಾದಕಮಲವುಳ್ಳವನೂ, ಸೃಷ್ಟಿ, ಸ್ಥಿತಿ, ಸಂಹಾರರೂಪವಾದ ಪ್ರಪಂಚಕಾರ್ಯಗಳಿಗೆ ಕಾರಣಭೂತನೂ, ಸನಾತನನೂ ಎನಿಸಿರುವನು; ॥೪೧-೪೨॥

ಹೀಗೆ ಪರಸ್ಪರವಾಗಿ ಆಲಂಗಿಸಲ್ಪಟ್ಟ ಹೃದಯ ಮತ್ತು ತೋಳ್ಗಳುಳ್ಳವನಾಗಿ ಗೌರೀಶಂಕರನೆಂದು ಸಂಜ್ಞೆ ಪಡೆದಿರುವವನೂ, ಪುರಾತನನೂ, ಪರಬ್ರಹ್ಮನೂ, ಪರಮಾತ್ಮನೂ, ಅಚ್ಯುತನೂ, ಜಗದೊಡೆಯನೂ, ಲೋಕಕಲ್ಯಾಣಕಾರಕನೂ ಆದ ಪರಮೇಶ್ವರನಿಗೆ ನಮಸ್ಕಾರಮಾಡುತ್ತೇನೆಂದು ಧ್ಯಾನಮಾಡಿ, ನಿತ್ಯವೂ ಈ ಶತರುದ್ರೀಯಮಂತ್ರವನ್ನು ಆದರದಿಂದ ಜಪಮಾಡಬೇಕು. ॥೪೩-೪೪॥

ಚಮಕಮಂತ್ರದಲ್ಲಿ ರುದ್ರಜಪಸಂಖ್ಯಾನುಗುಣವಾಗಿ ಅನುವಾಕಗಳನ್ನು ವಿಂಗಡಿಸಿಕೊಂಡು ಜಪಮಾಡಬೇಕು. ಅನಂತರ ಒಂದು, ಎರಡು, ಮೂರುಬಾರಿಯಾದರೂ ಚಮಕಮಂತ್ರದೊಡನೆ ಈ ನಮಕಮಂತ್ರವನ್ನು ಜಪಿಸಬೇಕು. ಈ ಜಪೋಪಾಸನೆಯು ಶಿವನಿಗೆ ಪ್ರೀತಿಕರವೂ, ಶ್ರೇಷ್ಠವೂ, ಶ್ರೀ ರುದ್ರದೇವನಲ್ಲಿ ಐಕ್ಯವನ್ನು ಉಂಟುಮಾಡುವುದೂ ಎಂಬುದಾಗಿ ಹೇಳಲ್ಪಟ್ಟಿದೆ. ॥೪೫-೪೬॥

ಸ್ಥಾವರೇ ಜಂಗಮೇ ಲಿಂಗೇ ಸಮಾಹಿತಮನಾಃ ಶುಚಿಃ ।
ನ್ಯಾಸಧ್ಯಾನಾದಿಸಹಿತಂ ಶಂಚಮೇ ಸೂಕ್ತಪೂರ್ವಕಂ ॥೪೭॥

ಪ್ರಜಪಂಛತರುದ್ರೀಯಮಭಿಷೇಕಂ ಸಮಾಚರೇತ್ ।
ಏಕವಾರಂ ದ್ವಿವಾರಂ ವಾ ತ್ರಿವಾರಂ ಚಮಕಾನ್ವಿತಾ ॥೪೮॥

ಉಪಾಸ್ತಿಃ ಪಂಚಮೀ ಪ್ರೋಕ್ತಾ ಶಂಭೋಃ ಪ್ರೀತಿಕರೀ ಶುಭಾ ।
ವಿಶೇಷಮಂತ್ರಾನ್ವಕ್ಷ್ಯಾಮಿ ಶ್ರುಣುಧ್ವಂ ದ್ವಿಜಪುಂಗವಾಃ ॥೪೯॥

ಜಪಿತ್ವಾ ಸಮಗ್ರಂ ನಮಕಂ ಶತರುದ್ರೀಯಮುತ್ತಮಂ ।
ಚಮಕಸ್ಯಾನುವಾಕಸ್ಯ ಚೈಕಮೇಕಂ ತತೋ ಜಪೇತ್ ॥೫೦॥

ರುದ್ರೈಕಾದಶಿನೀಮೇತಾಂ ಪ್ರಜಪಂಛಂಕರೋಪರಿ ।
ಕರೋತಿ ಯೋಽಭಿಷೇಕಂ ಹಿ ನಿಯಮೇನೈಕಮಂಡಲಂ ॥೫೧॥

---

ಸ್ಥಾವರ (ಚಲಿಸದಿರುವುದು) ಅಥವ ಜಂಗಮ (ಸಾಲಿಗ್ರಾಮಾದಿರೂಪವಾದ ಚಾಲನಮಾಡಬಹುದಾದ) ಲಿಂಗದಲ್ಲಿ ನೆಟ್ಟಮನಸ್ಸಿನಿಂದ ಶುದ್ಧನಾಗಿ, ನ್ಯಾಸ, ಧ್ಯಾನ ಮುಂತಾದವುಗಳಿಂದ ಯುಕ್ತವಾದ ಶತರುದ್ರಿಯಮಂತ್ರಜಪಕ್ಕೆ ಮೊದಲು ಶಂಚಮೇ ಸೂಕ್ತವನ್ನು ಶಾಂತಿಪಾಠವಾಗಿ ಹೇಳಿ, ಅನಂತರ ನಮಕಮಂತ್ರಗಳನ್ನು ಜಪಿಸುತ್ತಾ, ಒಂದು, ಎರಡು, ಮೂರುಬಾರಿ ಚಮಕಮಂತ್ರದೊಡನೆ ಆ ಶಿವಲಿಂಗಕ್ಕೆ ಅಭಿಷೇಕಮಾಡಬೇಕು. ಇದು ಶಂಭುವಿಗೆ ಪ್ರೀತಿಕರವೂ ಶುಭಕರವೂ ಆದ ಐದನೆಯ ಉಪಾಸನೆಯೆಂದು ಹೇಳಲ್ಪಟ್ಟಿದೆ. ॥೪೭-೪೮॥

ಓ ವಿಪ್ರವರ್ಯರೆ, ಇದರಲ್ಲಿ ಇನ್ನೂ ಹೆಚ್ಚಿನ ಮಂತ್ರಗಳನ್ನು ಹೇಳುವೆನು ಲಾಲಿಸಿ, ಶತರುದ್ರೀಯನೆನಿಸಿದ ಉತ್ತಮವಾದ ಈ ನಮಕಮಂತ್ರವನ್ನು ಸಂಪೂರ್ಣವಾಗಿ ಜಪಮಾಡಿ, ಅನಂತರ ಚಮಕದಲ್ಲಿ ಒಂದೊಂದು ಅನುವಾಕಗಳನ್ನು ಜಪಮಾಡಬೇಕು. ಹೀಗೆ ಏಕಾದಶ (ಹನ್ನೊಂದು) ಆವೃತ್ತಿಯಲ್ಲಿ ಈ ರುದ್ರಮಂತ್ರಜಪಪೂರ್ವಕವಾಗಿ ಶಂಕರನಿಗೆ ಒಂದು ಮಂಡಲ ಅಂದರೆ ನಲವತ್ತೆಂಟು ದಿನಗಳವರೆಗೆ ನಿಯಮದಿಂದ ಅಭಿಷೇಕಮಾಡುವವನು, ಬ್ರಹ್ಮಹತ್ಯೆ, ಸುರಾಪಾನ, ಚಿನ್ನ ಕದಿಯುವುದು, ಗುರುತಲ್ಪಗಮನ ಮತ್ತು ಈ ನಾಲ್ವರ ಸಹವಾಸರೂಪವಾದ ಪಂಚಮಹಾಪಾಪಗಳಿಂದ ಮುಕ್ತನಾಗಿ ರಾಜಸೂಯಯಾಗದ ಫಲವನ್ನೈದುವನು ಎಂಬುದರಲ್ಲಿ ಸಂಶಯವಿಲ್ಲ. ॥೪೯-೫೦-೫೧॥

ಸಮಹಾಪಾತಕೈಸ್ತ್ಯಕ್ತ್ವೋ ರಾಜಸೂಯಫಲಂ ಲಭೇತ್ ।
ಶತಮಂತ್ರೈಶ್ಚತುರ್ವಾರಂ ಜುಹುಯಾತ್ಪಾಯಸಂ ಶುಭಂ ॥೫೨॥

ರುದ್ರಸಂಖ್ಯಾನುವಾಕೈಶ್ಚ ಜಪಹೋಮೋ ಹುನೇತ್ತತಃ ।
ಮಧುತ್ರಿತಯಸಂಯುಕ್ತಂ ಮಹಾಪಾಪೈಃ ಪ್ರಮುಚ್ಯತೇ ॥೫೩॥

ಅಭಿಷೇಕಂ ಕೇವಲಂ ವಾ ಮಂಡಲಂ ಯಃ ಕರೋತಿ ಹಿ ।
ಇಹಭುಕ್ತ್ವಾಽಖಿಲಾನ್ಭೋಗಾನ್ಪರೇ ಬ್ರಹ್ಮಣಿ ಲೀಯತೇ ॥೫೪॥

ಪೂಜಾಯಾ ಅಧಿಕೋ ಹೋಮೋ ಹೋಮಾತ್ತರ್ಪಣಮುತ್ತಮಂ ।
ತರ್ಪಣಾಚ್ಚ ಜಪಃ ಶ್ರೇಷ್ಠಃ ಅಭಿಷೇಕಃ ಪರೋ ಜಪಾತ್ ॥೫೫॥

ರುದ್ರೈಕಾದಶಿನೀಂ ಜಪ್ತ್ವಾ ಪ್ರಜಪೇಚ್ಛಾಂತಿಪಂಚಕಂ ।
ಅನ್ಯಥಾ ತಸ್ಯ ಸಂಸಿದ್ಧಿರ್ನಾಸ್ತಿ ನಾಸ್ತಿ ತಪೋಧನ ॥೫೬॥

ಯಥಾ ಭಕ್ತ್ಯುದಯೋ ನೄಣಾಂ ತತೋಽಪಾಸ್ತಿಂ ಸಮಾಚರೇತ್ ।
ಚತುರಸ್ರಂ ವರಂ ಕುಂಡಂ ಹೋಮಕಾಲೇ ವಿಧೀಯತೇ ॥೫೭॥

---

ರುದ್ರಸಂಖ್ಯಾನುವಾಕಪೂರ್ವಕವಾಗಿ ಈ ಶತರುದ್ರೀಯಮಂತ್ರಗಳನ್ನುಚ್ಚರಿಸುತ್ತಾ ನಾಲ್ಕುಬಾರಿ ಯಜ್ಞೇಶ್ವರನಲ್ಲಿ ಪಾಯಸವನ್ನು ಹೋಮಮಾಡಬೇಕು. ಅದರಲ್ಲಿಯೂ ಮೂರುಭಾಗ ಜೇನುತುಪ್ಪದಿಂದ ಬೆರಸಿಕೊಂಡಿರುವ ಪಾಯಸದಿಂದ ಹೋಮಮಾಡಬೇಕು ಇದರಿಂದ ಎಂತಹ ಮಹಾಪಾಪಗಳಿದ್ದರೂ ಬಿಡುಗಡೆಯಾಗುವುವು. ಕೇವಲ ರುದ್ರಾಭಿಷೇಕವನ್ನು ಮಾತ್ರವೇ ಒಂದು ಮಂಡಲದ ವರೆಗೆ ಮಾಡುವವನೂ ಇಲ್ಲಿ ಸಕಲ ಭೋಗಗಳನ್ನೂ ಅನುಭವಿಸಿ, ಪರಲೋಕದಲ್ಲಿ ಆ ಪರಬ್ರಹ್ಮನಲ್ಲೈಕ್ಯವಾಗುತ್ತಾನೆ. ॥೫೨-೫೩-೫೪॥

ಪೂಜೆಗಿಂತ ಹೋಮ, ಹೋಮಕ್ಕಿಂತ ತರ್ಪಣ, ಅದಕ್ಕಿಂತಲೂ ಜಪ, ಜಪಕ್ಕಿಂತಲೂ ಅಭಿಷೇಕ ಹೀಗೆ ಉತ್ತರೋತ್ತರ ಶ್ರೇಷ್ಠವಾಗಿರುವುವು. ಓ ಮುನಿಯೇ, ಹನ್ನೊಂದುಬಾರಿ ರುದ್ರಮಂತ್ರಜಪಮಾಡಿ, ಅನಂತರ ಶಾಂತಿಪಂಚಕವನ್ನು ಉಚ್ಚಾರಮಾಡಬೇಕು. ಇಲ್ಲದಿದ್ದಲ್ಲಿ ನಿಶ್ಚಯವಾಗಿಯೂ ಅವನಿಗೆ ಸಿದ್ಧಿಯುಂಟಾಗುವುದಿಲ್ಲವೆಂದು ತಿಳಿ. ॥೫೫-೫೬॥

ಅಯ್ಯ ಜೈಗೀಷವ್ಯನೆ, ಮಾನವರಿಗೆ ಶಂಕರನಲ್ಲಿ ಭಕ್ತಿಯುಂಟಾದಾಗ

ಗಣೇಶಮಾದೌ ಸಂಪೂಜ್ಯ ಕೃತ್ವಾ ನಿಯಮಮೇವ ಚ ।
ಉಪಾಸನಾಪಂಚಕಾರ್ಥಂ ಕೃತ್ವಾ ನಿಯಮಮಾದಿತಃ ॥೫೮॥

ಸಮಗ್ರಂ ನಮಕಂ ಪ್ರೋಕ್ತಃ ಪ್ರಜಪೇಚ್ಚಮಕಾನ್ವಿತಂ ।
ಸಮಹಾಪಾತಕೈರ್ಮುಕ್ತಃ ಶಿವಸಾಯುಜ್ಯಮಶ್ನುತೇ ॥೫೯॥

ಮಧ್ಯಾಹ್ನೇ ಪ್ರಜಪೇದ್ಯಸ್ತು ಚಮಕೇನ ಯುತಂ ದ್ವಿಜಾಃ ।
ಸ ಸೂರ್ಯಮಂಡಲಂ ಭಿತ್ವಾ ಗಣಾನಾಮಗ್ರಣೀರ್ಭವೇತ್ ॥೬೦॥

ಸಾಯಂಕಾಲೇ ಜಪೇದ್ಯಸ್ತು ನಮಕಂ ಚಮಕಾನ್ವಿತಂ ।
ಅವಾಪ್ಯ ಸಕಲಾನ್ಭೋಗಾನ್ಪರೇ ಬ್ರಹ್ಮಣಿ ಲೀಯತೇ ॥೬೧॥

ಭೂತಿಭೂಷಿತಸರ್ವಾಂಗೋ ಲಿಂಗಪೂಜಾರತಃ ಶುಚಿಃ ।
ನಮಕಂ ಚಮಕಂ ನಿತ್ಯಂ ಪ್ರಜಪೇತ್ಫಲದಾಯಕಂ ॥೬೨॥

ವೇದಸಾರಾಣಿ ನಾಮಾನಿ ಕಥಿತಾನ್ಯತ್ರ ತಾನಿ ಹಿ ।
ಏತಜ್ಜಾಪ್ಯ ಮೃತೋ ಭೂತ್ವಾ ಬ್ರಹ್ಮಭೂಯಾಯ ಕಲ್ಪತೇ ॥೬೩॥

---

ಉಪಾಸನೆ ಮಾಡಬಹುದು. ಹೋಮಕಾಲದಲ್ಲಿ ನಾಲ್ಕುಮೂಲೆ ಚಚ್ಚೌಕದ ಶ್ರೇಷ್ಠವಾದ ಹೋಮಕುಂಡವನ್ನು ಮಾಡಬೇಕೆಂದು ವಿಧಿಯಿದೆ. ಮೊದಲು ಗಣಪತಿಯನ್ನು ಪೂಜಿಸಿ ನಿಯಮಬದ್ಧನಾಗಿ ಮೊದಲಿನಿಂದ ಕೊನೆಯವರೆಗೂ ಹಿಂದೆ ಹೇಳಿದ ಐದು ಉಪಾಸನೆಗಳಿಗಾಗಿ ಚಮೆಯೊಡನೆ ಸಂಪೂರ್ಣವಾದ ನಮಕಮಂತ್ರವನ್ನು ಕ್ರಮವಾಗಿ ಜಪಿಸಬೇಕು. ಹೀಗೆ ಜಪಮಾಡಿದರೆ ಮಹಾಪಾಪಗಳಿಂದಲೂ ಮುಕ್ತನಾಗಿ ಕೊನೆಗೆ ಶಿವಸಾಯುಜ್ಯವೈದುವನೆಂದು ತಿಳಿ. ||೫೭-೫೮-೫೯||

ಓ ವಿಪ್ರರೆ, ಮಧ್ಯಾಹ್ನಕಾಲದಲ್ಲಿ ಚಮಕಮಂತ್ರಯುಕ್ತವಾದ ಈ ರುದ್ರಮಂತ್ರವನ್ನು ಜಪಮಾಡುವವನು ಸೂರ್ಯಮಂಡಲವನ್ನು ಭೇದಿಸಿಕೊಂಡು ಶಿವಗಣಾಗ್ರಣಿಯಾಗುವನು. ಸಾಯಂಕಾಲದಲ್ಲಿ ಇದೇ ಚಮೆಯೊಡಗೂಡಿದ ನಮಕಮಂತ್ರ ಜಪಿಸುವವನು ಇಹದಲ್ಲಿ ಸಮಸ್ತ ಭೋಗಗಳನ್ನೂ ಅನುಭವಿಸಿ, ಪರದಲ್ಲಿ ಪರಬ್ರಹ್ಮನಲ್ಲಿ ಐಕ್ಯನಾಗುವನು. ||೬೦-೬೧||

ಸಕಲ ದೇಹಗಳಿಗೂ ವಿಭೂತಿಲೇಪನಮಾಡಿಕೊಂಡು ಶುಚೀಭೂತನಾಗಿ ಶಿವಲಿಂಗಪೂಜೆಯಲ್ಲಿ ತೊಡಗಿ, ನಿತ್ಯವೂ ಫಲಪ್ರದವಾದ ನಮಕ ಮತ್ತು ಚಮಕ

ಏತತ್ತೇ ಶತರುದ್ರೀಯಂ ನ್ಯಾಸಧ್ಯಾನಾದಿಕಂ ಶುಭಂ ।
ಮಯೋಕ್ತಂ ಬ್ರಾಹ್ಮಣಶ್ರೇಷ್ಠಾಃ ಕಿಂ ಪುನಃ ಶ್ರೋತುಮಿಚ್ಛಥ ॥೬೪॥

ಏಕಾವೃತ್ತ್ಯಾಘನಾಶೋ ಭವತಿ ಗಿರಿಸುತೇ ತದ್ಧಿ ಭೂಯೋ ಗಣೇಂದ್ರೋ
ತಮಿವ ಪ್ರವಿಶೇತ್ತ್ರತಸ್ತ್ರಿತಯತೋ ಶ್ರೀರುದ್ರಜಾಪೀ ನರಃ ।
ಷಡ್ವಾರಂ ಪ್ರಜಪಂಶ್ಚ ಮುಕ್ತಿಫಲಭಾಗ್ಭೂಯೋ ಭವೇಚ್ಛಾಂಭವಃ ॥೬೫॥

ಶ್ರೀರುದ್ರನಾಮಾರ್ಚನತೋ ಮಹೇಶ
ಲಿಂಗೇಽರ್ಚಯನ್ಯೋ ಕುಸುಮೈಶ್ಚ ಬಿಲ್ವೈಃ ।
ರುದ್ರಾಕ್ಷಭಸ್ಮಾಂಗಯುತೋ ವಿಮುಕ್ತ
ಶ್ಚ್ಯುತೋಽಪಿ ಮುಕ್ತೇಗಣಪೋ ಭವೇದ್ದ್ವಿಜಃ ॥೬೬॥

---

ಮಂತ್ರಗಳನ್ನು ಜಪಮಾಡಬೇಕು. ಈ ಮಂತ್ರದಲ್ಲಿ ವೇದಸಾರಭೂತವಾದ ಆ ಮಹಾದೇವನ ನಾಮಗಳು ಹೇಳಲ್ಪಟ್ಟಿವೆ. ಇದನ್ನು ಜಪಿಸುತ್ತಾ ಮೃತನಾದವನು ಬ್ರಹ್ಮಸ್ವರೂಪವನ್ನು ಹೊಂದಲು ಸಮರ್ಥನಾಗುತ್ತಾನೆ. ॥೬೨-೬೩॥

ಅಯ್ಯ ಬ್ರಾಹ್ಮಣೋತ್ತಮನೇ, ನ್ಯಾಸಧ್ಯಾನವೇ ಮೊದಲಾದವುಗಳೊಡನೆ ಶುಭಕರವಾದ ಈ ಶತರುದ್ರೀಯಮಂತ್ರವನ್ನು ನಿನಗೆ ಉಪದೇಶಿಸಿದ್ದೇನೆ. ಓ ವಿಪ್ರ ವರ್ಯರೆ! ಪುನಃ ಮತ್ತೇನು ಕೇಳಲಿಚ್ಛಿಸುವಿರಿ? ॥೬೪॥

ಎಲೌ ಪಾರ್ವತಿ, ಈ ರುದ್ರಮಂತ್ರವನ್ನು ಒಂದುಬಾರಿ ಆವೃತ್ತಿಮಾಡುವುದರಿಂದ ಸಕಲ ಪಾಪಗಳು ನಾಶವಾಗುವುವು. ಪರಶಿವಬುದ್ಧಿಯಿಂದಲೇ ಮೂರುಬಾರಿ ಜಪಿಸುವವನು ಗಣಾಧಿಪತಿಯಾಗಿ ನನ್ನ ಸಾನ್ನಿಧ್ಯವನ್ನೈದುವನು. ದೇವಿ! ಆರುಸಲ ಈ ರುದ್ರಮಂತ್ರಜಪಮಾಡುವ ಶಾಂಭವನು ಮುಕ್ತಿಯನ್ನು ಪಡೆದು ಆ ಮಹಾದೇವನೆನಿಸಿದ ನನ್ನ ಸಾರೂಪ್ಯವನ್ನೇ ಪಡೆಯುವನು. ॥೬೫॥

ರುದ್ರಾಕ್ಷಭಸ್ಮಗಳನ್ನು ಧರಿಸಿ, ಹೂವು ಮತ್ತು ಬಿಲ್ವದಳಗಳಿಂದ ಶಿವಲಿಂಗವನ್ನು ಶ್ರೀರುದ್ರನಾಮಪೂರ್ವಕವಾಗಿ ಪೂಜೆಮಾಡುವವನು ಮುಕ್ತನಾಗುತ್ತಾನೆ. ಒಂದುವೇಳೆ ಮುಕ್ತಿಪಥದಿಂದ ಚ್ಯುತನಾದರೂ ಆ ಬ್ರಾಹ್ಮಣನು ಗಣಾಧಿಪತಿಯಾಗುವನು. ॥೬೬॥

ತಸ್ಮಾದ್ಜ್ಞಾನತ ಏವ ಜಾನತ ಇಮೋ ಜಪ್ತ್ವಾ ವಿಮುಕ್ತೋ ಭವೇತ್
ಹುತ್ವಾನಾಪ್ಯಭಿಷಿಚ್ಯ ವಾ ದ್ವಿಜವರಸ್ತಸ್ಯಾಸ್ತಿ ತದ್ವೈ ಫಲಂ ।
ಛಂದೋ ದೈವತಸರ್ಷಿಕಂ ಮನುಗುಣಂ ಜಪ್ತ್ವಾ ಭವೇತ್ಪಾವನೋ
ನೈತದ್ವೇದ ಯದಿ ಶ್ರುತೀಶತಗತಂ ನಾಪ್ನೈತಿ ತತ್ಸರ್ವಥಾ ॥೬೭॥

ಇತಿ ಶ್ರೀಶಿವರಹಸ್ಯೇ ದಶಮಾಂಶೇ ರುದ್ರಾಭಿಷೇಕವಿಧಿವರ್ಣನೇ
ಅಷ್ಟಾವಿಂಶೋಽಧ್ಯಾಯಃ

---

ಲೋಕದಲ್ಲಿ ಜ್ಞಾನಿಗಳಾದ ಕೆಲವು ಜನಗಳು ಮಾತ್ರ ಇದರ ರಹಸ್ಯವನ್ನರಿತಿರುವರು. ಜಪ, ಹೋಮ, ಅಭಿಷೇಕಗಳಲ್ಲಿ ಯಾವುದೊಂದು ಮಾಡಿದರೂ ಅವನಿಗೆ ಅದರ ಪೂರ್ಣಫಲವು ಲಭಿಸುವುದು. ಛಂದಸ್ಸು, ದೇವತೆ, ಋಷಿಗಳೊಡಗೂಡಿದ ಈ ಮಂತ್ರಸಮೂಹವನ್ನು ಜಪಿಸಿ ಪವಿತ್ರನಾಗುವನು. ದೇವಿ! ಈ ನಮಕಮಂತ್ರವನ್ನು ತಿಳಿಯದವನು ನೂರಾರು ಶ್ರುತಿಗಳಲ್ಲಡಗಿರುವ ತತ್ವವನ್ನು ಎಂದಿಗೂ ತಿಳಿದು ಫಲಹೊಂದಲಾರನು, ಎಂದು ದೇವಿಗೆ ಶಿವನು ಹೇಳಿದುದನ್ನು ಕುಮಾರಸ್ವಾಮಿಯು ಜೈಗೀಷವ್ಯನಿಗೆ ನಿರೂಪಿಸಿದನು. ॥೬೭॥

ಇಲ್ಲಿಗೆ ಶ್ರೀಶಿವರಹಸ್ಯದ ಹತ್ತನೆಯ ಅಂಶದಲ್ಲಿ ರುದ್ರಾಭಿಷೇಕದ ವಿಧಿಯ
ವರ್ಣನೆಯಲ್ಲಿ ಇಪ್ಪತ್ತೆಂಟನೆಯ ಅಧ್ಯಾಯವು ಮುಗಿಯಿತು.

॥ ಶ್ರೀಃ ॥

॥ ಶ್ರೀ ಶಿವಾಯ ನಮಃ ॥

# ಅಥ ಶ್ರೀಶಿವರಹಸ್ಯೇ

## ಈಶಾನಾಖ್ಯೇ

### ದಶಮಾಂಶಪೂರ್ವಾರ್ಧೇ

## ಏಕೋನತ್ರಿಂಶೋಽಧ್ಯಾಯಃ

॥ ಶ್ರೀಸ್ಕಂದ ಉವಾಚ ॥

ಶತರುದ್ರಸ್ಯ ಮಾಹಾತ್ಮ್ಯಂ ಭೂಯೋ ವಕ್ಷ್ಯಾಮಿ ತೇ ಶೃಣು ।
ಕಥಿತಂ ಚ ಶ್ರುತಂ ಯೈಸ್ತು ತೇಷಾಂ ಪಾಪಂ ಪ್ರಣಶ್ಯತಿ ॥೧॥

ಸಾಕ್ಷಾತ್ತ್ರ್ಯಕ್ಷಪ್ರಿಯೇ ವೇದಮಧ್ಯಗಂ ಶತರುದ್ರಿಯಂ ।
ಶತರುದ್ರೀಯಮಾಹಾತ್ಮ್ಯಂ ಶಿವಪ್ರೋಕ್ತಂ ಸನಾತನಂ ॥೨॥

ನಿಷ್ಕೃತಿಂ ಸರ್ವಪಾಪಾನಾಂ ಯದಿ ಕರ್ತುಮಿಹೇಚ್ಛಸಿ ।
ಶತರುದ್ರೀಯಮಭ್ಯಸ್ಯ ಸರ್ವಪಾಪೈಃ ಪ್ರಮುಚ್ಯತೇ ॥೩॥

---

## ಇಪ್ಪತ್ತೊಂಬತ್ತನೆಯ ಅಧ್ಯಾಯ

ಅಯ್ಯ ಜೈಗೀಷವ್ಯನೇ, ಈ ಶತರುದ್ರಮಹಿಮೆಯನ್ನು ನಿನಗೆ ಪುನಃ ಹೇಳು ತ್ತೇನೆ ಕೇಳು, ನನ್ನಿಂದ ಹೇಳಲ್ಪಟ್ಟ ಈ ಮಂತ್ರಮಹಿಮೆಯನ್ನು ಹೇಳುವ ಮತ್ತು ಕೇಳುವ ಜನರ ಪಾಪಗಳು ಕ್ಷಣಕಾಲದಲ್ಲಿ ನಾಶವಾಗುವುವು. ಸಾಕ್ಷಾತ್ಪರಶಿವನು ತನ್ನ ಅರ್ಧಾಂಗಿಯಾದ ಪಾರ್ವತಿಗೆ ಹೇಳಿರುವ, ವೇದಮಧ್ಯದಲ್ಲಿ ಪ್ರಖ್ಯಾತವಾಗಿರುವ ಈ ಶತರುದ್ರೀಯಮಂತ್ರಮಹಿಮೆಯು ಅತಿ ಪವಿತ್ರವಾದುದು ಮತ್ತು ವರ್ಣನೀಯವಾದುದು. ॥೧-೨॥

ಜೈಗೀಷವ್ಯಮಹರ್ಷಿಯೇ ಕೇಳು, ಸಕಲ ಪಾಪಗಳ ಪರಿಹಾರವನ್ನೂ ಸುಲಭವಾಗಿ ಅಪೇಕ್ಷಿಸುವೆಯಾದರೆ, ಈ ಶತರುದ್ರೀಯಮಂತ್ರವನ್ನಭ್ಯಾಸಮಾಡಿ

ಬ್ರಹ್ಮಹತ್ಯಾ ಸುರಾಪಾನಂ ಸ್ತೇಯಂ ಗುರ್ವಂಗನಾಗಮಃ ।
ತತ್ಸಂಸರ್ಗ ಇತಿ ಪ್ರೋಕ್ತಂ ಮಹಾಪಾತಕಪಂಚಕಂ ॥೪॥

ಜ್ಞಾನಾಜ್ಞಾನಕೃತಂ ಪಾಪಂ ದ್ವಿವಿಧಂ ಪರಿಕೀರ್ತಿತಂ ।
ಬ್ರಹ್ಮಹತ್ಯಾಜ್ಞಾನಕೃತಾ ವಿಪ್ರಸ್ಯ ಯದಿ ಜಾಯತೇ ॥೫॥

ಭಸ್ಮಧೃಗ್ಭಸ್ಮಶಾಯೀ ಚ ತ್ರಿಪುಂಡ್ರಾಂಕೋಽನುತಾಪವಾನ್ ।
ರುದ್ರೈಕಾದಶಿನೀಂ ನಿತ್ಯಂ ಪ್ರಜಪನ್ವತ್ಸರತ್ರಯಂ ॥೬॥

ತದಂತೇ ದಕ್ಷಿಣಾಂ ದದ್ಯಾದ್ಗವಾಂ ಶತವೃಷಾನ್ವಿತಂ ।
ಗವಾಮಭಾವೇ ನಿಷ್ಕಂ ಸ್ಯಾತ್ತದರ್ಧಂ ಪಾದಮೇವ ವಾ ॥೭॥

ತದಭಾವೇ ಪುನರ್ಮಾಸತ್ರಿತಯಂ ಪ್ರಜಪೇಚ್ಛುಚಿಃ ।
ಬ್ರಹ್ಮಹತ್ಯಾವಿನಿರ್ಮುಕ್ತೋ ಭವತ್ಯೇವ ನ ಸಂಶಯಃ ॥೮॥

---

ಸಮಸ್ತದುರಿತಗಳಿಂದಲೂ ಬಿಡುಗಡೆ ಹೊಂದು; ಬ್ರಾಹ್ಮಣವಧೆ, ಮದ್ಯಪಾನ, ಕಳ್ಳತನ (ಸುವರ್ಣಸ್ತೇಯ) ಗುರುಪತ್ನೀ ಉಪಭೋಗ, ಅಲ್ಲದೇ ಈ ನಾಲ್ಕು ಮಹಾಪಾಪಿಗಳ ಸಂಸರ್ಗ, ಇವು ಐದು ಪಂಚಮಹಾಪಾತಕಗಳೆಂದು ಪರಿಗಣಿಸಲ್ಪಟ್ಟಿವೆ. ॥೩-೪॥

ಎಲ್ಲ ಪಾಪವು, ಜ್ಞಾನಪೂರ್ವಕವಾಗಿ ನಡೆಸಿದುದು, ಅಜ್ಞಾನದಿಂದ (ತಿಳಿಯದೆ) ಮಾಡಿದುದೆಂಬುದಾಗಿ ಎರಡು ಬಗೆಯಾಗಿರುವುದು. ಈ ಎರಡು ವಿಧಗಳಾದ ಪಾಪಗಳೂ ಶತರುದ್ರೀಯಪಠನದಿಂದ ಪರಿಹಾರವಾಗುತ್ತವೆ. ಇವರಲ್ಲಿ ಅಜ್ಞಾನದಿಂದ ಏನಾದರೂ ಬ್ರಾಹ್ಮಣವಧೆಯು ಆಕಸ್ಮಾತ್ತಾಗಿ ನಡೆದದ್ದಾದರೆ ಆಗ ಅದರ ಕರ್ತೃವು ಭಸ್ಮತ್ರಿಪುಂಡ್ರವನ್ನು ಧರಿಸಿ ಭಸ್ಮದ ಮೇಲೆ ಮಲಗುತ್ತಾ, ಭಸ್ಮೋದ್ಧೂಳಿತಗಾತ್ರನಾಗಿ, ಪಶ್ಚಾತ್ತಾಪ ಹೊಂದಿ ನಿತ್ಯವೂ ಏಕಾದಶವಾರ ಅಂದರೆ ಹನ್ನೊಂದು ಬಾರಿ ಶ್ರೀ ರುದ್ರಮಂತ್ರ ಜಪಮಾಡುತ್ತಾ ಮೂರುವರ್ಷಗಳ ಪರ್ಯಂತ ತಪ್ಪದೆ ಆಚರಿಸಬೇಕು. ಮೂರು ವರ್ಷ ಮುಗಿದನಂತರ ವೃಷಭ (ಗೂಳಿ) ಯುಕ್ತವಾದ ನೂರು ಹಸುಗಳನ್ನು ಸತ್ಪಾತ್ರರಿಗೆ ದಕ್ಷಿಣೆಯಾಗಿ ಕೊಡಬೇಕು. ಹಸುಗಳಿಲ್ಲದಿದ್ದರೆ ಅದೇ ನೂರು ಸಂಖ್ಯೆಯ ನಿಷ್ಕವನ್ನು (ಸುವರ್ಣ ನಾಣ್ಯವನ್ನು) ದಾನಮಾಡಬೇಕು. ಅದೂ ಸಾಧ್ಯವಿಲ್ಲದಿದ್ದಲ್ಲಿ ಅದರರ್ಧವಾದ ಐವತ್ತು (೫೦) ಅಥವಾ ಅದರರ್ಧ ಇಪ್ಪತ್ತೈದು (೨೫) ಅದೂ ಸಾಧ್ಯವಾಗದಿದ್ದಲ್ಲಿ ಪುನಃ ಮೂರುತಿಂಗಳು ಶುಚೀ

ಶ್ರೋತ್ರಿಯಂ ಚ ದ್ವಿಜಂ ಹತ್ವಾ ಜ್ಞಾನಪೂರ್ವಂ ದ್ವಿಜೋತ್ತಮ ।
ಪ್ರಾಜಾಪತ್ಯತ್ರಯಂ ಪೂರ್ವಂ ಶರೀರಸ್ಯ ವಿಶುದ್ಧಯೇ ॥೯॥

ಕೃತ್ವಾ ಶರೀರಸಂಶುದ್ಧಿಂ ಕೃತ್ವಾ ಚಾಂದ್ರಾಯಣಂ ತತಃ ।
ಮಹಾನ್ಯಾಸವಿಧಿಂ ಕೃತ್ವಾ ರುದ್ರೇಣೈವ ಸಮಾಹಿತಃ ॥೧೦॥

ಸಂಪೂಜ್ಯ ಸ್ಥಾವರೇ ಲಿಂಗೇ ಜಂಗಮೇ ವಾ ಸಮಾಹಿತಃ ।
ರುದ್ರೈಕಾದಶಿನೀಂ ನಿತ್ಯಂ ನಿಯಮೇನ ಸಮಭ್ಯಸೇತ್ ॥೧೧॥

ವರ್ಷಷಟ್ಕಮಧಃಶಾಯೀ ಫಲಮೂಲಾಶನೋ ಜಪನ್ ।
ತದಂತೇ ದಕ್ಷಿಣಾಂ ದದ್ಯಾದ್ಗವಾಂ ತ್ರಿಶತಮೇವ ವಾ ॥೧೨॥

---

ಭೂತನಾಗಿ ಈ ರುದ್ರೈಕಾದಶಮಂತ್ರವನ್ನು ಜಪಮಾಡಬೇಕು. ಹೀಗೆ ಮಾಡಿದರೆ ಅಜ್ಞಾನಕೃತವಾದ ಬ್ರಹ್ಮಹತ್ಯೆಯ ದೋಷದಿಂದ ಸಂದೇಹವೇ ಇಲ್ಲದೇ ಬಿಡುಗಡೆ ಹೊಂದುವನು. ॥೫-೬-೭-೮॥

ಅಯ್ಯ ವಿಪ್ರೋತ್ತಮನಾದ ಜೈಗೀಷವ್ಯನೆ, ಜ್ಞಾನಪೂರ್ವಕವಾಗಿ ಶ್ರೋತ್ರಿಯನಾದ ಬ್ರಾಹ್ಮಣನನ್ನು ಕೊಂದವನು, ಮೊದಲು ತನ್ನ ದೇಹಶುದ್ಧಿಗೋಸ್ಕರ ಮೂರು ಪ್ರಾಜಾಪತ್ಯ ಕೃಚ್ಛ್ರವನ್ನಾಚರಿಸಿ ತನ್ಮೂಲಕ ಶರೀರ ಶುದ್ಧಿಯನ್ನು ಪಡೆದು ಚಾಂದ್ರಾಯಣವ್ರತವನ್ನಾಚರಿಸಬೇಕು. ಅದಾದನಂತರ ಮಹಾನ್ಯಾಸವಿಧಿಪೂರ್ವಕವಾಗಿ ನಿಯಮದಿಂದ ಈ ಶತರುದ್ರೀಯ ರುದ್ರಮಂತ್ರವನ್ನು ಏಕಾದಶವಾರ ಜಪಿಸುತ್ತಾ ಸ್ಥಾವರ ಅಥವಾ ಜಂಗಮರೂಪವಾದ ಶಿವಲಿಂಗದಲ್ಲಿ ನೆಟ್ಟಮನಸ್ಸಿನಿಂದ ವಿಧಿವತ್ತಾಗಿ ಪೂಜೆಮಾಡಿ ಧ್ಯಾನಮಾಡುತ್ತಾ ನಿತ್ಯವೂ ನಿಯಮಬದ್ಧನಾಗಿರಬೇಕು. ॥೯-೧೦-೧೧॥

ಹೀಗೆ ಆರುವರ್ಷಗಳ ಕಾಲ ಶಿವಾರಾಧನೆಯನ್ನು ನಡೆಸುತ್ತಾ ನೆಲದ ಮೇಲೆ ಮಲಗುತ್ತಾ ಹಣ್ಣುಹಂಪಲು, ಗೆಡ್ಡೆಗೆಣಸುಗಳನ್ನು ತಿನ್ನುವವನಾಗಿ ಶತರುದ್ರೀಯ ಮಂತ್ರವನ್ನು ಜಪಮಾಡಬೇಕು. ಅನಂತರ ಈ ಮಂತ್ರಜಪಸಾದ್ಗುಣ್ಯಾರ್ಥವಾಗಿ ಮುನ್ನೂರನ್ನಾದರೂ (೩೦೦) ಹಸುಗಳನ್ನು ದಕ್ಷಿಣೆಯಾಗಿ ರುದ್ರಾಧ್ಯಾಯ ಪಾರಾಯಣ ನಿರತರಾದವರಿಗೆ ದಾನ ಕೊಡಬೇಕು. ಹೀಗೆ ಮಾಡಿದರೆ ಬ್ರಹ್ಮಹತ್ಯ ಮಾಡಿದ ಪಾಪಿಯು ಪರಿಶುದ್ಧ ಚಿತ್ತನಾಗಿ ಶಾಶ್ವತವಾದ ಪರಬ್ರಹ್ಮಪದವಿಯ

ಏವಂ ಕೃತೇ ವಿಶುದ್ಧಾತ್ಮಾ ಸ ಯಾತಿ ಬ್ರಹ್ಮ ಶಾಶ್ವತಂ ।
ದ್ವಿವಿಧಂ ಮದ್ಯಪಾನಂ ಸ್ಯಾದ್ಜ್ಞಾನಾಜ್ಞಾನಕೃತಂ ಭವೇತ್ ॥೧೩॥

ಅಜ್ಞಾನೋದ್ಭವಪಾಪಸ್ಯ ಮದ್ಯಪಾನಸ್ಯ ಕಥ್ಯತೇ ।
ಭೂತಿಭೂಷಿತಸರ್ವಾಂಗೋ ರುದ್ರಾಕ್ಷಾಭರಣಾನ್ವಿತಃ ॥೧೪॥

ರುದ್ರೈಕಾದಶಿನೀಂ ನಿತ್ಯಂ ವತ್ಸರಂ ಪ್ರಜಪೇದ್ದ್ವಿಜಃ ।
ತದಂತೇ ದಕ್ಷಿಣಾಂ ದದ್ಯಾದ್ಗವಾಮೇಕೋನವಿಂಶತಿಂ ॥೧೫॥

ವಿಮುಚ್ಯತೇಽಜ್ಞಾನಕೃತಾನ್ಮದ್ಯಪಾನಾನ್ನ ಸಂಶಯಃ ।
ಜ್ಞಾನೇನ ಕೃತಪಾಪಸ್ಯ ಸುರಾಪಾನಸ್ಯ ಕಥ್ಯತೇ ॥೧೬॥

---

ನ್ನೈದುವನು. ಅಂದರೆ ಪಾಪರಹಿತನಾಗಿ ಮುಕ್ತಿಯನ್ನು ಪಡೆಯಲು ಅರ್ಹನೆನಿಸುವನು. ||೧೨||

ಇದೇ ರೀತಿ ಪಂಚಮಹಾಪಾಪಗಳಲ್ಲಿ ಒಂದೆನಿಸಿದ ಮದ್ಯಪಾನವೂ ಕೂಡ ಜ್ಞಾನಕೃತ, ಅಜ್ಞಾನಕೃತಗಳೆಂದು ಎರಡು ಬಗೆಯಾಗಿರುವುದು. ಈಗ ಅಜ್ಞಾನದಿಂದುಂಟಾಗುವ ಮದ್ಯಪಾನರೂಪವಾದ ಮಹಾಪಾಪಕ್ಕೆ ಅತಿಸುಲಭವಾದ ಮತ್ತು ಶಾಸ್ತ್ರವಿಹಿತವಾದ ಪರಿಹಾರಕ್ರಮವನ್ನು ಹೇಳುತ್ತೇನೆ ಕೇಳು ; ಹಾಗೆ ಅಜ್ಞಾನದಿಂದ ಮದ್ಯಪಾಯಿಯಾದವನು ತನ್ನ ಸಕಲ ಅವಯವಗಳಿಗೂ ಭಸ್ಮಲೇಪನ ಮಾಡಿ ರುದ್ರಾಕ್ಷಾಭರಣವನ್ನಲಂಕರಿಸಿಕೊಂಡು ಬ್ರಾಹ್ಮಣನು ಒಂದು ವರ್ಷದ ವರೆಗೆ ನಿತ್ಯವೂ ಹನ್ನೊಂದು ಬಾರಿ, ವಿಧಿವತ್ತಾಗಿ ಶತರುದ್ರೀಯಮಂತ್ರವನ್ನು ಜಪಮಾಡಬೇಕು. ಅದು ಮುಗಿದ ಮೇಲೆ ಹತ್ತೊಂಬತ್ತು (೧೯) ಹಸುಗಳನ್ನು ಸತ್ಪಾತ್ರನಾದವನಿಗೆ ದಕ್ಷಿಣೆಯಾಗಿ ಕೊಡಬೇಕು. ಇದರಿಂದ ಅಜ್ಞಾನದಿಂದ ಮಾಡಲ್ಪಟ್ಟ ಮದ್ಯಪಾನ ಪಾಪದಿಂದ ಸಂದೇಹವೇ ಇಲ್ಲದೇ ಬಿಡುಗಡೆ ಹೊಂದುತ್ತಾನೆ. ಹೀಗೆ ಈ ಶತರುದ್ರೀಯಮಂತ್ರ ಜಪವು ಸಕಲ ಪಾಪಗಳನ್ನೂ ನಾಶಗೊಳಿಸಿ, ಮಾನವನು ಮುಕ್ತನಾಗುವಂತೆ ಮಾಡಬಲ್ಲುದು. ||೧೩-೧೪-೧೫||

ಮದ್ಯಪಾನವು ಮಹಾಪಾಪಕರವೆಂದು ತಿಳಿದೂ ಮದ್ಯಪಾನ ಮಾಡಿ, ಮಹಾಪಾಪಿಯಾದವನ ಪಾಪಕ್ಕೆ ಈಗ ಪ್ರಾಯಶ್ಚಿತ್ತವು ಹೇಳಲ್ಪಡುವುದು. ಬೆಲ್ಲ, ಜೇನು ಮತ್ತು ಹಿಟ್ಟು ಇವುಗಳ ಪರಿಪಾಕಾವಸ್ಥೆಯಿಂದ ಕ್ರಮವಾಗಿ ಮೂರು

ಗೌಡೀಮಾಧ್ವೀ ಚ ಪೈಷ್ಟೀ ಚ ವಿಜ್ಞೇಯಾ ತ್ರಿವಿಧಾ ಸುರಾ ।
ಅಸಾಮನ್ಯತಮಂ ಪೀತ್ವಾ ಸುರಾಪೀತೀತಿ ಕಥ್ಯತೇ ॥೧೭॥

ಭೂತಿಭೂಷಿತಸರ್ವಾಂಗೋ ತ್ರಿಪುಂಡ್ರಾಂಕೋ ಜಿತೇಂದ್ರಿಯಃ ।
ಪ್ರಾಜಾಪತ್ಯಂ ಚರೇತ್ಕೃಚ್ಛ್ರಂ ಕೃಚ್ಛ್ರಂ ಸಾಂತಪನಂ ತತಃ ॥೧೮॥

ರುದ್ರೈಕಾದಶಿನೀಂ ನಿತ್ಯಮೇಕಂ ಸಂವತ್ಸರಂ ಜಪೇತ್ ।
ತದಂತೇ ದಕ್ಷಿಣಾಂ ದದ್ಯಾಂ ಗವಾಮೇಕೋನವಿಂಶತಿಂ ॥೧೯॥

ಏಕಮಾಸಂ ದರಿದ್ರಶ್ಚೇದ್ರುದ್ರೈಕಾದಶಿನೀಂ ಜಪೇತ್ ।
ಸುರಾಪಾನಾದ್ವಿಜ್ಞಾನಕೃತಾನ್ಮುಚ್ಯತೇ ನಾತ್ರ ಸಂಶಯಃ ॥೨೦॥

ಸ್ವರ್ಣಸ್ತೇಯಂ ತು ದ್ವಿವಿಧಂ ಜ್ಞಾನಾಜ್ಞಾನಸಮುದ್ಭವಂ ।
ಭೂತಿಭೂಷಿತಸರ್ವಾಂಗೋ ರುದ್ರಾಕ್ಷಾಭರಣಃ ಶುಚಿಃ ॥೨೧॥

---

ವಿಧವಾದ ಮದ್ಯಗಳು ಉತ್ಪನ್ನವಾಗುವುವು. ಇವುಗಳಲ್ಲಿ ಯಾವುದೊಂದನ್ನು ಪಾನಮಾಡಿದರೂ, ಅವನು ಮದ್ಯಪಾಯಿಯೆಂದೇ ಹೇಳಲ್ಪಡುವನು. ಸಕಲ ಅವಯುವಗಳಿಗೂ ಭಸ್ಮಲೇಪನಮಾಡಿಕೊಂಡು ಭಸ್ಮತ್ರಿಪುಂಡ್ರಗಳನ್ನು ಧರಿಸಿ, ಜಿತೇಂದ್ರಿಯನಾಗಿ ಪ್ರಾಜಾಪತ್ಯ ಮತ್ತು ಸಾಂತಪನ ಕೃಚ್ಛ್ರಚಾಂದ್ರಾಯಣಗಳನ್ನು ನಿಯಮದಿಂದೆಸಗಬೇಕು. ಅನಂತರ ನಿತ್ಯವೂ ಹನ್ನೊಂದು ಬಾರಿ ರುದ್ರಮಂತ್ರವನ್ನು ಒಂದು ವರ್ಷದವರೆಗೂ ಬಿಡದೆ ಜಪಮಾಡುತ್ತಾ ಕೊನೆಯಲ್ಲಿ ಹತ್ತೊಂಬತ್ತು (೧೯) ಹಸುಗಳನ್ನು ದಾನಮಾಡಬೇಕು. ಹಾಗೆ ದಾನ ಕೊಡಲು ಅಶಕ್ತನಾದರೆ ಮತ್ತೆ ಒಂದು ತಿಂಗಳು ಕಾಲ ಏಕಾದಶವಾರ ರುದ್ರಮಂತ್ರ ಜಪಮಾಡಬೇಕು. ಹೀಗೆ ಮಾಡಿದರೆ ಜ್ಞಾನಪೂರ್ವಕವಾಗಿ ನಡೆಸಿದ್ದ ಸುರಾಪಾನದ ಪಾಪದಿಂದಲೂ ಬಿಡುಗಡೆ ಹೊಂದುವುದರಲ್ಲಿ ಸಂದೇಹವಿಲ್ಲ. ॥೧೬-೧೭-೧೮-೧೯-೨೦॥

ಸುವರ್ಣಸ್ತೇಯವೂ (ಚಿನ್ನ ಕದಿಯುವಿಕೆಯೂ) ಜ್ಞಾನಕೃತ, ಅಜ್ಞಾನ ಕೃತಗಳೆಂದೆರಡು ಬಗೆಯಾಗಿದೆ. ಅಜ್ಞಾನಕೃತವಾದ ಸ್ವರ್ಣಸ್ತೇಯದ ಪರಿಹಾರಕ್ಕೆ, ಸಕಲ ಅವಯುವಗಳಿಗೂ ಭಸ್ಮಲೇಪನ ಮಾಡಿಕೊಂಡು ರುದ್ರಾಕ್ಷಾಭರಣಯುಕ್ತನಾಗಿ ಶುಚಿಯಾಗಿದ್ದು ಆಹಾರ ಮತ್ತು ಇಂದ್ರಿಯಗಳನ್ನು ಜಯಿಸಿ, ಮೌನದಿಂದ ಏಕಾದಶ

ಜಿತಾಹಾರೇಂದ್ರಿಯೋ ಮೌನೀ ರುದ್ರೈಕಾದಶಿನೀಂ ಜಪೇತ್ ।
ತದಂತೇ ದಕ್ಷಿಣಾಂ ದದ್ಯಾದಷ್ಟವಿಂಶತಿಗಾಃ ಶುಭಾಃ ॥೨೨॥

ಸ್ತೇಯೇನಾಜ್ಞಾನಜನ್ಯೇನ ಮುಚ್ಯತೇ ನಾತ್ರ ಸಂಶಯಃ ।
ರುದ್ರಾಕ್ಷಮಾಲಾಭರಣೋ ಭೂತಿಭೂಷಿತದೇಹವಾನ್ ॥೨೩॥

ಪ್ರಾಜಾಪತ್ಯಂ ಚರೇತ್ಕೃಚ್ಛ್ರಂ ಬ್ರಹ್ಮಚಾರೀ ಜಿತೇಂದ್ರಿಯಃ ।
ಷಣ್ಮಾಸಂ ನಿಯತಾಹಾರೋ ರುದ್ರೈಕಾದಶಿನೀಂ ಜಪೇತ್ ॥೨೪॥

ತದಂತೇ ದಕ್ಷಿಣಾಂ ದದ್ಯಾದ್ದಶ ಗಾವಃ ಸವತ್ಸಕಾಃ ।
ಗವಾಮಭಾವೇ ನಿಷ್ಕಂ ಸ್ಯಾತ್ತದರ್ಧಂ ಪಾದಮೇವ ವಾ ॥೨೫॥

ದರಿದ್ರಶ್ಚೇತ್ಪುನರ್ಮಾಸಂ ರುದ್ರೈಕಾದಶಿನೀಂ ಜಪೇತ್ ।
ಸ್ವರ್ಣಸ್ತೇಯಾದ್ಜ್ಞಾನಕೃತಾನ್ಮುಚ್ಯತೇ ನಾತ್ರ ಸಂಶಯಃ ॥೨೬॥

---

ವಾರ ರುದ್ರಮಂತ್ರವನ್ನು ಜಪಿಸಬೇಕು. ಕೊನೆಯಲ್ಲಿ ಮಂಗಳಕರವಾದ ಇಪ್ಪತ್ತೆಂಟು ಹಸುಗಳನ್ನು ದಕ್ಷಿಣೆಯನ್ನಾಗಿ ಕೊಡಬೇಕು. ಹೀಗೆ ಮಾಡಿದರೆ ಅಜ್ಞಾನದಿಂದ ಮಾಡಿದ ಸ್ವರ್ಣಸ್ತೇಯಪಾಪದಿಂದ ಸಂದೇಹವಿಲ್ಲದೆ ಮುಕ್ತನಾಗುವನು.॥೨೧-೨೨॥

ಶರೀರಕ್ಕೆ ರುದ್ರಾಕ್ಷಮಾಲೆ, ವಿಭೂತಿಗಳನ್ನಲಂಕರಿಸಿಕೊಂಡು ಪ್ರಾಜಾಪತ್ಯ ರೂಪವಾದ ಕೃಚ್ಛ್ರಗಳನ್ನು ನಡೆಸಿ, ಬ್ರಹ್ಮಚರ್ಯದಲ್ಲಿದ್ದು ಜಿತೇಂದ್ರಿಯನಾಗಿ ಆರು ತಿಂಗಳ ಕಾಲ ನಿಯತವಾದ ಆಹಾರವನ್ನು ಸೇವಿಸುತ್ತಾ, ನಿತ್ಯವೂ ರುದ್ರೈಕಾದಶಿನಿಯನ್ನು ಜಪಮಾಡಬೇಕು. ಅದು ಮುಗಿದಮೇಲೆ ಕರುಗಳೊಡಗೂಡಿದ ಹತ್ತು ಹಸುಗಳನ್ನು ದಕ್ಷಿಣೆಯನ್ನಾಗಿ ದಾನಮಾಡಬೇಕು. ಹಸುಗಳಿಲ್ಲದಿದ್ದರೆ ಅದೇ ಸಂಖ್ಯೆಯ ಸುವರ್ಣನಾಣ್ಯಗಳನ್ನಾದರೂ, ಅಷ್ಟಕ್ಕೂ ಅಸಮರ್ಥನಾದರೆ ಅದರರ್ಧ ಅಥವ ಕಾಲುಭಾಗವಾಗಲೀ ನಿಷ್ಕಗಳನ್ನು ದಾನಮಾಡಬೇಕು. ಅಷ್ಟು ಮಾಡಲೂ ಬಡವನಾದರೆ ಪುನಃ ಒಂದು ತಿಂಗಳು ಏಕಾದಶವಾರ ರುದ್ರಮಂತ್ರವನ್ನು ಜಪ ಮಾಡಬೇಕು. ಹೀಗೆ ಮಾಡಿದರೆ ಜ್ಞಾನಪೂರ್ವಕವಾಗಿ ಮಾಡಿದ ಸುವರ್ಣಚೌರ್ಯ ರೂಪವಾದ ಮಹಾಪಾತಕದಿಂದ ಸಂದೇಹವೇ ಇಲ್ಲದೇ ಮುಕ್ತನಾಗುತ್ತಾನೆ.॥೨೩-೨೪ ೨೫-೨೬॥

ಗುರುಪತ್ನೀಗಮನಜಂ ಜ್ಞಾನಾಜ್ಞಾನಕೃತಂ ದ್ವಿಧಾ ।
ಕಂಠದಘ್ನೇ ಜಲೇ ಸ್ಥಿತ್ವಾ ಷಣ್ಮಾಸಂ ನಿಯತೇಂದ್ರಿಯಃ ॥೨೭॥

ರುದ್ರೈಕಾದಶಿನೀಂ ನಿತ್ಯಂ ಪ್ರಜಪೇದಾತ್ಮಶುದ್ಧಯೇ ।
ತದಂತೇ ದಕ್ಷಿಣಾ ದೇಯಾ ದಶ ಗಾವಃ ಸವತ್ಸಕಾಃ ॥೨೮॥

ಗುರುಸ್ತ್ರೀಗಮನಾತ್ಪಾಪಾತ್ಕೃತಾನ್ಮುಕ್ತೋ ಭವೇದ್ಧ್ರುವಂ ।
ತತ್ಸಂಸರ್ಗಾಭಿಧಂ ಪಾಪಂ ದ್ವಿವಿಧಂ ಪರಿಕೀರ್ತಿತಂ ॥೨೯॥

ನಿತ್ಯಂ ತ್ರಿಷವಣಸ್ನಾಯೀ ಮಾಸಮೇಕಮತಂದ್ರಿತಃ ।
ಭಸ್ಮರುದ್ರಾಕ್ಷಭೂಷಾಢ್ಯಸ್ತ್ರಿಪುಂಡ್ರಪರಿಶೋಭಿತಃ ॥೩೦॥

ರುದ್ರೈಕಾದಶಿನೀಂ ನಿತ್ಯಂ ಪ್ರಜಪೇದ್ಭೂತಿಭೂಷಿತಃ ।
ಮಾಸತ್ರಯೇಣ ಸಂಸರ್ಗಾದ್ದ್ವಿವಿಧಾದಪಿ ಮುಚ್ಯತೇ ॥೩೧॥

---

ಅಯ್ಯ ಜೈಗೀಷವ್ಯನೆ, ಹೀಗೆಯೇ ಗುರುಪತ್ನೀಸಮಾಗಮರೂಪವಾದ ಪಾಪವೂ ಜ್ಞಾನಕೃತ, ಅಜ್ಞಾನಕೃತಗಳೆಂದು ಎರಡುವಿಧವಾಗಿದೆ. ಆರುತಿಂಗಳ ಕಾಲ ಕತ್ತಿನುದ್ದ ನೀರಿನಲ್ಲಿ ನಿಂತು ಜಿತೇಂದ್ರಿಯನಾಗಿ ಆತ್ಮಶುದ್ಧಿಗೋಸ್ಕರ ನಿತ್ಯವೂ ಏಕಾದಶಬಾರಿ ರುದ್ರಮಂತ್ರಜಪಮಾಡಬೇಕು. ಅದು ಮುಗಿದ ಅನಂತರ ಕೊನೆಯಲ್ಲಿ ಕರುಗಳೊಡಗೂಡಿದ ಹತ್ತು ಹಸುಗಳನ್ನು ದಕ್ಷಿಣೆಯನ್ನಾಗಿ ಕೊಡಬೇಕು. ಹೀಗೆ ಆಚರಿಸುವುದರಿಂದ ಗುರುಪತ್ನೀಸಮಾಗಮರೂಪವಾದ ಪಾಪದಿಂದ ಸಂದೇಹವಿಲ್ಲದೇ ಆತನು ಬಿಡುಗಡೆ ಹೊಂದುವನು. ॥೨೭-೨೮॥

ಬ್ರಹ್ಮಹತ್ಯೆ, ಸುರಾಪಾನ, ಸುವರ್ಣಚೌರ್ಯ ಮತ್ತು ಗುರುಪತ್ನೀಸಮಾಗಮ ಗಳೆಂಬ ನಾಲ್ಕು ಮಹಾಪಾಪಮಾಡಿದವರ ಸಂಸರ್ಗರೂಪವಾದ ಬೇರೊಂದು ಮಹಾ ಪಾಪವೂ ಜ್ಞಾನಕೃತ, ಅಜ್ಞಾನಕೃತವೆಂದು ಎರಡು ಬಗೆಯಾಗಿದೆ. ಒಂದು ತಿಂಗಳ ಕಾಲ ನಿತ್ಯವೂ ಪ್ರಾತಃ, ಮಧ್ಯಾಹ್ನ ಮತ್ತು ಸಾಯಂಕಾಲರೂಪವಾದ ಮೂರು ಸವನ ಕಾಲಗಳಲ್ಲಿಯೂ ಸ್ನಾನಮಾಡಿ, ಆಲಸ್ಯವಿಲ್ಲದೆ, ಭಸ್ಮ, ರುದ್ರಾಕ್ಷಮಾಲಾಲಂಕೃತ ನಾಗಿ, ಹಣೆಯಲ್ಲಿ ತ್ರಿಪುಂಡ್ರಧಾರಣೆಮಾಡಿಕೊಂಡು, ನಿತ್ಯವೂ ಏಕಾದಶವಾರ ಶತ ರುದ್ರೀಯ ಮಂತ್ರವನ್ನು ಜಪಿಸಬೇಕು. ಹೀಗೆ ಮೂರು ತಿಂಗಳು ಮಾಡುವುದರಿಂದ ಎರಡುವಿಧವಾದ ಸಂಸರ್ಗಜನ್ಯ ಮಹಾಪಾಪಗಳಿಂದಲೂ ಆತನು ಮುಕ್ತನಾಗು ತ್ತಾನೆ. ॥೨೯-೩೦-೩೧॥

ಆದ್ರ್ರಾಣಾಮಪ್ಯನಾದ್ರ್ರಾಣಾಂ ಪಾಪಾನಾಂ ನಿಷ್ಕೃತಿರ್ವರಾ ।
ಪಾಪಾನಾಮುಪಪಾಪಾನಾಂ ಸೂಕ್ಷ್ಮಾಣಾಂ ಮಹತಾಮಪಿ ॥೩೨॥

ಅಸತ್ಯಸ್ತೇಯಿ ಮಿತ್ರಧ್ರುಗ್ಗೋಘ್ನಶ್ಚೈವ ಕೃತಘ್ನಕಃ ।
ಪರಾನ್ನಾದಃ ಶೂದ್ರಗಾಮೀ ಸೂತ್ರಜ್ಞಾನಪರೋ ಮುನೇ ॥೩೩॥

ಗಣಿಕೋ ಗಣಿಕಾಜೀವೀ ವೈದ್ಯವಿದ್ಯಾವಿಚಕ್ಷಣಃ ।
ಪರಾನ್ನಾದೋ ಗಣಾನ್ನಾದೋ ವಾರ್ಧುಕೋ ಹಲಜೀವಕಃ ॥೩೪॥

ಭಾರ್ಯಾತ್ಯಾಗೀ ಸುತತ್ಯಾಗೀ ಪಂಕ್ತಿಭೇದಕರೋ ನರಃ ।
ಅಗ್ನಿತ್ಯಾಗೀ ದುರಾನ್ನಾದೀ ಸರ್ವಜೀವೋಪಘಾತಕಃ ॥೩೫॥

ತಟಾಕಾರಾಮಭೇತ್ತಾ ಚ ದೇವಾನಾಂ ನಿಂದಕಸ್ತಥಾ ।
ವೈಶ್ವದೇವಶ್ರಾದ್ಧಹೀನಸ್ತಥಾ ತಿಥಿವಿವರ್ಜಿತಃ ॥೩೬॥

---

ಹೊಸದು, ಹಳೆಯದು; ಮಹಾಪಾಪ, ಉಪಪಾಪಗಳು; ಚಿಕ್ಕದು ಅಥವ ದೊಡ್ಡದು ಇಂತಹ ಯಾವವಿಧವಾದ ಪಾಪವೇ ಆಗಲೀ ಅವುಗಳನ್ನು ನಿವಾರಣೆಮಾಡಿ ಕೊಳ್ಳುವುದು ಒಳ್ಳೆಯದು. ಅಯ್ಯ ಜೈಗೀಷವ್ಯಮುನಿಯೇ, ಸತ್ಯವನ್ನಾಡದಿರುವುದು, ಕಳ್ಳತನ, ಮಿತ್ರದ್ರೋಹ, ಪಶುಹತ್ಯ, ಉಪಕಾರಸ್ಮರಣೆಯಿಲ್ಲದವನು, ಪರಾನ್ನವನ್ನು ಊಟಮಾಡುವವನು, ಶೂದ್ರಸ್ತ್ರೀ ಸಂಭೋಗಮಾಡುವವನು, ಧರ್ಮಸಂಕೋಚ ಮಾಡಿ ಹೇಳುವವನು, ವೇಶ್ಯಾಸಕ್ತ, ವೇಶ್ಯೆಯರಿಂದ ಜೀವಿಸುವವನು, ವೈದ್ಯ ವಿದ್ಯೆಯಲ್ಲಿ ನಿರತನಾದವನು, ಪರಾನ್ನಭೋಜೀ, ಸಮೂಹಾನ್ನವನ್ನು ಸ್ವೀಕರಿಸು ವವನು, ಬಡ್ಡಿಯಿಂದ ಜೀವನಮಾಡುವವನು, ಕೃಷೀವಲ, (ನೇಗಿಲಿನಿಂದ ಬದುಕು ವವನು) ಹೆಂಡತಿ, ಮಕ್ಕಳನ್ನು ತ್ಯಾಗಮಾಡುವವನು, ಪಂಕ್ತಿಭೇದಮಾಡುವವನು, ಅಗ್ನಿತ್ಯಾಗಿ, ಅಂದರೆ ಅಗ್ನಿಕಾರ್ಯ ಔಪಾಸನಾದಿಗಳನ್ನು ಮಾಡದೇ ಬಿಡುವವನು, ದುಷ್ಟವಾದ ಅನ್ನವನ್ನು ಊಟಮಾಡುವವನು, ಸಕಲ ಪ್ರಾಣಿಗಳಿಗೂ ಹಿಂಸೆ ಯನ್ನುಂಟುಮಾಡುವವನು; ಇವರು ಪಾಪಿಗಳೆನಿಸುವರು. ॥೩೨-೩೩-೩೪-೩೫॥

ಕೆರೆ ಮತ್ತು ಉದ್ಯಾನಗಳನ್ನು ಒಡೆಸುವವನೂ, ದೇವರನ್ನು ನಿಂದಿಸು ವವನೂ, ವೈಶ್ವದೇವ ಮತ್ತು ಶ್ರಾದ್ಧಗಳನ್ನು ಬಿಟ್ಟವನೂ, ಹಾಗೆಯೇ ಅತಿಥಿ ಸತ್ಕಾರ ವರ್ಜಿತನೂ, ಯಾವಾಗಲೂ ಮತ್ತೊಬ್ಬರನ್ನು ದೂಷಿಸುತ್ತಿರುವವನೂ,

ನಿಂದಾಪರೋಽಭ್ಯಸೂಯೀ ಚ ಗುರುದೇವದ್ವಿಜನ್ಮನಾಂ ।
ರಾಜದ್ರೋಹೀ ಜನದ್ರೋಹೀ ಗರದೋಽಪಿ ಶುನಃ ಖಲಃ ॥೩೭॥

ರಸಾನಾಂ ಚ ತಿಲಾನಾಂ ಚ ವಿಕ್ರೇತಾ ಗೋಖರಾಶ್ವಯೋಃ ।
ನ್ಯಸ್ತಾಪಹಾರೀ ಕುಂಡಾಶೀ ವಿಧುರೋ ವೃಷಲೀಪತಿಃ ॥೩೮॥

ದೇವಬ್ರಹ್ಮಸ್ವಹಾರೀ ಯೋ ಅನೃಜುವಾಕ್ಛಠೋ ದ್ವಿಜಃ ।
ಭಸ್ಮರುದ್ರಾಕ್ಷನಿಂದಾಕೃದ್ಭೃತಕಾಧ್ಯಾಪಕಸ್ತಥಾ ॥೩೯॥

ಗ್ರಾಮಣೀಃ ಶೂದ್ರಹಾರೀ ಚ ಮಹಾದಾನಪ್ರತಿಗ್ರಹೀ ।
ಸರ್ವಹಾಜಂತುಹಾಭ್ರೂಣೋ ಗೋಣೀಜೀವೋಽತಿ ಕಾಮವಾನ್ ॥೪೦॥

ಪುಂಸಿ ಗೋಷು ಖರಕ್ರೀಡೋ ರೇತಪೋ ಕ್ರೋಧನೋಽಶುಚಿಃ ।
ತೀರ್ಥದೂಷಕರೋ ಮರ್ತ್ಯೋ ಗೃಹದಾಹರತಿರ್ನರಃ ॥೪೧॥

---

ಗುರುಗಳು, ದೇವರು ಮತ್ತು ಬ್ರಾಹ್ಮಣರಲ್ಲಿ ವಿಶೇಷವಾದ ಅಸೂಯೆಯುಳ್ಳವನು, ರಾಜನಿಗೆ ದ್ರೋಹವನ್ನು ಎಣಿಸುವವನು, ಜನರ ದ್ರವ್ಯಗಳನ್ನು ಅಪಹರಿಸುವವನು, ವಿಷಹಾಕುವವನು, ದುರ್ಜನನು, ನಾಯಿ, ಹಸು, ಕತ್ತೆ ಮತ್ತು ಕುದುರೆ ಇವುಗಳ ಹಾಲನ್ನೂ, ಎಳ್ಳನ್ನು ಮಾರುವವನೂ, ನಂಬಿಕೆಯಿಂದ ಅಡವಿಟ್ಟದ್ದನ್ನು ಅಪಹರಿಸುವವನೂ, ವ್ಯಭಿಚಾರದಿಂದ ಜನಿಸಿದವನ ಮನೆಯಲ್ಲಿ ಊಟಮಾಡುವವನೂ ಪತ್ನೀಹೀನನಾಗಿ ಶೂದ್ರಸ್ತ್ರೀಯನ್ನು ಮದುವೆಯಾಗುವವನೂ, ದೇವಬ್ರಾಹ್ಮಣರ ದ್ರವ್ಯವನ್ನಪಹರಿಸುವವನೂ, ಸರಳವಾದ ಮಾತಿಲ್ಲದೆ, ಸದಾ ವ್ಯಂಗ್ಯವಾಗಿ ನುಡಿಯುವವನೂ, ಹಠದಿಂದಲೇ ಯಾವಾಗಲೂ ಮಾತನಾಡುವವನೂ, ಪವಿತ್ರಗಳಾದ ಭಸ್ಮ, ರುದ್ರಾಕ್ಷಗಳನ್ನು ಸರ್ವದಾ ನಿಂದೆಮಾಡುವವನೂ, ವೇತನದಿಂದ ಅಂದರೆ ಸಂಬಳವನ್ನು ತೆಗೆದುಕೊಳ್ಳುವುದಕ್ಕಾಗಿ ಕೇವಲ ದ್ರವ್ಯಾಸೆಯಿಂದಲೇ ವೇದಾಧ್ಯಯನ ಮಾಡಿಸುವವನೂ, ಗ್ರಾಮಕ್ಕೆ ಮುಖ್ಯಸ್ಥನಾಗಿದ್ದು ಕೆಲಸಕಾರ್ಯಗಳನ್ನು ನಡೆಸುವವನೂ, ಶೂದ್ರರ ಅಂದರೆ ಶ್ರಮಜೀವಿಗಳ ದ್ರವ್ಯವನ್ನು ಅಪಹರಿಸುವವನೂ ಮಹಾದಾನಗಳನ್ನು ತೆಗೆದುಕೊಳ್ಳುವವನೂ, ಎಲ್ಲರನ್ನೂ ಕೊಲ್ಲುವ ಬುದ್ಧಿಯುಳ್ಳವನೂ, ಪ್ರಾಣಿ, ಭ್ರೂಣ, (ಗರ್ಭಸ್ಥಶಿಶು) ಇವುಗಳನ್ನು ಕೊಲ್ಲಲು ಪ್ರಯತ್ನಿಸುವವನೂ, ಗೇಣಿಯಿಂದ ಜೀವಿಸುವವನೂ, ವಿಶೇಷವಾದ ಕಾಮತೃಪ್ತಿಗಾಗಿ ದುಡಿಯುವವನೂ, ಗಂಡಸರು, ಹಸುಗಳು ಮತ್ತು ಕತ್ತೆಗಳಲ್ಲಿ ಸಂಭೋಗಸುಖವನ್ನು

ಏತೇ ಚಾನ್ಯೇ ಚ ಬಹವಃ ಸಂಕರಾಃ ಪಾಪವತ್ತರಾಃ ।
ಸಂಕಲೀಕರಣಾ ಯೇ ಚ ಮಲಿನೀಕರಣಾಸ್ತಥಾ ॥೪೨॥

ಜಾತಿಭ್ರಂಶಕರಾಶ್ಚೈವ ಅಪಾತ್ರೀಕರಣಾಸ್ತಥಾ ।
ಜಾಗ್ರತ್ಸ್ವಪ್ನಸುಷುಪ್ತೌ ಚ ಜನಿತಾನಾಂ ದ್ವಿಜೋತ್ತಮ ॥೪೩॥

ಬಾಲ್ಯಯೌವನಕೌಮಾರವಾರ್ಧಕೇಷೂದ್ಭವಾನ್ಯಪಿ ।
ಪಾಪಾನಿ ನಾಶಮಾಯಾಂತಿ ರುದ್ರೈಕಾದಶಿನೀಜಪಾತ್ ॥೪೪॥

ಪ್ರಾರಬ್ಧೈಃ ಸಂಚಿತೈಃ ಪಾಪೈರ್ಮುಚ್ಯತೇ ರುದ್ರಜಾಪಕಃ ।
ಭಸ್ಮಛನ್ನತ್ರಿಪುಂಡ್ರಾಂಕೋ ಮುಚ್ಯತೇ ಸರ್ವಪಾತಕೈಃ ॥೪೫॥

ಕೋಟಿಜನ್ಮಕೃತೈಃ ಪಾಪೈರ್ಮಹಾಪಾಪೋಪಪಾತಕೈಃ ।
ರುದ್ರಜಾಪೀ ವಿಮುಚ್ಯೇತ ಫಲಂ ವಿಂದೇತ ಸರ್ವದಾ ॥೪೬॥

---

ಅನುಭವಿಸುವವನೂ, ರೇತಸ್ಸನ್ನು ಪಾನಮಾಡುವವನೂ, ಸದಾ ಕೋಪಸ್ವಭಾವದವನೂ, ಶುಚಿಯಿಲ್ಲದವನೂ, ತೀರ್ಥಕ್ಷೇತ್ರಗಳನ್ನು ದೂಷಣೆಮಾಡುವ ಮಾನವನೂ, ಮನೆಗಳನ್ನು ಸುಡುವುದರಲ್ಲಿ ಆಸಕ್ತನಾದ ಮನುಜನೂ ಇಂತಹವರ ಜೊತೆಯಲ್ಲಿ ಸೇರುವ ಇತರ ಅನೇಕ ಸಂಕರರೂ ಕೂಡ ಪಾಪಿಗಳೆನಿಸುವರು. ॥೩೬-೩೭-೩೮-೩೯-೪೦-೪೧॥

ಅಯ್ಯ ಬ್ರಾಹ್ಮಣೋತ್ತಮನೆ, ಮತಧರ್ಮಗಳನ್ನು ದೂಷಿಸಿ ಎಲ್ಲರನ್ನೂ ಏಕೀಕರಣಗೊಳಿಸುವ ಸಮಾಜವಾದಿಗಳೂ, ಇತರ ಜಾತಿಧರ್ಮಗಳನ್ನು ಮಲಿನಗೊಳಿಸುವವರೂ, ಜಾತಿಭ್ರಷ್ಟತೆಯನ್ನುಂಟುಮಾಡುವವರೂ, ಪಾತ್ರಹೀನರೂ, ಜಾಗ್ರತ್, ಸ್ವಪ್ನ ಮತ್ತು ಸುಷುಪ್ತ್ಯವಸ್ಥೆಯಲ್ಲಿಯೂ ಅನೇಕ ಪಾಪಕರ್ಮಗಳನ್ನು ಸಂಪಾದಿಸಿದವರೂ, ಬಾಲ್ಯ, ಕೌಮಾರ, ಯೌವನ ಮತ್ತು ವಾರ್ಧಕಗಳಲ್ಲಿ ಉದ್ಭವವಾದ ಪಾಪಗಳನ್ನು ಪಡೆದಿರುವವರೂ ಸಹ ಈ ರುದ್ರೈಕಾದಶಿನೀಜಪದಿಂದ ಪವಿತ್ರರಾಗುವರು. ॥೪೨-೪೩-೪೪॥

ಈ ರುದ್ರಮಂತ್ರಜಪಮಾಡುವವನು ಪ್ರಾರಬ್ಧ ಮತ್ತು ಸಂಚಿತರೂಪವಾದ ಪಾಪಗಳಿಂದ ಮುಕ್ತನಾಗುತ್ತಾನೆ. ಪ್ರಾರಬ್ಧವೆಂದರೆ ಹಿಂದಿನ ಜನ್ಮದಲ್ಲಿ ಅಕಾರ್ಯಗಳನ್ನಾಚರಿಸಿ, ಅಧರ್ಮಕ್ರಿಯೆಗಳನ್ನು ಅನುಷ್ಠಾನಗೊಳಿಸಿ ಸಂಪಾದಿಸಿದ ಪಾಪರಾಶಿ.

ರಾಜಸೂಯಾಶ್ವಮೇಧಾಭ್ಯಾಮಗ್ನಿಷ್ಟೋಮಾಯುತಸ್ಯ ಚ ।
ಅವಾಪ್ಯ ಚ ಫಲಂ ಕೃತ್ಸ್ನಂ ಶಿವೇ ಲೀನೋ ಭವಿಷ್ಯತಿ ॥೪೭॥

॥ ಸ್ಕಂದ ಉವಾಚ ॥

ಬ್ರಹ್ಮಘ್ನಶ್ಚ ಕೃತಘ್ನತಸ್ಕರವರೋ ಗೋಘ್ನಃ ಶಿಶುಘ್ನೋ ಮುನೇ
ಬ್ರಹ್ಮಘ್ನಃ ಶಿವಮೀಕ್ಷ್ಯ ರುದ್ರಜಪಕೃತ್ಪಾಪೈಶ್ಚ ಮುಕ್ತೋ ಭವೇತ್ ।
ಸ್ನಾತ್ವಾ ಗಾಂಗಜಲೈರ್ಭಗಘ್ನಪದಹೃತ್ತತ್ಕಂಠದಘ್ನಸ್ಥಿತೋ
ಭಸ್ಮಾಕ್ಷಾದಿವಿದಗ್ಧಸರ್ವತನುಭಾಕ್ಸಂದಗ್ಧಪಾಪೋ ಭವೇತ್ ॥೪೮॥

---

ಸಂಚಿತವೆಂದರೆ, ಹಿಂದಿನ ಅನೇಕ ಜನ್ಮಗಳಿಂದಲೂ ಅನುಭವಿಸದೆ, ಉಳಿದು ಇಂದಿನ ಜನ್ಮಗಳಲ್ಲಿ ಭೋಗಕ್ಕೆ ಅರ್ಹವಾಗಿರುವ ಪಾಪರಾಶಿ ಎಂದರ್ಥ. ಭಸ್ಮಲೇಪನ ಭಸ್ಮತ್ರಿಪುಂಡ್ರಗಳನ್ನು ಧರಿಸಿದವನು ಇಂತಹ ಸಕಲ ಪಾಪಗಳಿಂದಲೂ ಬಿಡುಗಡೆ ಹೊಂದುತ್ತಾನೆ. ರುದ್ರಜಪಮಾಡುವವನು ಕೋಟ್ಯಂತರ ಜನ್ಮಗಳಲ್ಲಿ ಮಾಡಿದ ಮಹಾಪಾತಕ ಮತ್ತು ಉಪಪಾತಕರೂಪವಾದ ಸಕಲ ಪಾಪಗಳಿಂದಲೂ ಮುಕ್ತನಾಗಿ ಉತ್ತಮವಾದ ಫಲವನ್ನು ಪಡೆಯುವನು. ರಾಜಸೂಯ ಮತ್ತು ಅಶ್ವಮೇಧ ಯಾಗಗಳಿಂದಲೂ, ಹತ್ತುಸಾವಿರ ಅಗ್ನಿಷ್ಟೋಮಯಾಗಾದಿಗಳಿಂದಲೂ ಬರುವ ಸಮಸ್ತ ಫಲವನ್ನೂ ಪಡೆದು ಕೊನೆಗೆ ಆ ಪರಶಿವನಲ್ಲಿ ಐಕ್ಯವಾಗುವನು, ಇದರಲ್ಲಿ ಸಂಶಯವಿಲ್ಲ. ॥೪೫-೪೬-೪೭॥

ಅಯ್ಯ ಮುನಿಯೇ! ಬ್ರಹ್ಮಹತ್ಯೆಮಾಡಿದವನು, ಕೃತಘ್ನನೂ (ಉಪಕಾರಸ್ಮರಣೆಯಿಲ್ಲದವನೂ) ಚೋರಾಗ್ರೇಸರನೂ, ಗೋಹತ್ಯೆಯನ್ನೆಸಗಿದವನೂ, ಏನೂ ಅರಿಯದ ಮಕ್ಕಳನ್ನು ಕೊಂದವನೂ, ಶಿವನನ್ನು ದರ್ಶನಮಾಡಿ ಹಿಂದೆ ಹೇಳಿದಂತೆ ರುದ್ರಜಪಮಾಡುವನಾದರೆ ಅವನು ಸಕಲಪಾಪಗಳಿಂದಲೂ ಮುಕ್ತನಾಗುವನು. ಗಂಗಾನದಿಯ ನೀರಿನಲ್ಲಿ ಸ್ನಾನಮಾಡಿ ತಾನು ಮಾಡಿದ ಮಹಾಪಾಪನಿವೃತ್ತಿಗಾಗಿ ಶ್ರೀರುದ್ರಮಂತ್ರಗಳನ್ನು ಜಪಿಸುತ್ತಾ ಕತ್ತಿನವರೆಗೆ ನೀರು ಬರುವಂತಹ ಗಂಗಾನದಿಯ ಮಧ್ಯದಲ್ಲಿ ನಿಂತು, ಅನಂತರ ಭಸ್ಮರುದ್ರಾಕ್ಷಾದಿಗಳಿಂದ ಅಲಂಕೃತವಾದ ಸಕಲ ದೇಹವುಳ್ಳವನಾದರೆ ಅವನು ಮೇಲೆ ಹೇಳಿದ ಸಕಲ ಪಾಪಗಳಿಂದಲೂ ಬಿಡುಗಡೆ ಹೊಂದುವನು. ॥೪೮॥

ಪುಣ್ಯಾವಿಮುಕ್ತಸದನೇ ಮದನಾಂತಕಸ್ಯ
ಭಕ್ತ್ಯೈವ ರುದ್ರಜಪಕೃತ್ಸಕಲಾಘಮುಕ್ತಃ ।
ತದ್ಭೈರವೋರುವದನಂ ಭ್ರುಕುಟೀಕರಾಲ
ಮುದ್ಯಚ್ಛಶಾಂಕರದನೈಃ ಸದನಂ ನ ಗಚ್ಛೇತ್ ॥೪೯॥

ಇತಿ ಶ್ರೀಶಿವರಹಸ್ಯೇ ದಶಮಾಂಶೇ ಪಂಚಮಹಾಪಾತಕೋಪಪಾತಕಾದಿ ರುದ್ರಪ್ರಾಯಶ್ಚಿತ್ತಮಹಿಮಾವರ್ಣನಂ ನಾಮೈಕೋನತ್ರಿಂಶೋಽಧ್ಯಾಯಃ

---

ಅಯ್ಯ ಜೈಗೀಷವ್ಯನೆ! ಪುಣ್ಯಕರವಾದ ಅವಿಮುಕ್ತಕ್ಷೇತ್ರದಲ್ಲಿ ಮನ್ಮಥಾಂತಕನಾದ ಮಹೇಶ್ವರನಲ್ಲಿ ಭಕ್ತಿಯಿಟ್ಟು ರುದ್ರಜಪಮಾಡುವವನು ಸಕಲಪಾಪಗಳಿಂದಲೂ ಮುಕ್ತನಾಗುವನು. ಮತ್ತು ಹುಬ್ಬುಗಂಟಿನಿಂದ ತೀಕ್ಷ್ಣವಾಗಿ ಭಯಂಕರವೆನಿಸಿದ ಯಮನ ದೊಡ್ಡ ಮುಖವನ್ನು ನೋಡಿ, ಉದಯಚಂದ್ರನಂತಿರುವ ಕೋರೆಹಲ್ಲುಗಳಿಂದ ಕಂಗೊಳಿಸುವ ಅವನ ಉಗ್ರವದನಕ್ಕೆ ಹೆದರದೆ, ಧೈರ್ಯವಾಗಿ ನಿಂತು, ಯಮಲೋಕವನ್ನು ತಿರಸ್ಕರಿಸಿ ಶಿವಲೋಕವನ್ನು ಸೇರುವನು, ಎಂದು ಜೈಗೀಷವ್ಯನಿಗೆ ಸ್ಕಂದಸ್ವಾಮಿಯು ಶ್ರೀ ರುದ್ರಮಂತ್ರಮಹಿಮೆಯನ್ನು ಹೇಳಿದನು. ॥೪೯॥

ಇಲ್ಲಿಗೆ ಶ್ರೀಶಿವರಹಸ್ಯದಲ್ಲಿ ಹತ್ತನೆಯ ಅಂಶದಲ್ಲಿ ಪಂಚಮಹಾಪಾತಕ ಮತ್ತು ಉಪಪಾತಕಗಳೇ ಮೊದಲಾದುವಕ್ಕೆ ರುದ್ರಮಂತ್ರಕೃತವಾದ ಪ್ರಾಯಶ್ಚಿತ್ತ ಪ್ರಭಾವವರ್ಣನೆಯೆಂಬ ಇಪ್ಪತ್ತೊಂಬತ್ತನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ಶ್ರೀ ಶಿವಾಯನಮಃ ॥

# ಅಥ ಶ್ರೀಶಿವರಹಸ್ಯೇ

## ಈಶಾನಾಖ್ಯೇ

## ದಶಮಾಂಶಪೂರ್ವಾರ್ಧೇ

## ತ್ರಿಂಶೋಽಧ್ಯಾಯಃ

॥ ಸ್ಕಂದ ಉವಾಚ ॥

ಅಥ ಕಾಮ್ಯಾನಿ ಕರ್ಮಾಣಿ ವಕ್ಷ್ಯಾಮಿ ಮುನಿಪುಂಗವ ।
ಸ್ನಾತ್ವಾ ಶುಕ್ಲಾಂಬರಧರಃ ಸಮಾಹಿತಮನಾಃ ಶುಚಿಃ ॥೧॥

ಭೂತಿಭೂಷಿತಸರ್ವಾಂಗೋ ರುದ್ರಾಕ್ಷಾಭರಣಾನ್ವಿತಃ ।
ಗಾಯತ್ರೀಂ ಪ್ರಜಪೇನ್ನಿತ್ಯಂ ಅಷ್ಟೋತ್ತರಸಹಸ್ರಕಂ ॥೨॥

ನಿತ್ಯಾಗ್ನಿಹೋತ್ರಂ ಕೃತ್ವಾಥ ಬ್ರಹ್ಮಯಜ್ಞಮತಃ ಪರಃ ।
ಸಂತರ್ಪ್ಯ ಪಿತೃದೇವರ್ಷೀನ್ದ್ವಿಜಾನ್ ತ್ರೈವರ್ಣಿಕಾ ಅಪಿ ॥೩॥

---

## ಮೂವತ್ತನೆಯ ಅಧ್ಯಾಯ

ಜೈಗೀಷವ್ಯಮುನಿವರ್ಯನೇ ಕೇಳು. ಇನ್ನು ಕಾಮ್ಯಕರ್ಮಗಳನ್ನೂ ಅವುಗಳ ಸ್ವರೂಪವನ್ನೂ ಹೇಳುವೆನು ; ಲಾಲಿಸು : ಕಾಮ್ಯಕರ್ಮವೆಂದರೆ, ತಮ್ಮ ಇಷ್ಟಾರ್ಥ ಸಾಧನೆಗಾಗಿ ನಡೆಸುವ ಈಶ್ವರಾರಾಧನೆ ಎಂದರ್ಥ. ಕಾಮ್ಯಕರ್ಮವನ್ನಾಚರಿಸು ವವನು ಮೊದಲು ಸ್ನಾನಮಾಡಿ ಶುಭ್ರವಾದ ಬಟ್ಟೆಯುಟ್ಟು, ಸಮಾಧಾನ ಚಿತ್ತವುಳ್ಳವನಾಗಿ ಶುಚೀಭೂತನೆನಿಸಿ ಸರ್ವಾವಯವಗಳಲ್ಲಿಯೂ ಪವಿತ್ರವಾದ ವಿಭೂತಿಯನ್ನಲಂಕರಿಸಿಕೊಂಡು, ರುದ್ರಾಕ್ಷಮಾಲಾಭೂಷಿತನಾಗಿ ತಪ್ಪದೆ ನಿತ್ಯವೂ ಸಾವಿರದೆಂಟುಬಾರಿ ಗಾಯತ್ರೀ ಮಂತ್ರಗಳನ್ನು ಜಪಮಾಡಬೇಕು. ॥೧-೨॥

ಗೃಹಸ್ಥನ ನಿತ್ಯಕರ್ಮಗಳಲ್ಲಿ ಒಂದಾದ ಅಗ್ನಿಹೋತ್ರವನ್ನೆಸಗಿ ಅನಂತರ ಬ್ರಹ್ಮಯಜ್ಞಮಾಡಿ ಆಮೇಲೆ ದೇವ, ಋಷಿ ಮತ್ತು ಪಿತೃದೇವತೆಗಳನ್ನು ತೃಪ್ತಿ

ಸಂಪೂಜ್ಯ ವಿಧಿವಲ್ಲಿಂಗೇ ರುದ್ರೈಕಾದಶಿನೀಂ ಜಪೇತ್ ।
ಋಙ್ಮಂತ್ರಂ ಯಜುಷೋ ಮಂತ್ರಂ ಸಾಮಾನ್ಯಾಥರ್ವಣೋ ಗಣಂ॥೪॥

ತ್ರಿಂಶದ್ದಿನಾನಿ ಜಪ್ತ್ವಾತು ಶೀಘ್ರಂ ಶತ್ರೂನ್ವಿನಾಶಯೇತ್ ।
ಸಂಪೂಜ್ಯ ಸ್ಫಾಟಿಕೇ ಲಿಂಗೇ ಶುಭ್ರಪುಷ್ಪೈರ್ಮನೋರಮೈಃ ॥೫॥

ನೈವೇದ್ಯಂ ಪಾಯಸಂ ದತ್ವಾ ಕೃತ್ವಾ ನ್ಯಾಸಾದಿಕಂ ಶುಭಂ ।
ರುದ್ರೈಕಾದಶಿನೀಂ ಜಪ್ತ್ವಾ ಷಣ್ಮಾಸಂ ವಿಜಿತೇಂದ್ರಿಯಃ ॥೬॥

---

ಪಡಿಸುವ ವೈಶ್ವದೇವಾದಿ ಕರ್ಮಗಳನ್ನು ನೆರವೇರಿಸಿ, ವಿಧಿಪ್ರಕಾರ ಶಿವಲಿಂಗಾರ್ಚನೆ ಮಾಡಿ ರುದ್ರಮಂತ್ರವನ್ನು ಹನ್ನೊಂದು ಬಾರಿ ಜಪಿಸಬೇಕು. ಋಕ್, ಯಜುಸ್, ಸಾಮ ಮತ್ತು ಅಥರ್ವಣ ಮಂತ್ರಗಳನ್ನು ಮೂವತ್ತು ದಿನಗಳವರೆಗೆ ಜಪಮಾಡು ವವನು ಜಾಗ್ರತೆಯಾಗಿ ಶತ್ರುಗಳನ್ನು ನಾಶಪಡಿಸಿಕೊಳ್ಳುತ್ತಾನೆ. ಹೀಗೆ ದ್ವಿಜರೆನಿಸಿದ ಬ್ರಾಹ್ಮಣ, ಕ್ಷತ್ರಿಯ, ವೈಶ್ಯರೆಂಬ ಮೂರು ವರ್ಣದವರೂ ಆಚರಿಸಿ ತಮ್ಮ ಶತ್ರುನಿವಾರಣರೂಪವಾದ ಕಾಮ್ಯವನ್ನು ಅನಾಯಾಸವಾಗಿ ಪಡೆಯಬಹುದು. ಶತ್ರುಧ್ವಂಸಕ್ಕೆ ಉಕ್ತವಾಗಿರುವ ಕಾಮ್ಯಕರ್ಮಸ್ವರೂಪವೇ ಇದು. ॥೩-೪॥

ಸಂಪೂರ್ಣವಿದ್ಯೆಯನ್ನು ಅಪೇಕ್ಷಿಸುವ ಮಾನವನು ಸ್ಫಟಿಕಮಯವಾದ ಒಂದು ಶಿವಲಿಂಗವನ್ನು ಸಂಪಾದಿಸಬೇಕು. ಅದಕ್ಕೆ ಶುಭ್ರವೂ ಮನೋಹರವೂ ಆದ ಹೂಗಳನ್ನು ಸಮರ್ಪಿಸಿ ವಿಧಿವತ್ತಾಗಿ ಪೂಜೆಮಾಡಬೇಕು. ಪಾಯಸವನ್ನು ನೈವೇದ್ಯಮಾಡಿ ಪೂಜೆಯನ್ನು ಸಮಾಪ್ತಿಗೊಳಿಸಬೇಕು ಮಂಗಳಕರವಾದ ರುದ್ರ ನ್ಯಾಸಾದಿಗಳೊಡನೆ ಏಕಾದಶವಾರ ರುದ್ರಮಂತ್ರವನ್ನು ಜಿತೇಂದ್ರಿಯನಾಗಿ ಆರು ತಿಂಗಳಕಾಲ ಜಪಿಸಬೇಕು. (ಇಲ್ಲಿ ಶ್ರೀರುದ್ರನ್ಯಾಸವನ್ನು ವಾಚಕರ ಅನುಕೂಲ ಕ್ಕಾಗಿ ಕೊಡಲಾಗಿದೆ.)

ಅಸ್ಯ ರುದ್ರಸ್ಯ ಪ್ರಶ್ನಸ್ಯ । ಅಘೋರಋಷಿಃ । ಅನುಷ್ಟುಪ್ ಛಂದಃ । ಸಂಕರ್ಷಣಮೂರ್ತಿಸ್ವರೂಪೋ ಯೋಽಸಾವಾದಿತ್ಯಃ ಪರಮಪುರುಷಸ್ಸ ಏಷ ರುದ್ರೋ ದೇವತಾ । ಅಗ್ನಿಕ್ರತುಚರಮಾಯಾಮಿಷ್ಟಕಾಯಾಗ್ಂ ಶತರುದ್ರಿಯೇ ಜಪಾಭಿಷೇಕೇ ವಿನಿಯೋಗಃ ॥ ಸಕಲಸ್ಯರುದ್ರಾಧ್ಯಾಯಸ್ಯ ಶ್ರೀರುದ್ರೋ ದೇವತಾ । ಏಕಾಗಾಯತ್ರೀ ಛಂದಃ । ತಿಸ್ರೋಽನುಷ್ಟುಭಸ್ತಿಸ್ರಃ ಪಂಕ್ತಯಸ್ಸಪ್ತಾನುಷ್ಟುಭೋದ್ವೇ ಜಗತ್ಯೌ ।

ಪರಮೇಷ್ಠೀ ಋಷಿಃ । ಶ್ರೀಸಾಂಬಸದಾಶಿವೋ ದೇವತಾ ಶ್ರೀ ಭವಾನೀಶಂಕರ-
ಪ್ರೀತ್ಯರ್ಥೇ ಜಪೇ ವಿನಿಯೋಗಃ ॥

ಅಗ್ನಿಹೋತ್ರಾತ್ಮನೇ-ಅಂಗುಷ್ಠಾಭ್ಯಾಂ ನಮಃ ।
ದರ್ಶಪೂರ್ಣಮಾಸಾತ್ಮನೇ-ತರ್ಜನೀಭ್ಯಾಂ ನಮಃ ।
ಚಾತುರ್ಮಾಸ್ಯಾತ್ಮನೇ-ಮಧ್ಯಮಾಭ್ಯಾಂ ನಮಃ ।
ನಿರೂಢಪಶುಬಂಧಾತ್ಮನೇ-ಅನಾಮಿಕಾಭ್ಯಾಂ ನಮಃ ।
ಜ್ಯೋತಿಷ್ಟೋಮಾತ್ಮನೇ-ಕನಿಷ್ಠಿಕಾಭ್ಯಾಂ ನಮಃ ।
ಸರ್ವಕ್ರತ್ವಾತ್ಮನೇ-ಕರತಲಕರಪೃಷ್ಠಾಭ್ಯಾಂ ನಮಃ ।
ಅಗ್ನಿಹೋತ್ರಾತ್ಮನೇ-ಹೃದಯಾಯ ನಮಃ ।
ದರ್ಶಪೂರ್ಣಮಾಸಾತ್ಮನೇ-ಶಿರಸೇ ಸ್ವಾಹಾ ।
ಚಾತುರ್ಮಾಸ್ಯಾತ್ಮನೇ-ಶಿಖಾಯೈ ವಷಟ್ ।
ನಿರೂಢಪಶುಬಂಧಾತ್ಮನೇ-ಕವಚಾಯ ಹುಂ ।
ಜ್ಯೋತಿಷ್ಟೋಮಾತ್ಮನೇ ನೇತ್ರತ್ರಯಾಯ ವೌಷಟ್ ।
ಸರ್ವಕ್ರತ್ವಾತ್ಮನೇ-ಅಸ್ತ್ರಾಯ ಫಟ್ ॥
ಭೂರ್ಭುವಸ್ಸುವರೋಮಿತಿ ದಿಗ್ಬಂಧಃ ॥

## ಧ್ಯಾನಂ

ಆಪಾತಾಳನಭಸ್ಸ್ಥಲಾಂತಭುವನಬ್ರಹ್ಮಾಂಡಮಾವಿಸ್ಫುರ-
ಜ್ಜ್ಯೋತಿಸ್ಫಾಟಿಕಲಿಂಗಮೌಳಿವಿಲಸತ್ಪೂರ್ಣೇಂದುವಾಂತಾಮೃತೈಃ ।
ಅಸ್ತೋಕಾಪ್ಲುತಮೇಕಮೀಶಮನಿಶಂ ರುದ್ರಾನುವಾಕಾನ್ ಜಪನ್
ಧ್ಯಾಯೇದೀಪ್ಸಿತಸಿದ್ಧಯೇ ಧ್ರುವಪದಂ ವಿಪ್ರೋಽಭಿಷಿಂಚೇಚ್ಛಿವಂ ॥

ಬ್ರಹ್ಮಾಂಡವ್ಯಾಪ್ತದೇಹಾ ಭಸಿತಹಿಮರುಚೋ ಭಾಸಮಾನಾ ಭುಜಂಗೈಃ
ಕಂಠೇ ಕಾಲಾಃ ಕಪರ್ದಾಕಲಿತಶಶಿಕಲಾಶ್ಚಂಡಕೋದಂಡಹಸ್ತಾಃ ।
ತ್ರ್ಯಕ್ಷಾ ರುದ್ರಾಕ್ಷಭೂಷಾಃ ಪ್ರಣತಭಯಹರಾಶ್ಶಾಂಭವಾ ಮೂರ್ತಿಭೇದಾಃ
ರುದ್ರಾಃ ಶ್ರೀರುದ್ರಸೂಕ್ತಪ್ರಕಟಿತವಿಭವಾ ನಃ ಪ್ರಯಚ್ಛಂತು ಸೌಖ್ಯಂ ॥

ಶುದ್ಧಸ್ಫಟಿಕಸಂಕಾಶಂ ಶುದ್ಧವಿದ್ಯಾಪ್ರದಾಯಕಂ ।
ಶುದ್ಧಂ ಪೂರ್ಣಂ ಚಿದಾನಂದಂ ಸದಾಶಿವಮಹಂ ಭಜೇ ॥

ಅಧಿಪಃ ಸರ್ವವಿದ್ಯಾನಾಂ ಮೂಕೋಽಪಿ ಭವತಿ ಧ್ರುವಂ ।
ಜಪನ್ನೇಕಾಗ್ರಮನಸಾ ಧ್ಯಾಯನ್ದೇವಮುಮಾಪತಿಂ ॥೭॥

ವ್ಯಾಖ್ಯಾತಾ ಶ್ರುತಿಶಾಸ್ತ್ರಾಣಾಮಶ್ರುತಾನಾಂ ಚ ಜಾಯತೇ ।
ಸರ್ವಾನ್ವೇದಾನ್ಸಗೃಹ್ಣಾತಿ ಶ್ರವಣೇನೈಕದಾ ಮುನೇ ॥೮॥

---

ಓಂ ಶಂ ಚಮೇ ಮಯಶ್ಚ ಮೇ ಪ್ರಿಯಂ ಚ ಮೇಽನುಕಾಮಶ್ಚ ಮೇ ಕಾಮಶ್ಚ ಮೇ ಸೌಮನಸಶ್ಚ ಮೇ ಭದ್ರಂ ಚ ಮೇ ಶ್ರೇಯಶ್ಚ ಮೇ ವಸ್ಯಶ್ಚ ಮೇ ಯಶಶ್ಚ ಮೇ ಭಗಶ್ಚಮೇ ದ್ರವಿಣಂ ಚ ಮೇ ಯಂತಾ ಚ ಮೇ ಧರ್ತಾ ಚ ಮೇ ಕ್ಷೇಮಶ್ಚ ಮೇ ಧೃತಿಶ್ಚ ಮೇ ವಿಶ್ವಂ ಚ ಮೇ ಮಹಶ್ಚ ಮೇ ಸಂವಿಚ್ಚ ಮೇ ಜ್ಞಾತ್ರಂ ಚ ಮೇ ಸೂಶ್ಚ ಮೇ ಪ್ರಸೂಶ್ಚ ಮೇ ಸೀರಂ ಚ ಮೇ ಲಯಶ್ಚ ಮ ಋತಂ ಚ ಮೇಽಮೃತಂ ಚ ಮೇಽಯಕ್ಷ್ಮಂ ಚ ಮೇಽನಾಮಯಚ್ಚ ಮೇ ಜೀವಾತುಶ್ಚ ಮೇ ದೀರ್ಘಾಯುತ್ವಂ ಚ ಮೇಽನಮಿತ್ರಂ ಚ ಮೇಽಭಯಂ ಚ ಮೇ ಸುಗಂ ಚ ಮೇ ಶಯನಂ ಚ ಮೇ ಸೂಷಾ ಚ ಮೇ ಸುದಿನಂ ಚ ಮೇ ॥ ಓಂ ಶಾಂತಿಃ ಶಾಂತಿಃ ಶಾಂತಿಃ ॥

ಈ ನ್ಯಾಸಪೂರ್ವಕವಾಗಿ ರುದ್ರೈಕಾದಶಿನಿಯನ್ನು ಜಪಿಸಿದವನು ಮೂಕನಾದರೂ ತಾನು ನಿಶ್ಚಯವಾಗಿ ಸಕಲ ವಿದ್ಯೆಗಳಿಗೂ ಅಧಿಪತಿಯೆನಿಸುವನು. ವಿದ್ಯಾಕಾಮನು ಈ ರೀತಿ ಪರಶಿವನನ್ನು ಸೇವಿಸಬೇಕು. ॥೫-೭॥

ಹೀಗೆ ನೆಟ್ಟಮನದಿಂದ ಶ್ರೀರುದ್ರಮಂತ್ರವನ್ನು ಜಪಮಾಡುತ್ತಾ ಉಮಾರಮಣನಾದ ಮಹಾದೇವನನ್ನು ಧ್ಯಾನಮಾಡುವವನು, ತನಗೆ ಅಲ್ಲಿಯವರೆಗೆ ಗುರುಮುಖವಾಗಿ ತಿಳಿಯದಿರುವ ವೇದಶಾಸ್ತ್ರಗಳಿಗೂ ಸಹ ಸರಳಶೈಲಿಯಲ್ಲಿ ವ್ಯಾಖ್ಯಾನ ಮಾಡಬಲ್ಲವನಾಗುತ್ತಾನೆ. ಎಲೈ ಜೈಗಿಷವ್ಯಮುನಿಯೇ ಕೇಳು, ಒಂದುಬಾರಿ ಕೇಳುವುದರಿಂದಲೇ ಸಮಸ್ತ ವೇದಗಳನ್ನೂ ಅವನು ಗ್ರಹಣಮಾಡುವಷ್ಟು ಸಮರ್ಥನಾಗುತ್ತಾನೆ. ಲೋಕಪೂಜ್ಯನಾದ ಆ ವಿಶ್ವೇಶ್ವರನ ಅಪ್ಪಣೆಯಿಂದ ಎಲ್ಲೆಡೆಯಲ್ಲಿಯೂ ತಾನು ಕಲಿತ ವಿದ್ಯೆಯನ್ನು ಎಂದಿಗೂ ಮರೆಯುವುದಿಲ್ಲ. ಅಷ್ಟರಮಟ್ಟಿನ ಸ್ಮರಣಶಕ್ತಿಯೂ, ಧಾರಣಾಶಕ್ತಿಯೂ ಶಿವಾನುಗ್ರಹದಿಂದ ಲಭಿಸುವುದು. ॥೭-೮॥

ನ ವಿಸ್ಮರತಿ ಸರ್ವತ್ರ ವಿದ್ಯಾಂ ವಿಶ್ವೇಶ್ವರಾಜ್ಞಯಾ ।
ಪೀತಾಂಬರಧರೋ ನಿತ್ಯಂ ಭೂತಿಭೂಷಿತದೇಹವಾನ್ ॥೯॥

ರುದ್ರಾಕ್ಷಮಾಲಾಭರಣೋ ಲಿಂಗಂ ಮರಕತೋದ್ಭವಂ ।
ಪ್ರತಿಷ್ಠಾಪ್ಯ ಮಹಾಪೀಠೇ ಸಂಕಲ್ಪ್ಯ ಸುಸಮಾಹಿತಃ ॥೧೦॥

ಪ್ರಾಣಾಯಾಮತ್ರಯಂ ಕೃತ್ವಾಛಂದರ್ಷಿನ್ಯಾಸಪೂರ್ವಕಂ ।
ರುದ್ರೈಕಾದಶಿನೀಂ ನಿತ್ಯಂ ಪ್ರಜಪನ್ನಭಿಷೇಚಯೇತ್ ॥೧೧॥

ಪೂಜಾಂ ಬಿಲ್ವದಲೈಃ ಕುರ್ಯಾತ್ಶ್ವೇತಪದ್ಮಸಮನ್ವಿತೈಃ ।
ನೈವೇದ್ಯಂ ಶರ್ಕರಾಯುಕ್ತಂ ತ್ರಿಮಧುಪ್ಲುತಪಾಯಸಂ ॥೧೨॥

ದದ್ಯಾಚ್ಛಿವಾಯ ದೇವಾಯ ಮಾಸಷಟ್ಕಂ ದಿನೇ ದಿನೇ ।
ಏವಂ ಯಃ ಕುರುತೇ ನಿತ್ಯಂ ಷಣ್ಮಾಸಂ ವಿಜಿತೇಂದ್ರಿಯಃ ॥೧೩॥

---

ಇನ್ನು ಬಡತನದಲ್ಲಿ ಕಷ್ಟಪಡುವವನು ಐಶ್ವರ್ಯಕಾಮನೆಯಿಂದ ಶಿವಾರಾಧನೆ ಮಾಡತಕ್ಕ ಕ್ರಮವನ್ನು ನಾನು ನಿನಗೆ ಹೇಳುವೆನು ಕೇಳು. ಪ್ರತಿನಿತ್ಯವೂ ಪೀತಾಂಬರವನ್ನುಟ್ಟು ವಿಭೂತ್ಯಲಂಕೃತಗಾತ್ರನಾಗಿ ರುದ್ರಾಕ್ಷಮಾಲೆಯನ್ನಲಂಕರಿಸಿ ಕೊಂಡು ಒಂದು ದೊಡ್ಡಪೀಠದಲ್ಲಿ ಮರಕತಮಯವಾದ ಶಿವಲಿಂಗವನ್ನು ಪ್ರತಿಷ್ಠೆ ಮಾಡಿ ಉದ್ದೇಶಕ್ಕೆ ತಕ್ಕಂತೆ ಸಂಕಲ್ಪಮಾಡಿ ಸಮಾಧಾನಚಿತ್ತದಿಂದ ಮೂರು ಪ್ರಾಣಾಯಾಮಗಳನ್ನು ಮಾಡಿ, ಛಂದಸ್ಸು, ಋಷಿ ಮತ್ತು ನ್ಯಾಸಪೂರ್ವಕವಾಗಿ ಹನ್ನೊಂದು ಬಾರಿ ರುದ್ರಮಂತ್ರವನ್ನು ಪುರಶ್ಚರಣೆ ಮಾಡುತ್ತಾ ಆ ಶಿವಲಿಂಗಕ್ಕೆ ಅಭಿಷೇಕಮಾಡಬೇಕು. ॥೯-೧೦-೧೧॥

ಬಿಳಿಯಬಣ್ಣದ ತಾವರೆ ಅಂದರೆ ನೈದಿಲೆ ಹೂವುಗಳನ್ನೂ ತ್ರಿದಳಾತ್ಮಕ ಗಳಾದ ಬಿಲ್ವದಳಗಳನ್ನೂ ಪರಶಿವನಿಗೆ ಶಿವನಾಮೋಚ್ಚಾರಣಪೂರ್ವಕವಾಗಿ ಪೂಜೆ ಮಾಡಬೇಕು. ಸಕ್ಕರೆಯೊಡನೆ ಮೂರು ಮಧುಪದಾರ್ಥಗಳಿಂದ ಮಿಶ್ರಿತವಾದ (ಜೇನುತುಪ್ಪ, ಸಕ್ಕರೆ, ಹಸುವಿನ ತುಪ್ಪ) ಪಾಯಸವನ್ನು ಮಹೇಶ್ವರನಿಗೆ ನೈವೇದ್ಯ ಮಾಡಬೇಕು. ಆರು ತಿಂಗಳವರೆಗೆ ಇದೇರೀತಿ ನಿತ್ಯವೂ ಜಿತೇಂದ್ರಿಯನಾಗಿ ಮಹೇ ಶ್ವರಲಿಂಗಾರಾಧನೆ ಮಾಡಬೇಕು. ಇದರಿಂದ ದಾರಿದ್ರ್ಯಲಕ್ಷ್ಮಿಯು ತನ್ನ ಭಯಂಕರ ವಾದ ಕಲಹವನ್ನು ಬಿಟ್ಟು ಅವನ ಮನೆಯಿಂದ ದೂರ ಸರಿಯುವಳು. ಅಂದರೆ

ಅಲಕ್ಷ್ಮೀಃ ಕಲಹಾದ್ಘೋರಾದ್ದೂರಾದ್ಯಾತಿ ಚ ತದ್ಗೃಹಾತ್ ।
ಧನಧಾನ್ಯಾಕುಲಾಂ ಲಕ್ಷ್ಮೀಂ ಗಜಾಶ್ವಪಶುಸಂಯುತಾಂ ॥೧೪॥

ಅಣಿಮಾದಿಗುಣೋಪೇತಾಂ ಮಹತೀಂ ಶ್ರಿಯಮಶ್ನುತೇ ।
ಸಂತತಿವ್ಯಾಪಿನೀ ಲಕ್ಷ್ಮೀಃ ಅಚಲಾ ತಸ್ಯ ಜಾಯತೇ ॥೧೫॥

ಅಥಾತಃ ಪುತ್ರಕಾಮಾನಾಂ ವಕ್ಷ್ಯೇ ಯೋಗಾನನುತ್ತಮಾನ್ ।
ಪೂರ್ವಜನ್ಮಕೃತಾತ್ಪಾಪಾತ್ಸ್ತ್ರಿಯೋ ವಂಧ್ಯಾ ಭವಂತಿ ಹಿ ॥೧೬॥

ವಂಧ್ಯಾತ್ವಂ ಋಷಿಭಿಃ ಪ್ರೋಕ್ತಮಂಗನಾನಾಂ ಚತುರ್ವಿಧಂ ।
ಮಹಾವಂಧ್ಯಾ ಕಾಕವಂಧ್ಯಾ ಕದಲೀ ಚ ಮೃತಪ್ರಸೂಃ ॥೧೭॥

ಪುರುಷಸ್ಯಾಪಿ ವಂಧ್ಯತ್ವಂ ಚತುರ್ವಿಧಮುದೀರಿತಂ ।
ಪೂರ್ವಜನ್ಮನಿ ಸಂಸಾರವಿಚ್ಛಿತ್ತಿಃ ಪುರುಷೋ ಯದಿ ॥೧೮॥

---

ಶಾಶ್ವತವಾದ ಅಷ್ಟೈಶ್ವರ್ಯವೂ ಮಹಾದೇವನ ಕೃಪೆಯಿಂದ ಲಬ್ಧವಾಗುವುದು. ಇದರಲ್ಲಿ ಸಂಶಯವಿಲ್ಲ. ॥೧೨-೧೩॥

ಧನ, ಧಾನ್ಯಗಳೂ, ಆನೆ, ಕುದುರೆ, ಹಸು ಮುಂತಾದ ಪಶುಸಂಪತ್ತುಗಳನ್ನೂ ಅಣಿಮಾದ್ಯಷ್ಟೈಶ್ವರ್ಯಯುಕ್ತವಾದ ಅಪಾರವಾದ ನಿಧಿಗಳನ್ನೂ ಈ ವಿಧವಾದ ಉಪಾಸನೆಯಿಂದ ಪಡೆಯುವನು. ಅವನಿಗೆ ವಂಶಪಾರಂಪರ್ಯವಾಗಿ ಬರುವ ಲಕ್ಷ್ಮಿಯು ಸ್ಥಿರವಾಗಿ ಒಲಿಯುವಳು. ॥೧೪-೧೫॥

ಅಯ್ಯ ಮುನಿಯೇ, ಇನ್ನು ಮುಂದೆ ಪುತ್ರಾಪೇಕ್ಷೆಯುಳ್ಳವರು ಮಾಡಬೇಕಾದ ಉತ್ತಮವಾದ ಶಿವಭಕ್ತಿಯೋಗಗಳನ್ನು ಹೇಳುವೆನು ಕೇಳು; ಹಿಂದಿನ ಜನ್ಮದಲ್ಲಿ ಮಾಡಿದ ಮಹಾಪಾಪದ ಫಲವಾಗಿ ಹೆಂಗಸರು ಬಂಜೆಯರಾಗುತ್ತಾರೆ. ನಾರಿಯರಿಗೆ ನಾಲ್ಕು ಬಗೆಯ ಬಂಜೆತನವು ಹೇಳಲ್ಪಟ್ಟಿದೆ. ಮಹಾವಂಧ್ಯಾ, ಕಾಕವಂಧ್ಯಾ, ಕದಲೀವಂಧ್ಯಾ ಮತ್ತು ಮೃತಪ್ರಸುಗಳೆಂಬುದಾಗಿ ನಾಲ್ಕುರೀತಿಯ ಬಂಜೆತನವು ಸ್ತ್ರೀಯರಿಗೆ ಋಷಿಪ್ರೋಕ್ತವೆನಿಸಿದೆ. ॥೧೬-೧೭॥

ಇದೇ ರೀತಿ ಪುರುಷರಿಗೂ ನಾಲ್ಕುಬಗೆಯ ಬಂಜೆತನವು ಹೇಳಲ್ಪಟ್ಟಿದೆ. ಹಿಂದಿನ ಜನ್ಮದಲ್ಲಿ ತನ್ನ ನಿಜಪತ್ನಿಯನ್ನು ನಿಷ್ಕಾರಣವಾಗಿ ಪುರುಷನು ದೂರಮಾಡಿ ಅನ್ಯಾಸಕ್ತನಾದರೆ ಆಗ ಈ ಬಂಜೆತನವು ಅವನಿಗೇರ್ಪಡುವುದು. ಓ ವಿಪ್ರರೇ, ಕೇಳಿರಿ

ಯಾ ನಾರೀ ಬಾಲಕಾನ್ಹಂತಿ ಸಪತ್ನ್ಯೈಚ ವಿಷಪ್ರದಾ ।
ಸಪತ್ನ್ಯೈಗರ್ಭವಿಚ್ಛಿತ್ತಿಂ ಯಾಕರೋತ್ಯಂಗನಾ ದ್ವಿಜಾಃ ॥೧೯॥

ಚತುರ್ವಿಧೈಃ ಸಾವಂಧ್ಯಾ ಸ್ಯಾತ್ಪೂರ್ವಜನ್ಮಜದುಷ್ಕೃತಾತ್ ।
ಯೋ ವಿಪ್ರೋ ವಿಧವಾಗಂತಾ ಭಾರ್ಯಾತ್ಯಾಗಂ ಕರೋತಿ ಯಃ ॥೨೦॥

ದಾಸೀಗಂತಾ ಭವೇದ್ಯಸ್ತು ಪರನಾರೀರತಃ ಸದಾ ।
ವಿಪ್ರಬಾಲಕಹಂತಾ ಚ ವಿದ್ವತ್ಪೀಡಾಕರಃ ಸದಾ ॥೨೧॥

ಅನೇನ ಪೂರ್ವಪಾಪೇನ ವಂಧ್ಯಶುಕ್ಲೋ ನ ಸಂಶಯಃ ।
ತನ್ನಿಮಿತ್ತಂ ಪ್ರವಕ್ಷ್ಯಾಮಿ ಶೃಣುಧ್ವಂ ಮುನಿಪುಂಗವಾಃ ॥೨೨॥

ಪ್ರಾತಃ ಸ್ನಾತ್ವಾ ವಿಶುದ್ಧಾತ್ಮಾ ಶುಕ್ಲಾಂಬರಧರಃ ಶುಚಿಃ ।
ಭೂತಿಭೂಷಿತಸರ್ವಾಂಗೋ ರುದ್ರಾಕ್ಷಾಭರಣಾನ್ವಿತಃ ॥೨೩॥

---

ಯಾವ ಹೆಂಗಸು ತನ್ನ ಹೊಟ್ಟೆಯಲ್ಲಿ ಹುಟ್ಟಿದ ಮಕ್ಕಳನ್ನು ಕೊಲ್ಲುವಳೋ ಅಥವಾ ಅಸೂಯಾದಿಕಾರಣಗಳಿಂದ ಸವತಿಗೆ ವಿಷಹಾಕುವಳೋ, ಅಲ್ಲದೇ ಸವತಿಗೆ ಗರ್ಭ ವಿಚ್ಛೇದವಾಗುವಂತೆ ವಿಷಪ್ರಯೋಗಾದಿಗಳನ್ನು ನಡೆಸುವಳೋ, ಅಂತಹವಳು ಹಿಂದೆ ಹೇಳಿದ ನಾಲ್ಕುರೀತಿಯ ಬಂಜೆತನಕ್ಕೂ ಅಧೀನಳಾಗುವಳು. ॥೧೮-೧೯॥

ಈ ರೀತಿಯಾಗಿ ಹಿಂದಿನ ಜನ್ಮದಲ್ಲಿ ಮಾಡಿದ ಪಾಪಕಾರ್ಯಗಳ ಫಲವಾಗಿಯೇ ನಾರಿಯರು ಬಂಜೆಯರಾಗುವರು. ಇನ್ನು ಯಾವ ಪುರುಷನು ಸ್ವೇಚ್ಛೆಯಾಗಿ ವಿಧವೆಯ ಸಂಬಂಧಮಾಡಿ ಸ್ವಂತ ಹೆಂಡತಿಯನ್ನು ದೂರಮಾಡಿಬಿಡುವನೋ, ಯಾವನು ಭೃತ್ಯಸ್ತ್ರೀ (ದಾಸೀ) ಸಂಭೋಗಮಾಡುವನೋ. ಯಾವಾಗಲೂ ಯಾವಾತನು ಪರಸ್ತ್ರೀಲೋಲುಪನಾಗಿರುವನೋ, ಯಾವ ದುಷ್ಟನು ಬ್ರಾಹ್ಮಣರನ್ನೂ, ಮತ್ತು ಮಕ್ಕಳನ್ನು ನಿರ್ದಾಕ್ಷಿಣ್ಯದಿಂದ ಕೊಲ್ಲುವನೋ, ಯಾವ ನೀಚನು ವಿದ್ವಾಂಸರನ್ನು ಯಾವಾಗಲೂ ಪೀಡಿಸುವನೋ, ಅಂತಹ ಮಾನವನು ಈ ರೀತಿಯಾಗಿ ಹಿಂದೆ ಮಾಡಿದ ಮಹಾಪಾಪದ ಫಲವಾಗಿ ವ್ಯರ್ಥವೀರ್ಯವುಳ್ಳವನಾಗುವನು. (ಬಂಜೆತನವನ್ನು ಪಡೆಯುವನು) ಇದರಲ್ಲಿ ಸಂಶಯವಿಲ್ಲ. ॥೨೦-೨೧॥

ಮುನಿವರ್ಯರೇ, ಈ ಪಾಪಗಳ ಪರಿಹಾರರೂಪವಾದ ಪೂಜಾವಿಧಿಯೊಂದನ್ನು ಈಗ ನಿಮಗೆ ಹೇಳುತ್ತೇನೆ. ಕೇಳಿರಿ. ನಿತ್ಯವೂ ಬೆಳಗ್ಗೆ ಸ್ನಾನಮಾಡಿ, ಪರಿಶುದ್ಧ

ಬ್ರಾಹ್ಮಣಾನ್ವೇದಸಂಪನ್ನಾನ್ಶುಭ್ರವಸ್ತ್ರಾನಲಂಕೃತಾನ್ ।
ಆಹೂಯ ವರಯಿತ್ವೈಕಂ ಆಚಾರ್ಯಂ ದ್ವಿಜಪುಂಗವಂ ॥೨೪॥

ಋತ್ವಿಜೋ ವರಯೇತ್ಪಶ್ಚಾದ್ದಶಸಂಖ್ಯಾನ್ದ್ವಿಜೋತ್ತಮಾನ್ ।
ದದ್ಯಾದ್ವಾಸೋಯುಗಂ ತೇಷಾಂ ಶುಭಲಗ್ನೇ ಶುಭೇ ದಿನೇ ॥೨೫॥

ಕಾರಯೇದಭಿಷೇಕಂ ತೈರ್ಬ್ರಾಹ್ಮಣೈರ್ವೇದಪಾರಗೈಃ ।
ಏಕಾದಶದಿನೇ ಪಶ್ಚಾದ್ಬ್ರಾಹ್ಮಣಾನ್ಭೋಜಯೇದಥ ॥೨೬॥

ಅಷ್ಟಾವಿಂಶೋತ್ತರಚತುಃಶತಸಂಖ್ಯೈರನುತ್ತಮೈಃ ।
ದ್ವಾದಶೇ ದಿವಸೇ ಹೋಮಃ ಕಾರಯೇದ್ದ್ವಿಜಪುಂಗವೈಃ ॥೨೭॥

ವಸೋರ್ಧಾರಾಂ ತತಃ ಕುರ್ಯಾತ್ಪ್ರಜಪನ್ಚಮಕಂ ದ್ವಿಜಾಃ ।
ಸವತ್ಸಾ ದಶಗಾಃಕಾಂಸ್ಯದೋಹನಾದಕ್ಷಿಣಾಸ್ತತಃ ॥೨೮॥

---

ಚಿತ್ತನಾಗಿ, ಶುಭ್ರವಸ್ತ್ರದಿಂದಲಂಕೃತನಾಗಿ ಶುಚಿಯಾಗಿ ಸಕಲಾವಯವಗಳಿಗೂ ವಿಭೂತಿಯನ್ನಿಟ್ಟು ರುದ್ರಾಕ್ಷಮಾಲೆಯನ್ನು ಹಾಕಿಕೊಂಡು, ವೇದಸಂಪನ್ನರೂ, ಶುಭ್ರವಸ್ತ್ರಧಾರಿಗಳೂ ಆದ ಬ್ರಾಹ್ಮಣರನ್ನು ಕರೆಸಿ, ಅವರಲ್ಲಿ ಒಬ್ಬ ಬ್ರಾಹ್ಮಣೋತ್ತಮನನ್ನು ಆಚಾರ್ಯನನ್ನಾಗಿರುವಂತೆ ಪ್ರಾರ್ಥಿಸಿ ಉಳಿದವರಲ್ಲಿ ಹತ್ತುಮಂದಿ ವಿಪ್ರೋತ್ತಮರನ್ನು ಅನಂತರ ಋತ್ವಿಕ್ಕುಗಳನ್ನಾಗಿ ವರಣಮಾಡಬೇಕು. ॥೨೨-೨೩-೨೪॥

ಹೀಗೆ ವರಣಮಾಡಿದ ಅವರಿಗೆಲ್ಲಾ ಒಳ್ಳೆಯದಿವಸ ಶುಭಲಗ್ನದಲ್ಲಿ ಮಧುಪರ್ಕವನ್ನಿತ್ತು, ಒಂದೊಂದು ಜೊತೆ ದೀಕ್ಷಾವಸ್ತ್ರಗಳನ್ನು ಅವರಿಗೆ ಉಡಲು ಕೊಡಬೇಕು. ಅನಂತರ ವೇದಪಾರಂಗತರಾದ ಆ ಬ್ರಾಹ್ಮಣರಿಂದ ಹನ್ನೊಂದು ದಿವಸಗಳು ಶಿವಲಿಂಗಕ್ಕೆ ರುದ್ರೈಕಾದಶದಿಂದ ವಿಧಿವತ್ತಾಗಿ ಅಭಿಷೇಕಮಾಡಿಸಬೇಕು. ಹನ್ನೊಂದನೆಯ ದಿವಸ ಆ ಬ್ರಾಹ್ಮಣರಿಗೆಲ್ಲಾ ಮೃಷ್ಟಾನ್ನಭೋಜನಮಾಡಿಸಬೇಕು. ಅನಂತರ ಹನ್ನೆರಡನೆಯ ದಿವಸ ನಾನೂರಿಪ್ಪತ್ತೆಂಟು (೪೨೮) ಸಂಖ್ಯೆಯ ಉತ್ತಮರಾದ ಆ ಬ್ರಾಹ್ಮಣೋತ್ತಮರಿಂದ ರುದ್ರಹೋಮಮಾಡಿಸಬೇಕು. ಗ್ರಂಥಾಂತರಗಳಲ್ಲಿ ಹೇಳಿರುವ ಉತ್ತಮವಾದ ಹೋಮವಿಧಿಯನ್ನು ಇಲ್ಲಿ ಅವಲಂಬಿಸಬೇಕು. ॥೨೫-೨೬-೨೭॥

ಎಲೈ ವಿಪ್ರರೇ, ಆ ಮೇಲೆ ಚಮಕಮಂತ್ರವನ್ನು ಜಪಿಸುತ್ತಾ ವಸೋರ್ಧಾರಾನುವಾಕದಿಂದ ಹೋಮಮಾಡಬೇಕು. ಶಿವಪ್ರೀತ್ಯರ್ಥವಾಗಿ ಕಂಚಿನ ಕರೆಯುವ

ಆಚಾರ್ಯಾಯ ವೃಷಂ ದದ್ಯಾದಲಂಕಾರಾದಿಕಂ ಶುಭಂ ।
ರುದ್ರೈಕಾದಶಿನೀಮೇವಂ ಏಕವಿಂಶೋತ್ತರಂ ಶತಂ ॥೨೯॥

ಮಹಾರುದ್ರಮಿತಿ ಪ್ರೋಕ್ತಂ ಮಹಾಪಾತಕನಾಶನಂ ।
ಏವಂ ಕೃತೇ ನ ಸಂದೇಹೋ ವಂಧ್ಯಾತ್ವಂ ನಶ್ಯತಿ ದ್ವಿಜಾಃ ॥೩೦॥

ಮಹಾವಂಧ್ಯಾಪಿ ಲಭತೇ ತಸ್ಮಿನ್ಸಂವತ್ಸರೇ ಸುತಂ ।
ಆಯುಷ್ಮಂತಂ ಯಶಸ್ವಂತಂ ಲಕ್ಷ್ಮೀವಂತಂ ಗುಣಾನ್ವಿತಂ ॥೩೧॥

ಗೋಮೂಲ್ಯಮೇಕನಿಷ್ಕಂ ಸ್ಯಾತ್ತದರ್ಧಂ ಪಾದಮೇವ ವಾ ।
ಯದ್ಯೇಕಸ್ಮಿನ್ದಿನೇ ಕುರ್ಯುರೇಕವಿಂಶಚ್ಛತಂ ದ್ವಿಜಾಃ ॥೩೨॥

ಮಹಾರುದ್ರಮಿತಿ ಪ್ರೋಕ್ತಂ ಸರ್ವದುಷ್ಕೃತನಾಶನಂ ।
ರುದ್ರೈಕಾದಶಿನೀಂ ಜಪ್ತ್ವಾ ತದಂತೇ ಶಾಂತಿಪಂಚಕಂ ॥೩೩॥

---

ಪಾತ್ರೆಯೊಡನೆ ಹಾಲುಕೊಡುವ ಹತ್ತು ಹಸುಗಳನ್ನು ಬ್ರಾಹ್ಮಣರಿಗೆ ದಕ್ಷಿಣೆಯನ್ನಾಗಿ ಕೊಡಬೇಕು. ಆಚಾರ್ಯನಿಗೆ ಅಲಂಕಾರಾದಿಗಳಿಂದ ಮಂಗಳಕರವಾದ ವೃಷಭವೊಂದನ್ನು ದಾನಮಾಡಬೇಕು. ಈ ರೀತಿ ಒಂದುಸಾರಿ ನಡೆಸಿದರೆ ರುದ್ರಹೋಮವೆಂಬ ಹೆಸರು ಬರುವುದು. ಹೀಗೆ ನೂರಿಪ್ಪತ್ತೊಂದುಸಲ ರುದ್ರೈಕಾದಶಿನಿಯನ್ನು ಜಪಮಾಡಿಸುವದರಿಂದ ಅದು ಮಹಾರುದ್ರವೆನಿಸುವುದು. ಇದರ ಪ್ರಭಾವದಿಂದ ಮಾಡಿಸುವವನ ಮಹಾಪಾಪಗಳು ಪೂರ್ಣವಾಗಿ ನಾಶವಾಗುವುವು. ಓ ಬ್ರಾಹ್ಮಣರೆ, ಹೀಗೆ ಮಾಡಿದರೆ ಸಂದೇಹವಿಲ್ಲದೇ ಸ್ತ್ರೀಪುರುಷರ ಬಂಜೆತನವು ನಾಶವಾಗುವುದು. ॥೨೮-೨೯-೩೦॥

ಮಹಾವಂಧ್ಯೆಯೆನಿಸಿದವಳೂ ಸಹ ಈ ರೀತಿ ಮಾಡಿದರೆ ಅದೇವರ್ಷದಲ್ಲಿಯೇ ಆಯುಷ್ಮಂತನೂ, ಯಶಸ್ವಿಯೂ, ಐಶ್ವರ್ಯವಂತನೂ ಮತ್ತು ಗುಣಶಾಲಿಯೂ ಆದ ಉತ್ತಮಕುವರನನ್ನು ಪಡೆಯುವಳು. ಹಸುವಿನ ಬೆಲೆಯು ಒಂದು ನಿಷ್ಕವು. ಅರ್ಧನಿಷ್ಕ ಅಥವಾ ಕಾಲು ನಿಷ್ಕವಾದರೂ ಆಗಬಹುದು. ಓ ವಿಪ್ರರೇ, ಒಂದೇ ದಿವಸದಲ್ಲಿಯೇ ನೂರಿಪ್ಪತ್ತೊಂದು ಸಲ ರುದ್ರೈಕಾದಶಮಂತ್ರವನ್ನು ಜಪಮಾಡುವುದಾದರೆ ಆಗ ಸಮಸ್ತಪಾಪಗಳನ್ನೂ ನಾಶಮಾಡುವ ಮಹಾರುದ್ರವೆನಿಸುವುದು. ॥೩೧-೩೨॥

ರುದ್ರೈಕಾದಶಿನಿಯನ್ನು ಜಪಿಸಿ, ಆ ಮೇಲೆ ಶಾಂತಿಪಂಚಕಮಂತ್ರಗಳನ್ನೂ

ತದಂತೇ ಪೌರುಷಂ ಸೂಕ್ತಂ ನಾರಾಯಣಮತಃ ಪರಂ ।
ಪಂಚಬ್ರಹ್ಮಮಹಾಮಂತ್ರಾಸ್ತ್ವರಿತಂ ರುದ್ರಮಪ್ಯಥ ॥೩೪॥

ತ್ರಿಯಂಬಕಮಹಾಮಂತ್ರಂ ಯೋ ರುದ್ರಮಿತಿ ಮಂತ್ರಕಂ ।
ಸರ್ವೋ ವಾ ಇತಿ ವಿದ್ಯಾಸ್ಯಾತ್ಕದ್ರುದ್ರಾಯೇತ್ಯತಃ ಪರಂ ॥೩೫॥

ನಮೋ ಹಿರಣ್ಯಮಂತ್ರಂ ಚ ತ್ವರಿತಂ ರುದ್ರಮೀರಿತಂ।
ಏತಜ್ಜಪೇನ ಸಾಂಗಂ ಸ್ಯಾದ್ರುದ್ರೈಕಾದಶಿನೀಜಪಃ ॥೩೬॥

ತ್ರಿವಾರಂ ಯೋ ಮಹಾರುದ್ರಂ ಕಾರಯೇದ್ಬ್ರಾಹ್ಮಣೋತ್ತಮೈಃ ।
ವಿನಾಶಯತ್ಯಸೌ ಸ್ತ್ರೀಣಾಂ ವಂಧ್ಯತ್ವಂ ಚ ಚತುರ್ವಿಧಂ ॥೩೭॥

ಪುರುಷಸ್ಯಾಪಿ ವಂಧ್ಯತ್ವಂ ವಿನಶ್ಯತಿ ನ ಸಂಶಯಃ ।
ಅಚಿರಾತ್ಪುತ್ರಮಾಪ್ನೋತಿ ಹ್ಯಾಯುಷ್ಮಂತಂ ಯಶಸ್ವಿನಂ ॥೩೮॥

ಕಾರಯೇದತಿರುದ್ರಂ ಯೋ ಬ್ರಾಹ್ಮಣೈರ್ವೇದಪಾರಗೈಃ ।
ತದಂತೇ ಹವನಂ ಕುರ್ಯಾಲ್ಲಕ್ಷಸಂಖ್ಯಂ ದ್ವಿಜೋತ್ತಮಾಃ ॥೩೯॥

---

ಪುರುಷಸೂಕ್ತವನ್ನೂ, ಆ ಮೇಲೆ ನಾರಾಯಣಸೂಕ್ತವನ್ನೂ, ಪಂಚಬ್ರಹ್ಮಮಹಾಮಂತ್ರಗಳನ್ನೂ, ತ್ವರಿತವಾದ ರುದ್ರಮಂತ್ರವನ್ನೂ ಜಪಮಾಡಬೇಕು. 'ತ್ರಿಯಂಬಕಂ' ಎಂಬ ಮಹಾಮಂತ್ರವೂ, 'ಯೋ ರುದ್ರೋ ಅಗ್ನೌ' ಎಂಬ ಮಂತ್ರವೂ, 'ಸರ್ವೋವಾ' ಎಂಬುವೂ, 'ಕದ್ರುದ್ರಾಯ' ಎಂಬ ಮಂತ್ರವೂ, ಅನಂತರ 'ನಮೋ ಹಿರಣ್ಯಬಾಹವೆ' ಎಂಬ ಮಂತ್ರವೂ ಸೇರಿ ತ್ವರಿತರುದ್ರವೆನಿಸುವುದು. ಈ ಮಂತ್ರಗಳ ಜಪದಿಂದ ರುದ್ರೈಕಾದಶಿನೀ ಜಪವು ಸಾಂಗವಾಗುವುದು. ||೩೩.೩೪-೩೫-೩೬||

ಬ್ರಾಹ್ಮಣೋತ್ತಮರಿಂದ ಮೂರುಸಲ ಮಹಾರುದ್ರವನ್ನು ಮಾಡಿಸುವಾತನು ನಾರಿಯರ ನಾಲ್ಕುವಿಧವಾದ ಬಂಜೆತನವನ್ನೂ ನಾಶಮಾಡುವನು. ಅಲ್ಲದೆ, ಪುರುಷನ ಬಂಜೆತನವೂ ಅದರಿಂದ ನಾಶವಾಗುವುದರಲ್ಲಿ ಸಂಶಯವಿಲ್ಲ. ಜಾಗ್ರತೆಯಾಗಿಯೇ ಆಯುಷ್ಮಂತನೂ, ಯಶಸ್ವಿಯೂ ಆದ ಮಗನನ್ನು ಪಡೆಯುತ್ತಾನೆ. ||೩೭-೩೮||

ವೇದಪಾರಂಗತರಾದ ಬ್ರಾಹ್ಮಣರ ಮೂಲಕ ಅತಿರುದ್ರಮಾಡಿಸುವವನು ಕೊನೆಯಲ್ಲಿ ಲಕ್ಷಹೋಮಮಾಡಿಸಬೇಕು. ಓ ವಿಪ್ರೋತ್ತಮರೇ, ಹೀಗೆ ಹೋಮ

ಧೇನೂನಂ ಶತಕಂ ದದ್ಯಾದಾಚಾರ್ಯಾಯವೃಷತ್ರಯಂ ।
ವೃಷಾಭಾವೇ ತ್ರಿನಿಷ್ಕಂ ಸ್ಯಾನ್ಮೂಲ್ಯಂ ಕನಕಮೀರಿತಂ ॥೪೦॥

ಧೇನ್ವಭಾವೇ ತಥಾನಿಷ್ಕಂ ಸ್ವರ್ಣಮೇಕಮುದೀರಿತಂ ।
ಬ್ರಾಹ್ಮಣಾನ್ಭೋಜಯೇತ್ಪಶ್ಚಾದ್ದಶಸಾಹಸ್ರಮಾದರಾತ್ ॥೪೧॥

ಏವಂ ಯಃ ಕುರುತೇ ವಿಪ್ರ ಅತಿರುದ್ರಮಹೋದಯಂ ।
ಸರ್ವಪಾಪಾನಿ ನಶ್ಯಂತಿ ಕೋಟಿಜನ್ಮಾರ್ಜಿತಾನ್ಯಪಿ ॥೪೨॥

ಆಯುಃ ಶ್ರೀಃ ಕೀರ್ತಿಸಂಯುಕ್ತಾನ್ ಪುತ್ರಪೌತ್ರಾನನುತ್ತಮಾನ್ ।
ಅವಾಪ್ಯ ಸಕಲಾನ್ಭೋಗಾನ್ಲೀಯತೇ. ಪರಮೇ ಶಿವೇ ॥೪೩॥

ಅಶಕ್ತಶ್ಚೇತ್ಸ್ವಯಂ ನಿತ್ಯಂ ರುದ್ರೈಕಾದಶಿನೀಂ ಜಪೇತ್ ।
ವತ್ಸರಾಲ್ಲಭತೇ ಪುತ್ರಮಾಯುಷ್ಮಂತಂ ಯಶಸ್ವಿನಂ ॥೪೪॥

---

ಮುಗಿದ ಮೇಲೆ ತೊಂಬತ್ತೊಂಬತ್ತು ಹಸುಗಳನ್ನೂ ಮೂರು ವೃಷಭಗಳನ್ನೂ ಆಚಾರ್ಯನಿಗೆ ದಾನಮಾಡಬೇಕು. ವೃಷಭ ದೊರೆಯದಿದ್ದರೆ ಅದರ ಬೆಲೆಯು ಮೂರು ನಿಷ್ಕರೂಪವಾದ ಸುವರ್ಣವೆಂದು ಹೇಳಲ್ಪಟ್ಟಿದೆ. ॥೩೯-೪೦॥

ಹಾಗೆಯೇ ಹಸುವಿಲ್ಲದಿದ್ದರೂ ಒಂದೊಂದು ಹಸುವಿಗೆ ಒಂದೊಂದು ನಿಷ್ಕ ಪ್ರಮಾಣ ಸುವರ್ಣಕೊಡಬಹುದೆಂದು ಹೇಳಿದೆ. ಎಲ್ಲಾ ಮುಗಿದ ಮೇಲೆ ಹತ್ತು ಸಾವಿರ ಬ್ರಾಹ್ಮಣರಿಗೆ ಆದರದಿಂದ ಭೋಜನಮಾಡಿಸಬೇಕು. ಹೀಗೆ ಅತಿರುದ್ರ ಮಹೋದಯುವನ್ನು ಮಾಡುವ ಬ್ರಾಹ್ಮಣನ ಕೋಟಿಜನ್ಮಗಳಿಂದ ಸಂಪಾದಿಸಿದ್ದ ಸಕಲ ಪಾಪಗಳೂ ತಪ್ಪದೇ ನಾಶವಾಗುವುವು. ॥೪೧-೪೨॥

ಆಯುಸ್ಸು, ಸಂಪತ್ತು ಮತ್ತು ಕೀರ್ತಿ ಇವುಗಳುಳ್ಳ ಉತ್ತಮರೆನಿಸಿದ ಪುತ್ರ ಪೌತ್ರರನ್ನು ಹೊಂದಿ ಇಹದಲ್ಲಿ ಸಕಲ ಭೋಗಗಳನ್ನೂ ಪಡೆದು, ಕೊನೆಗೆ ಪರಶಿವ ನಲ್ಲಿ ಐಕ್ಯನಾಗುತ್ತಾನೆ. ಇಷ್ಟುಮಾಡಲು ಶಕ್ತಿಯಿಲ್ಲದವನಾದರೆ ತಾನೇ ಸ್ವಂತ ಪ್ರತಿದಿನವೂ ರುದ್ರೈಕಾದಶಿನಿಯನ್ನು ಜಪಮಾಡಬೇಕು. ಒಂದು ವರ್ಷ ಹೀಗೆ ಜಪಮಾಡುವುದರಲ್ಲಿ ಆಯುಷ್ಮಂತನೂ, ಯಶಸ್ವಿಯೂ ಆದ ಪುತ್ರನನ್ನು ಪಡೆಯು ತ್ತಾನೆ. ॥೪೩-೪೪॥

ಘರ್ಮಾರ್ಭಿಷೇಕಂ ಯಃ ಕುರ್ಯಾಚ್ಛಿವಸ್ಯ ಪರಮೇಷ್ಠಿನಃ ।
ಸರ್ವಪಾಪವಿನಿರ್ಮುಕ್ತೋ ಸಂಪ್ರಾಪ್ಯ ಶುಭಸಂಪದಂ ॥೪೫॥

ಕೈಲಾಸೇ ಶಿವಸಾನ್ನಿಧ್ಯೇ ವಸತ್ಯಂತೇ ನ ಸಂಶಯಃ ।
ನಾರಿಕೇಲೋದಕೇನೈವ ಹ್ಯಭಿಷೇಕಂ ಕರೋತಿ ಯಃ ॥೪೬॥

ಸಲಬ್ಧ್ವಾ ಮಹತೀಂ ಲಕ್ಷ್ಮೀಮಾಯುಷ್ಮತ್ಪುತ್ರಪೌತ್ರಕಾನ್ ।
ಮೇಧಾಂ ಪ್ರಜ್ಞಾಂ ತದಂತೇ ತು ಶಿವಸಾನ್ನಿಧ್ಯಮಶ್ನುತೇ ॥೪೭॥

ಯಃ ಕುರ್ಯಾನ್ಮಧುನಾ ಶಂಭೋರಭಿಷೇಕಂ ದ್ವಿಜೋತ್ತಮಾಃ ।
ಸ ಪುತ್ರಪೌತ್ರಾನಚಲಾಂ ಲಕ್ಷ್ಮೀಂ ವಿದ್ಯಾಂ ಯಶಸ್ತಥಾ ॥೪೮॥

ಅವಾಪ್ಯ ಶಿವಸಾನ್ನಿಧ್ಯೇ ರಮತೇ ನಾತ್ರ ಸಂಶಯಃ ।
ಘೃತಾಭಿಷೇಕಂ ಯಃ ಕುರ್ಯಾಚ್ಛಿವಸ್ಯ ಪರಮಾತ್ಮನಃ ॥೪೯॥

ಸ ಬ್ರಹ್ಮವರ್ಚಸಂ ಪ್ರಜ್ಞಾಂ ಲಕ್ಷ್ಮೀಂ ಪುತ್ರಾನವಾಪ್ನುಯಾತ್ ।
ಇಕ್ಷೂದಕೇನಾಭಿಷೇಕಂ ಯಃ ಕುರ್ಯಾತ್ಪರಮಾತ್ಮನಃ ॥೫೦॥

---

ಸರ್ವೋತ್ತಮನಾದ ಶಿವನಿಗೆ ಬಿಸಿನೀರಿನಿಂದ ಅಭಿಷೇಕಮಾಡುವವನು ಸಕಲ ಪಾಪಗಳಿಂದಲೂ ಮುಕ್ತನಾಗಿ ಮಂಗಳಕರವಾದ ಸಂಪತ್ತನ್ನು ಪಡೆದು ಕೊನೆಯಲ್ಲಿ ಕೈಲಾಸವನ್ನು ಹೊಂದಿ ಅಲ್ಲಿ ಶಿವಸಾನ್ನಿಧ್ಯದಲ್ಲಿಯೇ ವಾಸಮಾಡುವುದರಲ್ಲಿ ಸಂದೇಹವೇ ಇಲ್ಲ. ಎಳನೀರಿನಿಂದಲೇ ಅಭಿಷೇಕಮಾಡುವವನು ತುಂಬಾ ಐಶ್ವರ್ಯವನ್ನು ಪಡೆದು, ಆಯುಷ್ಮಂತರಾದ ಪುತ್ರಪೌತ್ರರನ್ನೂ ಹೊಂದಿ ವಿದ್ಯಾಬುದ್ಧಿಗಳನ್ನು ಪಡೆದು ಕೊನೆಯಲ್ಲಿ ಶಿವಸಾನ್ನಿಧ್ಯವನ್ನೈದುವನು. ॥೪೫-೪೬-೪೭॥

ಓ ವಿಪ್ರವರ್ಯರೇ, ಜೇನುತುಪ್ಪದಿಂದ ಶಂಭುವಿಗೆ ಅಭಿಷೇಕಮಾಡುವವನು ಪುತ್ರಪೌತ್ರರನ್ನೂ, ಸ್ಥಿರವಾದ ಸಂಪತ್ತನ್ನೂ ವಿದ್ಯೆ ಮತ್ತು ಕೀರ್ತಿಗಳನ್ನೂ ಸಂಪಾದಿಸಿ ಕೊನೆಗೆ ಶಿವಸಾನ್ನಿಧ್ಯದಲ್ಲಿಯೇ ವಿಹರಿಸುವುದರಲ್ಲಿ ಸಂದೇಹವೇ ಇಲ್ಲ. ಪರಮಾತ್ಮನಾದ ಶಿವನಿಗೆ ತುಪ್ಪದ ಅಭಿಷೇಕವನ್ನು ಮಾಡುವವನು ಬ್ರಹ್ಮವರ್ಚಸ್ಸು, ಪ್ರಜ್ಞೆ, ಐಶ್ವರ್ಯ ಮತ್ತು ಮಕ್ಕಳನ್ನು ಶಾಶ್ವತವಾಗಿರುವಂತೆ ಪಡೆಯುವನು. ॥೪೮-೪೯॥

ಕಬ್ಬಿನ ಹಾಲಿನಿಂದ ಆ ಪರಮಾತ್ಮನಿಗೆ ಅಭಿಷೇಕಮಾಡುವವನು ಮಕ್ಕಳು ಮೊಮ್ಮಕ್ಕಳನ್ನು ಹೊಂದಿ ಶಾಶ್ವತವಾದ ಸಂಪತ್ತನ್ನೂ ವಿದ್ಯೆಯನ್ನೂ ಪಡೆದು

ಸ ಪುತ್ರಪೌತ್ರಾನಾಸಾದ್ಯ ವಿದ್ಯಾಂ ಲಕ್ಷ್ಮೀಮಚಂಚಲಾಂ ।
ಕೈಲಾಸೇ ಶಿವಸಾನ್ನಿಧ್ಯೇ ರಮತೇ ನಾತ್ರ ಸಂಶಯಃ ॥೫೧॥

ಆಮ್ರೋದಕೇನಾಭಿಷೇಕಂ ಯಃ ಕರೋತಿ ಜಿತೇಂದ್ರಿಯಃ ।
ಸ ಸರ್ವಪಾತಕೈರ್ಮುಕ್ತಃ ಪುತ್ರಾನ್ವಿದ್ಯಾನ್ಮಹಚ್ಛ್ರಿಯಂ ॥೫೨॥

ಅವಾಪ್ಯ ಶಿವಸಾರೂಪ್ಯಂ ಲಭತೇ ನಾತ್ರ ಸಂಶಯಃ
ಶುದ್ಧೋದಕೇನಾಭಿಷೇಕಂ ಶಿವಸ್ಯ ಕುರುತೇ ಯದಿ ।
ಸ ಸರ್ವಾಭೀಷ್ಟಮಾಸಾದ್ಯ ಶಿವಸಾಯುಜ್ಯಮಶ್ನುತೇ ॥೫೩॥

ಸದ್ರಾಜರಾಜಿತಜಟಂ ಸ್ವಕಹೃತ್ಸರೋಜೇ
ರಾಜೀವವತ್ಸುಪದಮಾನಸರುದ್ರಜಾಪಿ ।
ಪಾಪಂ ನಿರಸ್ಯ ಚಿರಜಂ ವಿರಜೋ ಭವೇತ
ಮದ್ರಾಜತೋತ್ತಮನಗೇ ಸ ಭವೇದ್ಗಣೇಂದ್ರಃ ॥೫೪॥

---

ಕೊನೆಗೆ ಕೈಲಾಸದಲ್ಲಿ ಶಿವನ ಸಾನ್ನಿಧ್ಯದಲ್ಲಿ ವಿಹರಿಸುವುದರಲ್ಲಿ ಸಂದೇಹವಿಲ್ಲ. ಜಿತೇಂದ್ರಿಯನಾದ ಯಾವನು ಮಾವಿನಹಣ್ಣಿನ ರಸದಿಂದ ಶಿವನಿಗೆ ಅಭಿಷೇಕ ಮಾಡುವನೋ ಅವನು ಸಮಸ್ತ ಪಾಪಗಳಿಂದಲೂ ಮುಕ್ತನಾಗಿ ಮಕ್ಕಳನ್ನೂ ವಿದ್ಯೆ ಮತ್ತು ಅಪಾರವಾದ ಸಂಪತ್ತನ್ನೂ ಹೊಂದಿ ಕೊನೆಗೆ ಶಿವಸಾರೂಪ್ಯವನ್ನು ಹೊಂದುವುದರಲ್ಲಿ ಅನುಮಾನವಿಲ್ಲ. ॥೫೦-೫೧-೫೨॥

ಪರಿಶುದ್ಧವಾದ ನೀರಿನಿಂದ ಶಿವನಿಗೆ ಅಭಿಷೇಕಮಾಡುವುದಾದರೆ ಅವನು ಸಕಲ ಇಷ್ಟಾರ್ಥಗಳನ್ನೂ ಹೊಂದಿ ಅನಂತರ ಕೊನೆಯಲ್ಲಿ ಶಿವಸಾಯುಜ್ಯವನ್ನು ಪಡೆಯುತ್ತಾನೆ. ॥೫೩॥

ಪಾರ್ವತಿಯೇ, ತನ್ನ ಹೃದಯಕಮಲದಲ್ಲಿ ಚಂದ್ರಚೂಡನಾಗಿ ತಾವರೆಯಂತೆ ಮೃದುಪಾದಗಳುಳ್ಳ ನನ್ನನ್ನು ಧ್ಯಾನಿಸಿ, ಮನಸ್ಸಿನಲ್ಲಿ ಶ್ರೀರುದ್ರಜಪಮಾಡುವವನು ಬಹಳ ಕಾಲದಿಂದ ಬಂದಿರುವ ಪಾಪಸಂಚಯವನ್ನು ಕಳೆದುಕೊಂಡು ಮುಕ್ತನಾಗಿ, ನನ್ನ ರಜತಾದ್ರಿಯನ್ನು ಸೇರಿ ಅಲ್ಲಿ ಅವನು ಗಣಾಧಿಪನೆನಿಸುವನು. ಎಂದು ಪರ ಶಿವನು ಪಾರ್ವತಿಗೆ ತಿಳಿಸಿದನು. ॥೫೪॥

ರುದ್ರಾ ತಿರುದ್ರಶತರುದ್ರಮಹಾತಿರುದ್ರ
ಏಕಾದಶಾವೃತಿಪರೋ ಜಪತೋ ಹಿ ರುದ್ರಃ।
ಹೋಮಾರ್ಚನಾಸು ನಿಯತೋ ಜಪತಾಂ ವಿಮುಕ್ತ್ಯೈ
ಭೂಯಾಚ್ಚ ಶಾಂಭವವರೇಷು ವಿನಿಶ್ಚಯೇನ ॥೫೫॥

ಇತಿ ಶ್ರೀ ಶಿವರಹಸ್ಯೇ ದಶಮಾಂಶೇ ಕಾಮ್ಯ ರುದ್ರಾಭಿಷೇಕವಿಧಿ
ಪ್ರದರ್ಶನಂ ನಾಮ ತ್ರಿಂಶೋಽಧ್ಯಾಯಃ

---

ಶ್ರೀರುದ್ರ, ಅತಿರುದ್ರ, ಶತರುದ್ರ, ಮಹಾತಿರುದ್ರ, ಏಕಾದಶರುದ್ರಮಂತ್ರಗಳ ನಿಯಮದಿಂದ ಜಪಮಾಡುತ್ತಾ ಹೋಮ ಮತ್ತು ಪೂಜೆಗಳಲ್ಲಿ ಅದನ್ನು ವಿನಿಯೋಗಿಸುವವನು ಶ್ರೀರುದ್ರದೇವನ ಪ್ರೀತಿಗೆ ಪಾತ್ರನಾಗುವನು. ಅಲ್ಲದೆ ಪರಶಿವನು ಹಾಗೆ ಜಪಮಾಡುವವರ ಮುಕ್ತಿಗೋಸ್ಕರ ಶೈವವರ್ಯರಲ್ಲಿ ಯಾವಾಗಲೂ ಸಂಶಯವಿಲ್ಲದೆ ಸನ್ನಿಹಿತನಾಗಿದ್ದು ಮುಕ್ತಿಪ್ರದನಾಗುವನೆಂದು ಕುಮಾರಸ್ವಾಮಿಯು ಜೈಗೀಷವ್ಯನಿಗೆ ಹೇಳಿದನು. ॥೫೫॥

ಇಲ್ಲಿಗೆ ಶ್ರೀಶಿವರಹಸ್ಯದ ಹತ್ತನೆಯ ಅಂಶದಲ್ಲಿ ಕಾಮ್ಯವಾದ ರುದ್ರಾಭಿಷೇಕವಿಧಿಯ
ಪ್ರದರ್ಶನವೆಂಬ ಮೂವತ್ತನೆಯ ಅಧ್ಯಾಯವು ಮುಗಿದುದು.

## ಈ ಗ್ರಂಥಭಾಗದ ಮುಖ್ಯ ಸಾರಾಂಶ

ಭಸ್ಮ ಮತ್ತು ರುದ್ರಾಕ್ಷಗಳ ಮಹಿಮೆ, ಅವುಗಳನ್ನು ಧರಿಸುವ ಕ್ರಮ, ರುದ್ರಾಕ್ಷಿವೃಕ್ಷಗಳು ಭೂಲೋಕದಲ್ಲಿ ಉತ್ಪನ್ನವಾದ ಬಗೆ, ರುದ್ರಾಕ್ಷಿಯ ಭೇದಗಳು, ಅದನ್ನು ಧರಿಸುವುದರಿಂದ ಲಭಿಸುವ ಫಲನಿರೂಪಣೆ, ಯಜುರ್ವೇದದಲ್ಲಿ ಪ್ರಸಿದ್ಧವಾಗಿರುವ ರುದ್ರಾಧ್ಯಾಯ ಮತ್ತು ಚಮಕಾಧ್ಯಾಯಗಳ ಸ್ವರೂಪ, ಶತರುದ್ರಮಂತ್ರಗಳ ವಿಭಾಗ, ಪ್ರತ್ಯೇಕಪ್ರತ್ಯೇಕವಾಗಿ ಆಯಾ ಮಂತ್ರಗಳ ಋಷಿದೇವತಾಛಂದಸ್ಸುಗಳ ಹೆಸರುಗಳು, ಶಿವಲಿಂಗಕ್ಕೆ ಮಾಡುವ ರುದ್ರಾಭಿಷೇಕವಿಧಿ, ಶ್ರೀರುದ್ರ, ಏಕಾದಶರುದ್ರ, ಮಹಾರುದ್ರ, ಅತಿರುದ್ರಗಳ ಸ್ವರೂಪ, ಕಾಮ್ಯಭೇದದಿಂದ ಅಭಿಷೇಕಕ್ರಮವಿಭಾಗ, ಈ ಅಂಶಗಳು ಈ ಭಾಗದಲ್ಲಿ ವಿಸ್ತಾರವಾಗಿ ವರ್ಣಿತವಾಗಿವೆ.

